# ಛಾಂದೋಗ್ಯೋಪನಿಷತ್

( ಸರಳ ಕನ್ನಡ ಭಾಷಾಂತರ, ಸಾರಾಂಶ ಇತ್ಯಾದಿ )

ಲೇಖಕರು :

**ರಂಗನಾಥ ರಾಮಚಂದ್ರ ದಿವಾಕರ**

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

# ಮುನ್ನುಡಿ

'ಉಪನಿಷತ್ಪ್ರಕಾಶ' ಎಂಬ ಹೆಸರಿನಿಂದ ಈಶಾದಿ ಎಂಟು ಉಪನಿಷತ್ತುಗಳ ಅನುವಾದವನ್ನು ನಾನು ಪ್ರಕಟಿಸಿ ಅನೇಕ ವರುಷಗಳಾಗಿ ಹೋದವು. ಐದರಷ್ಟು ಅದರ ಆವೃತ್ತಿಗಳೂ ಆಗಿ ಆ ಗ್ರಂಥದ ಲೋಕಪ್ರಿಯತೆಯನ್ನು ಸಿದ್ಧಪಡಿಸಿದವು. ಅದರ ಪ್ರಕಾಶನದ ಪ್ರಥಮ ದಿನದಿಂದಲೆ, ಛಾಂದೋಗ್ಯ ಬೃಹದಾರಣ್ಯಕಗಳನ್ನು ಯಾವಾಗ ಪ್ರಕಟಿಸುವಿರಿ, ಎಂದು ಅನೇಕ ವಾಚಕರು ನನ್ನನ್ನು ಕೇಳುತ್ತಲೆ ಇರುವರು. ಹೋದ ವರುಷ ಕಿನ್ನಾಳ (ಕೊಪ್ಪಳ ಜಿಲ್ಲೆ)ದ ಮಹಾಶಯರೊಬ್ಬರು ಅವುಗಳ ಅಚ್ಚಿಗೆ ತಗಲಬಹುದಾದ ಹಣವನ್ನೆಲ್ಲ ಕೂಡ ಕೊಡಮಾಡಿದರು ! ಅವುಗಳ ಅನುವಾದವನ್ನು ನಾನು ಮಾಡಿಟ್ಟು ಸಹ ೧೦-೧೨ ವರುಷಗಳಾಗಿ ಹೋದವು. ಆದರೆ ಅದೃಷ್ಟವಶಾತ್ ಕಾರಣಾಂತರಗಳಿಂದ ಈ ವರೆಗೆ ಅವುಗಳ ಕನ್ನಡ ಅನುವಾದವು ಅಚ್ಚಾಗದೆ ಹಾಗೆಯೆ ಉಳಿದಿರುವದು. ಈಗ ಅವುಗಳ ಪ್ರಕಟನೆಯ ಸುಸಂಧಿಯು ಬಂದಿದೆ ಎಂದು ಹೇಳಬಹುದು. ಯಾಕಂದರೆ ಈಗ ಅವೆರಡರಲ್ಲಿ ಒಂದಾದ ಛಾಂದೋಗ್ಯದ ಅನುವಾದವನ್ನು ಕನ್ನಡಿಗರ ಕೈಯಲ್ಲಿ ಕೊಡುವ ಭಾಗ್ಯವನ್ನು ನಾನು ಪಡೆಯುತಿರುವೆ. ಬೃಹದಾರಣ್ಯಕದ ಅನುವಾದವು ಸಹ ಅಚ್ಚಿನಲ್ಲಿದೆ ಎಂದು ಹೇಳಲು ನನಗೆ ಬಹಳ ಸಂತೋಷವಾಗುತ್ತಿದೆ. ಅದಾದರೂ ಬೇಗನೆ ವಾಚಕರ ಕೈಸೇರಬಹುದು.

ಮೊಟ್ಟಮೊದಲು ಉಪನಿಷತ್ತುಗಳನ್ನು ಕನ್ನಡಿಸಬೇಕೆಂಬ ಸಂಕಲ್ಪ ಮಾಡಿದ ದಿನವೆ ಮುಖ್ಯವೆಂದೆನಿಸಿದ ಹಾಗೂ ಪ್ರಸ್ಥಾನತ್ರಯಿಯಲ್ಲಿ (ದಶೋಪನಿಷತ್ತು, ಬ್ರಹ್ಮಸೂತ್ರಗಳು ಹಾಗೂ ಗೀತೆ) ಆದಿಮಸ್ಥಾನ ಪಡೆದ ಈಶ, ಕೇನ, ಕಠ, ಮಾಂಡೂಕ್ಯ, ಪ್ರಶ್ನ, ಮುಂಡಕ, ಐತರೇಯ, ತೈತ್ತಿರೀಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಈ ಹತ್ತು ಉಪನಿಷತ್ತುಗಳನ್ನು ಆದಷ್ಟು ಬೇಗ ಕನ್ನಡಿಸಿ ಕರ್ನಾಟಕದ ಬಂಧುಭಗಿನಿಯರ ಕೈಯಲ್ಲಿ ಕೊಡಬೇಕೆಂದು ನಿಶ್ಚಯಿಸಿದೆನು. ಹೀಗಿದ್ದರೂ ಈ ಎರಡು ಎಲ್ಲಕ್ಕೂ ದೊಡ್ಡ ಹಾಗೂ ಅತ್ಯಂತ ಮಹತ್ವದ ಉಪನಿಷತ್ತುಗಳನ್ನು ಪ್ರಕಟಿಸಲು ಇಷ್ಟು ತಡವಾದುದಕ್ಕೆ ನಾನು ವಾಚಕರ ಕ್ಷಮೆ ಬೇಡಬೇಕಾಗಿದೆ.

ನಾನು ಮೊದಲು ಈ ಕೆಲಸವನ್ನು ಕೈಕೊಂಡ ಕಾಲ ಹಾಗೂ ಈಗಿನ ಕಾಲ ಇವುಗಳಲ್ಲಿ ಅನೇಕ ದೃಷ್ಟಿಯಿಂದ ಮಹದಂತರವಾಗಿದೆ. ನಾವು ಈಗ ನಮ್ಮ ಸ್ವಶಕ್ತಿಯಿಂದ ಹಾಗೂ ಭಾರತದ್ದೇ ಆದ ಒಂದು ವಿಶಿಷ್ಟ ತರಹದ ಅಹಿಂಸಾಮಾರ್ಗದಿಂದ ಪೂರ್ಣ ರಾಜಕೀಯ ಸ್ವಾತಂತ್ರ್ಯವನ್ನು ಪಡೆದಿರುವೆವು. ಆದುದರಿಂದ ಲುಪ್ತವಾಗಿ ಹೋದ ನಮ್ಮ ಸ್ವಾಭಿಮಾನ ಹಾಗೂ ಸುಪ್ತವಿದ್ದ ಆತ್ಮವಿಶ್ವಾಸ ಇವು ಈಗ ಜಾಗ್ರತವಾಗಿವೆ. ನಮ್ಮ ಸಂಸ್ಕೃತಿ, ಪರಂಪರೆ, ಜೀವನಮಾರ್ಗ ಇವುಗಳಿಗೆ ಒಂದು ಬಗೆಯ ಹೊಸ ಕಳೆ ಕಟ್ಟಿದೆ. ಸಾವಿರಾರು ವರುಷ ಬದುಕಿ ಬಾಳಿ ತನ್ನದೇ ಆದ ಒಂದು ಪದ್ಧತಿಯಿಂದ ಬೆಳೆದು ಬಂದ ಈ ಸಂಸ್ಕೃತಿಪ್ರವಾಹದಲ್ಲಿಯೂ ಒಂದು ಪ್ರಚಂಡ ಶಕ್ತಿಯಿದೆ ಎಂಬ ಅರಿವು ನಮ್ಮವರಿಗಷ್ಟೇ ಅಲ್ಲ, ಜಗತ್ತಿಗೂ ಪುನಃ ಒಮ್ಮೆ ಆಗಲಾರಂಭಿಸಿದೆ. ಭಾರತ, ಭಾರತದ ಜನರು, ಭಾರತದ ಇತಿಹಾಸ, ಭಾರತದ ಸಂಸ್ಕೃತಿ, ಭಾರತದ ಭವಿಷ್ಯ ಇವುಗಳತ್ತ ಜಗತ್ತಿನ ಜನರು ಕಣ್ಣೆತ್ತಿ ನೋಡತೊಡಗಿದ್ದಾರೆ. ವಿಶೇಷತಃ ಉಪನಿಷತ್ತುಗಳು, ಗೀತೆ, ವೇದಾಂತಶಾಸ್ತ್ರ ಇವುಗಳ ಮಹತ್ವದತ್ತ ಎಲ್ಲರ ಮನಸು ಆಕೃಷ್ಟವಾಗಿದೆ.

ಹಿಂದಕ್ಕಿಂತಲೂ ಇವುಗಳ ಮಹತ್ವವನ್ನು ಕುರಿತು ಅನೇಕ ಪಾಶ್ಚಾತ್ಯ ಪೌರ್ವಾತ್ಯ ಪಂಡಿತರೂ ವಿದ್ವಾಂಸರೂ ಪ್ರಶಂಸಾಪೂರ್ವಕವಾಗಿ ಹೊಗಳಿದ್ದಾರೆ. ಈಚೆಗೆ ಇವುಗಳತ್ತ ಪರದೇಶದ ಜನರು ಎಷ್ಟು ಆದರಭಾವದಿಂದ ನೋಡುತಿರುವರು ಎಂಬುದನ್ನು ತಿಳಿದುಕೊಳ್ಳಬೇಕಾದರೆ ಇತ್ತೀಚೆಗೆ ಇದೇ ೧೭-೬-೫೩ಕ್ಕೆ ಆಯಿಸ್‌ಲಂಡದಿಂದ (ಆರ್ಕ್ಟಿಕ್ ಸಮುದ್ರದಲ್ಲಿಯ ನಡುಗಡ್ಡೆ) ಡಾ. ಸೋರೆನ್‌ಸೆನ್ ಎಂಬವರು ನನಗೆ ಬರೆದ ಪತ್ರದಲ್ಲಿಯ ಹಲವು ಅವತರಣಿಕೆಗಳನ್ನು ನೋಡಿದರೆ ಸಾಕು. ಅವರು ಬರೆದುದು:—

"ಅಪರಿಚಿತನೊಬ್ಬನು ತಮಗೆ ಈ ರೀತಿ ಖಾಸಗಿ ಪತ್ರ ಬರೆಯುವ-ದೆಂದರೆ ಸ್ವಲ್ಪ ಅಧಿಕಪ್ರಸಂಗತನವೆಂದೆನಿಸಬಹುದು. ನಿಜಸಂಗತಿಯೆಂದರೆ ತಮ್ಮ ಉತ್ತಮ ಪುಸ್ತಕವಾದ "The Upanishats in Story and Dialogue" (ಉಪನಿಷತ್ಕಥಾವಳಿ) ಓದಿ ಮುಗಿಸಿದನಂತರ ನನ್ನ ಹೃತ್ಪೂ-ರ್ವಕ ಧನ್ಯವಾದಗಳನ್ನು ಅರ್ಪಿಸದಿರಲಾರೆ. ಪುಸ್ತಕವು ನನ್ನ ಮೇಲೆ ಬಹಳಷ್ಟು ಪ್ರಭಾವವನ್ನು ಬೀರಿತು. ತಮ್ಮ ಅಚ್ಚರಿಗೊಳಿಸುವ ದೇಶದ ಪುರಾತನ ಸಾಹಿತ್ಯ ಅದರಲ್ಲೂ ವಿಶೇಷವಾಗಿ ಆಧ್ಯಾತ್ಮಿಕ ಸಾಹಿತ್ಯ ಇವು

ನನಗೆ ಸಾಕಷ್ಟು ಪರಿಚಿತವಿರುವವು. ಮೂಲ ಸಂಸ್ಕೃತ ಭಾಷೆಯಿಂದ ಶ್ರೀಮದ್ಭಗವದ್ಗೀತೆಯನ್ನು ಆಯಿಸ್‌ಲ್ಯಾಂಡದ ಭಾಷೆ (ಆಯಿಸ್‌ಲ್ಯಾಂಡಿಕ್) ಯಲ್ಲಿ ಅನುವಾದ ಮಾಡುವ ಸೌಭಾಗ್ಯ ನನ್ನದಾಗಿತ್ತು. ನನ್ನ ಮೇಲೆ ಗಾಢ ಪರಿಣಾಮ ಮಾಡಿದ ನಿಮ್ಮ ಪುಸ್ತಕದಲ್ಲಿಯ ಸಂಗತಿಗಳೆಂದರೆ ಮೊದಲನೆಯ ದಾಗಿ, ಉಪನಿಷತ್ತುಗಳಲ್ಲಿನ ಉಚ್ಚತಮ ವಿಚಾರಗಳನ್ನು ಆರಿಸುವಲ್ಲಿ ನೀವು ತೋರಿರುವ ಜಾಣ್ಮೆ ಮತ್ತು ಎರಡನೆಯದಾಗಿ ಭಾರತದ ಅಪ್ರತಿಮ ಜ್ಞಾನ-ಶಕ್ತಿಯ ಅಗಾಧವಾದ ಇಂತಹ ಸರ್ವೋತ್ತಮ ಆಧ್ಯಾತ್ಮಿಕ ವಿಚಾರಗಳ ಬಗ್ಗೆ ನೀವು ತೋರಿಸಿರುವ ಆಳವಾದ ಹಾಗು ಹಾರ್ದಿಕ ಮೆಚ್ಚುಗೆ. ಭಾರತದ ರಾಜಕೀಯ ಮುಖಂಡರು ಕೇವಲ ಭೌತಿಕ ವಿಷಯಗಳಲ್ಲಷ್ಟೇ ಅಲ್ಲದೆ ಆಧ್ಯಾತ್ಮಿಕ ವಿಷಯಗಳಲ್ಲೂ ತಮ್ಮ ಭಾಂಧವರಿಗೆ ಮಾರ್ಗದರ್ಶಕರಿರುವರಷ್ಟೇ ಅಲ್ಲದೆ ತಮ್ಮ ದೇಶದ ಆಧ್ಯಾತ್ಮಿಕ ಸಂಪತ್ತಿಯಿಂದಲೇ ಸ್ವತಃ ಸ್ಫೂರ್ತಿ ಮಾರ್ಗದರ್ಶನಗಳನ್ನು ಪಡೆಯುತಿರುವರೆಂಬ ಸಂಗತಿ ನಿಜವಾಗಿ ಎಲ್ಲರಿಗೂ ಪ್ರೇರಕವೇ ಸೈ. ಇಂದಿನ ನಮ್ಮೀ ಜಡವಾದಪ್ರಧಾನವಾದ ಜಗತ್ತಿನಲ್ಲಿ ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಇರುವ ನಿಮ್ಮ ದೃಢ ನಂಬಿಕೆ ವಿಶ್ವಾಸಗಳು ಹಾಗು ಅವುಗಳನ್ನು ವ್ಯಕ್ತಪಡಿಸುವಲ್ಲಿ ನೀವು ತೋರಿಸಿದ ಧೈರ್ಯದೃಢತೆಗಳಿಗೆ ನಾನು ಮಾರುಹೋಗಿರುವೆನು.................

" ಜಗತ್ತಿಗೆ ಇಂದು ಜೀವನದ ಬಗ್ಗೆ ಒಂದು ಹೊಸ ದೃಷ್ಟಿ ಮತ್ತು ಒಂದು ಹೊಸದಾದ ಆಧ್ಯಾತ್ಮಿಕ ಗುರಿ ಅವಶ್ಯವಿರುವವು. ಅಂತಹದೊಂದು ಆಧ್ಯಾತ್ಮಿಕ ಮಾರ್ಗದರ್ಶನವು ಭಾರತದಿಂದಲೇ ಬರುವದು ಎಂದು ನನ್ನ ನಂಬುಗೆ. ಭಾರತದ ಜ್ಞಾನಿಗಳ ಹಾಗು ದ್ರಷ್ಟಾರರ ಸಹಾಯದಿಂದ ಒಂದು ಹೊಸ ಜೀವನ-ಮಾರ್ಗವನ್ನು ಹುಡುಕುವದು ಸಾಧ್ಯವಿಲ್ಲವೇ? ನಮಗೆ ಇದು ಸಾಧ್ಯ ವೆನಿಸುತ್ತದೆ. ಗಾಂಧೀಜಿಯವರ ದೈವೀಶಕ್ತಿ ಇನ್ನೂ ಜೀವಂತವಿದೆ. ಅವರ ಆತ್ಮಶಕ್ತಿಯ ದ್ಯೋತಕವಾದ ಸತ್ಯಾಗ್ರಹದ ತಿರುಳನ್ನು ಅರಿತುಕೊಳ್ಳುವ ಸೌಭಾಗ್ಯ ನಿಮ್ಮದಾಗಿದೆ. ಗಾಂಧೀಜಿಯವರ ಆತ್ಮತೇಜಸ್ಸೇ ಇಂದು ಭಾರತದ ದೈವೀಶಕ್ತಿ – ಸಾರಸಂಪತ್ತು. ಈ ಶಕ್ತಿಯು ಪ್ರತಿಯೊಬ್ಬ ಭಾರತೀಯನ ಜೀವನದಲ್ಲಿಯೂ ಬೆಳಗಬೇಕು ಹಾಗೂ ಈ ಜ್ಯೋತಿಯ ಕಿರಣಗಳು ಬಗೆ-ಬಗೆಯ ಭಯ-ಬೆದರಿಕೆಗಳಿಂದ ನಿರ್ಜೀವರಾಗಿರುವ ಬೇರೆ ದೇಶಗಳ ಪ್ರಜೆಗಳಲ್ಲಿ ಬಿಂಬಿಸಬೇಕು. ಈ ಪ್ರಸಂಗದಲ್ಲಿ, 'ಯಾವದೇ ಬಗೆಯ ಭಯವೆಂಬುದು

ಹೃದಯದಲ್ಲಿರುವವರೆಗೆ ಯಾರೂ ಸತ್ಯದ ಅಥವಾ ಪ್ರೇಮದ ಮಾರ್ಗವನ್ನು ಅನುಸರಿಸಲಾರರು,' ಎಂಬ ಗಾಂಧೀಜಿಯವರ ಉಕ್ತಿಯು ನೆನಪಿಗೆ ಬರುತ್ತದೆ................"

ಉಪನಿಷತ್ತುಗಳು, ಗೀತೆ, ವೇದಾಂತಶಾಸ್ತ್ರ ಇವು ದೇಶದೇಶಾಂತರದ ಜನರ ಆದರಾಶ್ಚರ್ಯಗಳ ವಿಷಯಗಳಾಗಿರುವವು ಎಂಬುದಿಷ್ಟೇ ಅಲ್ಲ. ಆಧುನಿಕ ಯುಗದಲ್ಲಿ ಕೂಡ ನಮ್ಮ ಭಾರತದಲ್ಲಿ ಜನ್ಮತಾಳಿ ಋಷಿಮುನಿಗಳ ಮಟ್ಟವನ್ನು ಮುಟ್ಟಿ ದಿವ್ಯ ಭವ್ಯ ಕರ್ಮಗಳನ್ನು ಮಾಡಿರುವ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಸ್ವಾಮಿ ದಯಾನಂದರು, ಲಾಲಾ ಲಜಪತರಾಯರು, ಲೋಕಮಾನ್ಯ ಟಿಳಕರು, ಕವೀಂದ್ರ ರವೀಂದ್ರರು, ಮಹಾತ್ಮಾ ಗಾಂಧಿಯವರು, ಮಹಾಯೋಗಿ ಅರವಿಂದರು ಮುಂತಾದವರಿಗೆ ಆ ಗ್ರಂಥಗಳೆ ಮೂಲ ಪ್ರೇರಣೆ ಕೊಟ್ಟು ಅವರಿಗೆ ಆಂತರಿಕ ಶಕ್ತಿಯನ್ನು ಸತತವೂ ಗೈಯ್ಯುತಿದ್ದವು. ಈ ಮೂಲಕ ಅವುಗಳ ಬೆಲೆ ಶತಪಟ್ಟು ಬೆಳೆದಿರುವದು. ಯಾಕಂದರೆ ಮಾನವನ ಇತಿಹಾಸದಲ್ಲಿ ಇವು ಅತ್ಯಂತ ಸನಾತನವಿದ್ದರೂ ಈ ವಿಜ್ಞಾನಯುಗದಲ್ಲಿ ಕೂಡ ಅವು ಏಕಪ್ರಕಾರವಾಗಿ ತಮ್ಮ ಪ್ರಭಾವವನ್ನು ಬೀರಲು ಸಮರ್ಥವಾಗಿವೆ.

ತ್ರೈವರ್ಣಿಕರಷ್ಟೆ ವೇದಗಳನ್ನು ಪಠಿಸಬೇಕು, ಸ್ತ್ರೀಯರು ಹಾಗೂ ಇತರ ವರ್ಣದವರು ಅವುಗಳನ್ನು ಮುಟ್ಟಕೂಡದು ಎಂಬ ಹಳೆಯ ತರ್ಕಶುದ್ಧವಲ್ಲದ ಕಲ್ಪನೆಗೆ ಈಗ ಈ ಕಾಲದಲ್ಲಿ ಯಾವ ಅರ್ಥವೂ ಉಳಿದಿಲ್ಲ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಗ್ರಂಥಗಳು ಅಚ್ಚಾಗಿ ಎಲ್ಲರಿಗೂ ಮಾರಲು ದೊರೆಯಲಾರಂಭವಾದಂದಿನಿಂದ ಇವುಗಳ ಅಭ್ಯಾಸಕ್ಕೆ ಯಾವ ಕೃತ್ರಿಮ ಅಡಚಣಿಯೂ ಉಳಿದಿಲ್ಲವೆನ್ನಬಹುದು. ಆಬಾಲವೃದ್ಧರಿಗೂ ಈಗ ಅವುಗಳನ್ನು ಓದಲು, ಅಭ್ಯಸಿಸಲು ಮುಕ್ತದ್ವಾರವಿರುವದು. ಹೀಗಿರುವದರಿಂದ ಈ ದಿನಗಳಲ್ಲಿ ಅವುಗಳನ್ನು ಓದದೆ ಇದ್ದವರದೆ ತಪ್ಪು ಹೊರತು ಆ ನಿರ್ಜೀವ ಹಳೆಯ ಕಲ್ಪನೆಯ ತಪ್ಪಲ್ಲ. ಮೇಲಾಗಿ ಲೋಪಾಮುದ್ರಾ, ಶಶಿಯಾನ, ಇಂದ್ರಾಣಿ, ಶಚಿ, ಪೌಲೋಮಿ ಮುಂತಾದ ಹಲವಾರು ಸ್ತ್ರೀಯರೆ ಮಂತ್ರದ್ರಷ್ಟಾರರಿರುವಾಗ, ಗಾರ್ಗಿ ಮೈತ್ರೇಯಿಯರಂಥ ಹೆಣ್ಣುಮಕ್ಕಳೆ ಹಲವು ಉಪನಿಷತ್ತುಗಳಲ್ಲಿ ಮಹತ್ವದ ಪಾತ್ರ ವಹಿಸಿರುವಾಗ ಹೆಣ್ಣುಮಕ್ಕಳು ಅವುಗಳನ್ನು ಅಭ್ಯಸಿಸಕೂಡದು ಎಂಬುದಕ್ಕೆ ಅರ್ಥವೆ ಇಲ್ಲ. ಇಂಗ್ಲಂಡ, ಜರ್ಮನಿ, ಫ್ರಾನ್ಸ, ಅಮೇರಿಕಾ

ಮುಂತಾದ ಅನೇಕ ದೇಶಗಳಲ್ಲಿ ತ್ರೈವರ್ಣಿಕರಲ್ಲದ ಪಂಡಿತರು ತಮ್ಮ ತಮ್ಮ ಭಾಷೆಗಳಲ್ಲಿ ಇವುಗಳನ್ನು ಅನುವಾದಿಸಿ ಪ್ರಸಾರ ಮಾಡುತಿರುವಾಗ ನಾವು ಇವುಗಳ ಮಾತೃಭೂಮಿಯಾದ ಈ ದೇಶದಲ್ಲಿ ಯಾವದೇ ಬಗೆಯ ನಿರ್ಬಂಧ ವನ್ನು ಹಾಕುವದು ಎಳ್ಳಷ್ಟೂ ಸರಿಯಾಗಲಾರದು. ಇಷ್ಟೇ ಅಲ್ಲ. ಮಾನವ ಜಾತಿಯೆಂಬುದು ಎಲ್ಲಿ ಹೋದರೂ ಒಂದೇ ಇದ್ದು ಅದರ ಕರ್ತೃವ್ಯ ಹಾಗೂ ಹಕ್ಕುಬಾಧ್ಯತೆಗಳು ಎಲ್ಲೆಲ್ಲಿಯೂ ಸಮಸಮಾನವಿರುವದರಿಂದ ನಮ್ಮಲ್ಲಿ ಯಾವದೇ ತಾರತಮ್ಯವನ್ನು ಮಾಡುವದು ಅನ್ಯಾಯವಾಗುವದು. ಸೂರ್ಯೋದಯವಾದೊಡನೆ ಹೊರಹೊರಟು ಸೂಕ್ಷ್ಮ ಸಂದಿಕೊಂಚಿಗಳಲ್ಲಿ ಸಹ ಸೇರಿ ಎಲ್ಲೆಲ್ಲಿಯೂ ಸಂಚರಿಸುವ ಸೂರ್ಯಪ್ರಕಾಶವು ಯಾವದೇ ಕಾರಣ ದಿಂದ ಯಾರಿಗಾದರೂ ಸಲ್ಲಕೂಡದೆಂದು ಯಾರಾದರೂ ಅಂದರೆ ಅದು ಸರಿ ಯಾಗಬಲ್ಲದೆ? ಮೋಡ ಮುಸುಕಿದ ನಭದಿಂದ ಭೋರೆಂದು ಸುರಿಯುವ ಮಳೆ-ನೀರನ್ನು, ಆಕಾಶದಲ್ಲಿ ಸ್ವೈರವಾಗಿ ಸುಳಿಯುವ ಗಾಳಿಯನ್ನು ಹಲವರು ಸೇವಿಸಕೂಡದೆಂದು ನಿರ್ಬಂಧಪಡಿಸಿದರೆ ಅದು ನ್ಯಾಯ್ಯವಾಗಬಲ್ಲದೆ? ವಿಷಯಾಧೀನವಾಗಿ ಹಗಲಿರುಳು ತೊಳಲಾಡುತಿರುವ ಮಾನವಕುಲದ ತಲ್ಲಣ ವನ್ನು ತಡೆಯಲಾರದೆ ವಾತ್ಸಲ್ಯಭಾವದಿಂದ ಹಾಲು ಕರೆಯುವ ಆವಿನಂತೆ ಋಷಿಮುನಿಗಳು ಅಂತಃಸ್ಫೂರ್ತಿಯಿಂದ ನುಡಿದ ನಲ್ಮಾತುಗಳನ್ನು ಅವರಿವರು ಓದಬಾರದು, ಕೇಳಬಾರದು ಎಂದೆನ್ನುವದು ಸರ್ವಥಾ ಅನ್ಯಾಯವು, ಅನೈಸರ್ಗಿಕವು. ಆತ್ಮಭೂಮಿಕೆಯ ಶುದ್ಧ ಹಿಮಾಚ್ಛಾದ ವಾತಾವರಣದಲ್ಲಿ ಹುಟ್ಟಿ ಹಾತೊರೆದು ಹರಿಯುತಿರುವ ಲೋಕಪಾವನೆಯಾದ ಜ್ಞಾನಗಂಗೆಯಲ್ಲಿ ಎಲ್ಲರೂ ಮೀಯಲಿ, ಎಲ್ಲರೂ ಪವಿತ್ರರಾಗಲಿ, ಎಲ್ಲರೂ ಮುಕ್ತಜೀವಿಗಳಾಗಿ ನಲಿನಲಿದಾಡಲಿ, ಎಂದೇ ನಾವೆಲ್ಲರೂ ಹಾರೈಸಬೇಕು.

ಈ ಬ್ರಹ್ಮಜ್ಞಾನದ ರಾಜ್ಯದಲ್ಲಿ ಕುಲಶೀಲ, ಜಾತಿವಂಶ, ಲಿಂಗವಯ ಇತ್ಯಾದಿಗಳಿಗೆ ಎಳ್ಳಷ್ಟೂ ಮಹತ್ವವಿಲ್ಲ. ಆತ್ಯಂತಿಕ ಶುದ್ಧ ಜ್ಞಾನದ ಪ್ರಭಾವಶಾಲಿ ಪಿಪಾಸೆಯೆ ಇಲ್ಲಿ ಏಕಮೇವ ಅಧಿಕಾರಪತ್ರವು, ಬ್ರಹ್ಮವಿದ್ಯೆ ಯೆಂಬುದು ಮಾನವೀ ಅಂತರ್‌ಜ್ಞಾನದ ಪರಮಾವಧಿಯು. ಅದು ಯಾರ ಸೊತ್ತೂ ಅಲ್ಲ, ಯಾರ ಸೊತ್ತೂ ಆಗಲಾರದು. ಸತ್ಯಶೋಧನದ ಆಕಾಂಕ್ಷೆಯು ಅಂತರ್‌ಜ್ಯೋತಿಯನ್ನು ಪ್ರಜ್ವಲಿಸುತ್ತ ಹೋದಂತೆ ಜ್ಞಾನಾ-ಗ್ನಿಯು ಒಳಗೆ ಬೆಳಗಿ ಕರ್ಮದ ಬೀಜವನ್ನು ಸುಟ್ಟುಹಾಕಿ ಕೇವಲ ಹಾಗೂ

ನಿರಂತರ ಪ್ರಕಾಶವನ್ನು ದಯಪಾಲಿಸುವದು. ಈ ಬಗೆಯ ಭಾಗ್ಯವನ್ನು ಪಡೆದವರ ಜೀವನವು ಆಧ್ಯಾತ್ಮಿಕವೂ ದಿವ್ಯವೂ ಎನಿಸುವದು. ಅವರ ಅಂತರಾಕಾಶದಲ್ಲಿ ಆನಂದದ ಸಾಮ್ರಾಜ್ಯವು ನೆಲೆಸುವದು. ಅಲ್ಲಿ ಶಾಂತಿ ಸಮಾಧಾನಗಳ ವಾತಾವರಣವು ಪಸರಿಸುವದು. ಅವರ ವಿಚಾರ, ಉಚ್ಚಾರ, ಆಚಾರ, ಪ್ರಚಾರಗಳು ಪರಿಶುದ್ಧ ಹಾಗೂ ಲೋಕಹಿತದಕ್ಷವಾಗುವವು. ಅವರ ಮುಕ್ತ ಕರ್ಮವು ವೀರ್ಯವತ್ತರವಾಗುವದು. ಈ ಬಗೆಯ ಸಿದ್ಧಿ, ಈ ಬಗೆಯ ಜೀವನ ಇದೇ ಉಪನಿಷತ್ತುಗಳ ಧ್ಯೇಯ, ಇದೇ ಅವುಗಳ ಆದರ್ಶ, ಇದೇ ಉಪನಿಷಜ್ಜೀವನವು, ಉಪನಿಷತ್ತುಗಳ ಸಾರಸರ್ವಸ್ವವು. ಇದನ್ನರಿತು, ಅರಗಿಸಿ ಇದರಂತೆ ಆಚರಿಸುವವರೆ ಧನ್ಯರು, ಮಾನ್ಯರು, ಮನೀಷಿಗಳು. ಇದೇ ನಮ್ಮೆಲ್ಲರ ಗುರಿಯಾಗಲಿ, ಇದನ್ನು ಸಾಧಿಸುವ ಶಕ್ತಿ ನಮ್ಮೆಲ್ಲರಿಗೂ ಬರಲಿ, ಪ್ರತಿಜೀವಕ್ಕೂ ಈ ಬಗೆಯ ಬಲ ಇರಲಿ. ಇದೇ ನನ್ನ ಹಾರೈಕೆ, ಇದೇ ನನ್ನ ಆಕಾಂಕ್ಷೆ, ಇದೇ ನನ್ನ ಜೀವದಾಸೆ.

ರಾಂಚಿ
೭-೭-೫೩

ರಂಗನಾಥ ದಿವಾಕರ

# ನಾಲ್ಕು ನುಡಿಗಳು

ತತ್ತ್ವಜ್ಞಾನದ ದೃಷ್ಟಿಯಿಂದ ಗ್ರಂಥಗಳ ಅರ್ವಾಚೀನತ್ವವೂ ಪುರಾತನತ್ವವೂ ಅಷ್ಟೊಂದು ಮಹತ್ವದ ವಿಷಯವಲ್ಲದಿದ್ದರೂ ವಿಚಾರವಿಕಾಸದ ದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ವಿಮರ್ಶಕ ದೃಷ್ಟಿಯಿಂದಲೂ ಗ್ರಂಥಗಳ ಕಾಲವು ವಿಚಾರಣೀಯವಿರುವದು. ಈಗ ಉಪನಿಷತ್ತುಗಳೆಂದೆನಿಸುವ ಅನೇಕ ಗ್ರಂಥಗಳಲ್ಲಿ ದಶೋಪನಿಷತ್ತುಗಳೆ ಮುಖ್ಯವಾದವುಗಳು ಮತ್ತು ಅತ್ಯಂತ ಪುರಾತನವಾದವುಗಳು. ಆ ಹತ್ತರಲ್ಲಿ ಮತ್ತೆ ಛಾಂದೋಗ್ಯ ಹಾಗು ಬೃಹದಾರಣ್ಯಕಗಳು ವಿಶೇಷ ಹಳೆಯವೆಂದು ಪಂಡಿತರ ಮತವಿದೆ. ಇಲ್ಲಿ ಛಾಂದೋಗ್ಯವನ್ನು ಕುರಿತು ನಾಲ್ಕು ನುಡಿಗಳನ್ನು ಬರೆಯಲನುವಾಗಿದ್ದೇನೆ.

ಉಪನಿಷತ್ತುಗಳು ವೇದಗಳ ಅಂತ್ಯಭಾಗ, ವೇದಾಂತ, ಎಂದೆನಿಸಿಕೊಳ್ಳುವವು. ಇದು ಗುರುಗಳ ಬಳಿ ಕುಳಿತು ಕಲಿಯುವ ವಿದ್ಯೆಯಾದುದರಿಂದ ಉಪನಿಷತ್ (ಉಪ+ನಿ+ಸತ್) ಎಂಬ ಹೆಸರನ್ನು ಪಡೆಯಿತು. ಗ್ರಂಥಲೇಖನದ ಪ್ರಚಾರವಾಗುವ ಪೂರ್ವದಲ್ಲಿ ಗುರುಶಿಷ್ಯ ಪರಂಪರೆಯಿಂದಲೆ ವಿದ್ಯೆಯನ್ನು ಕಲಿತುಕೊಳ್ಳುವ ಪರಿಪಾಠವಿದ್ದುದರಿಂದ ಈ ವಿದ್ಯೆಯನ್ನಾದರೂ ಅದೇ ರೀತಿ ಕಲಿತುಕೊಳ್ಳಬೇಕಾಗುತಿತ್ತು. ಲೇಖನಕಲೆಯು ಮತ್ತು ಗ್ರಂಥ ಲೇಖನ ಪದ್ಧತಿಯು ಪ್ರಚಲಿತವಾದ ಬಳಿಕ ಸಹ ಈ ಅನುಭವಜನ್ಯ ಬ್ರಹ್ಮವಿದ್ಯೆ ಎಂಬುದು ಗುರುಮುಖಾಂತರವಾಗಿ ಕಲಿಯತಕ್ಕ ವಿದ್ಯೆಯೇ ಆಗಿ ಉಳಿಯಿತು. ಈಗ್ಯೂ ಆತ್ಮಜ್ಞಾನವು ಆಗಬೇಕಾದರೆ ಗುರೂಪದೇಶವು ಹಾಗೂ ದೇವರ ಅನುಗ್ರಹವು ಅವಶ್ಯವು ಎಂಬ ಭಾವನೆಯು ನಮ್ಮಲ್ಲಿ ರೂಢವಿರುವದು.

ಉಪನಿಷತ್ತುಗಳು ಮುಖ್ಯತಃ ಜ್ಞಾನಕಾಂಡದ ಭಾಂಡಾರವೆನಿಸುತಿರುವವು. ತ್ರಯೀವಿದ್ಯೆ ಎಂದು ಹೇಳಲ್ಪಡುತಿರುವ ಋಕ್‌ಯಜುಸ್ಸಾಮಗಳು ಪ್ರಾಧಾನ್ಯವಾಗಿ ಕರ್ಮಕಾಂಡ ಪ್ರತಿಪಾದಕವಿರುವವು. ದೇವದೇವತೆಗಳ ಸ್ತುತಿಪೂರ್ವಕವಾಗಿ ಮಾಡತಕ್ಕ ಯಜ್ಞವೆ ಈ ಮೂರು ವೇದಗಳಲ್ಲಿ ಹೇಳಿದ ಮುಖ್ಯ ಕರ್ಮ. ಋಗ್ವೇದವು ಮುಖ್ಯವಾಗಿ ದೇವತೆಗಳ ಸ್ತುತಿಪರ ಗ್ರಂಥ

ಇರುವದು. ಯಜುರ್ವೇದವು ಮುಖ್ಯವಾಗಿ ಯಜ್ಞಮಂತ್ರಗಳಿಂದ ತುಂಬಿರುವದು. ಸಾಮವೇದವು ಮುಖ್ಯವಾಗಿ ಮಂತ್ರಗಳನ್ನು ಹಾಡುವ ಅಥವಾ ರಾಗಪೂರ್ವಕವಾಗಿ ಅನ್ನುವ ವಿದ್ಯೆಯನ್ನು ಹೇಳುವದು. ಕರ್ಮಪ್ರಧಾನವಾದ, ಕರ್ಮದ ವಿಧಿವಿಧಾನಗಳಿಂದ ತುಂಬಿದ ಅನೇಕ ದೇವದೇವತೆಗಳ ಸ್ತುತಿ ಸ್ತೋತ್ರಗಳಿಂದ ಹೊರಸೂಸುವ ಮೂರು ವೇದಗಳಲ್ಲಿ ಕೂಡ ಋಷಿಗಳು ಸಾಕಷ್ಟು 'ಆಧ್ಯಾತ್ಮಿಕ' ಜ್ಞಾನವನ್ನು ಹಲವುಸಾರೆ ಪ್ರತ್ಯಕ್ಷವಾಗಿ, ಅನೇಕ ಸಾರೆ ಪರೋಕ್ಷವಾಗಿ ಹೇಳಿರುವರೆಂಬುದು ಸ್ಪಷ್ಟವಿದೆ. ಅಲ್ಲಲ್ಲಿ ಚಿನ್ನದ ರಾಶಿಯಲ್ಲಿ ಹೊಳೆಯುವ ವಜ್ರಕಣಗಳಂತೆ, ಜ್ಞಾನದ ಹೊಳಪೂ ಬೇಕಾದಷ್ಟು ತೋರುವದು. 'ಏಕಂ ಸದ್ವಿಪ್ರಾ ಬಹುಧಾ ವದಂತಿ'— ಒಂದೇ ಒಂದು ಇದ್ದುದಕ್ಕೆ ಬೇರೆ ಬೇರೆಯವರು ವಿವಿಧ ಹೆಸರುಗಳನ್ನು ಕಲ್ಪಿಸಿರುವರು— ಎಂಬ ತಾತ್ವಿಕ ಸತ್ಯಗರ್ಭವಾಕ್ಯಗಳು ವೇದಗಳಲ್ಲಿಯೂ ಅಲ್ಲಲ್ಲಿ ಬೇಕಾದಷ್ಟು ಕಂಗೊಳಿಸುವವು. ಈ ವಿಶ್ವದ ಮೂಲವಾವುದು, ಇದನ್ನು ಬ್ರಹ್ಮನು ನಿರ್ಮಿಸಿದ್ದಾದರೆ ಅವನು ಎಂಥವನಿರುವನು, ಎಂದು ಮುಂತಾಗಿ ಒಂದು ಬಗೆಯ ಅಳತೆಗೋಲನ್ನು ಹಾಕಿ ಆದಿಬ್ರಹ್ಮನ ತಾವನ್ನರಸುವಂಥ ನಾಸ-ದೀಯ ಸೂಕ್ತಾದಿ ಸೂಕ್ತಗಳೂ ಒಂದೊಂದು ಈ ವೇದಗಳಲ್ಲಿ ಇರುವವು. ಅದೇ ಮೇರೆಗೆ ಗೋ ಎಂದರೆ ಆಕಳೂ ಅಹುದು ಸೂರ್ಯಕಿರಣವೂ ಅಹುದು. ಸೂರ್ಯನೆಂದರೆ ಆಧಿಭೌತಿಕ ಸೂರ್ಯನೂ ಅಹುದು, ಜ್ಞಾನಸೂರ್ಯನೂ ಅಹುದು; ಅಗ್ನಿಯೆಂದರೆ ಹೋಮಕುಂಡದಲ್ಲಿಯ ಅಗ್ನಿಯೂ ಅಹುದು, ಮಾನವ ಹೃದಯದಲ್ಲಿಯ ಊರ್ಧ್ವಗಾಮಿ ಆಕಾಂಕ್ಷೆಯೂ ಅಹುದು. ಈ ರೀತಿ ಆಧ್ಯಾತ್ಮಿಕತೆಯ ಗುಪ್ತಗಾಮಿ ಗಂಗೆಯು ವೇದಗಳಲ್ಲಿ ಹರಿಯುತಿರುವದೂ ನಿಜವು. ಇಂಥ ವಜ್ರಕಣಗಳು, ಆತ್ಯಂತಿಕ ಸಾಕ್ಷಾತ್ಕಾರದ ಇಂಥ ಮುಂಗುರುತುಗಳು ಮುಂದೆ ಉಪನಿಷತ್ತುಗಳಲ್ಲಿಯ ಹೆಚ್ಚು ಪ್ರಚುರ ಹಾಗು ಸ್ಪಷ್ಟವಾದ ಆಧ್ಯಾತ್ಮಿಕ ಜ್ಞಾನಕ್ಕೆ ತಳಹದಿಯಾದವು.

ಆದರೆ ವೇದಗಳಲ್ಲಿ ಬಾಹ್ಯತಃ ನೋಡಿದರೆ ಮುಖ್ಯವಾಗಿ ಕರ್ಮವೆ ಪ್ರಧಾನವು, ಯಜ್ಞಕರ್ಮವೆ ಮುಖ್ಯವು. ಅಗ್ನಿಯ ಮುಖಾಂತರ ದೇವ ದೇವತೆಗಳಿಗೆ ಹವಿಸ್ಸುಗಳನ್ನರ್ಪಿಸಿ ಅವರಿಂದ ಅಭ್ಯುದಯವನ್ನು ಪಡೆಯುವದೆ ವೇದೋಕ್ತ ಕರ್ಮಕಾಂಡದ ಮುಖ್ಯ ಗುರಿಯು. ಅದು ಆರ್ಯರ ವೀರ ಕಾಲವು. ಶತ್ರುಗಳನ್ನು ಸಂಹರಿಸಿ, ವಿಜಯವನ್ನು ಪಡೆದು, ಧನಧಾನ್ಯ

ಸಮೃದ್ಧಿಯನ್ನು ಭೋಗಿಸಿ, ಆಕಳು ಕುದುರೆಗಳ ಸಂಗ್ರಹ ಮಾಡಿ, ಸುಪ್ರಜೆಗಳನ್ನು ಹೆತ್ತು, ಸುಖದಿಂದ ಸಂಸಾರ ಮಾಡಲುದ್ಯುಕ್ತರಾದ ಆರ್ಯವಿಜಿಗೀಷುಗಳ ಕಾಲವದು. ಇಹಲೋಕದ ಸುಖಸಮೃದ್ಧಿ, ಭೋಗಗಳು ನಿರಂತರವಾಗಿ ಪ್ರಾಪ್ತವಾಗುತಿರುವದೆ ಸ್ವರ್ಗಸುಖವೆನಿಸುವದು. ಈ ಸ್ವರ್ಗ ಸುಖವು ಆ ಕಾಲದ ಆರ್ಯರಿಗೆ ಅತ್ಯಂತ ಇಷ್ಟವಾಗಿತ್ತು. ಆದುದರಿಂದ ಆ ಸ್ವರ್ಗದ ಮುಖ್ಯ ಅಧಿಪತಿಯಾದ ಮತ್ತು ದೇವದೇವತೆಗಳಲ್ಲಿ ಅತ್ಯಂತ ಶೂರ ವೀರ ಧೀರನಾದ ಇಂದ್ರನೆ ಎಲ್ಲರ ಇಷ್ಟದೇವತೆಯಾಗಿದ್ದನು. ಆ ವೇದ-ಕಾಲದಲ್ಲಿ ಪ್ರಖರ ಪ್ರಚಂಡಕಿರಣ ಸೂರ್ಯನೆ ಉಪಾಸ್ಯ ದೈವತವು. ಈ ಮತ್ತು ಇನ್ನೂ ಅನೇಕ ದೇವತೆಗಳನ್ನು ವೇದಮಂತ್ರಗಳು ನಿರತಿಶಯವಾದ ಕಾವ್ಯಸ್ಫೂರ್ತಿಯಿಂದ ವರ್ಣಿಸಿರುವವು. ಹೀಗಿದ್ದರೂ ಆ ಕಾಲದಲ್ಲಿ ಕೂಡ ಈ ಬಾಹ್ಯವಿಶ್ವದಲ್ಲಿ ಗೂಢವಾಗಿರುವ, ಎಲ್ಲೆಲ್ಲಿಯೂ ಏಕರೂಪತೆಯಿಂದ ಇರುವ ಏಕಾತ್ಮನ ಅರಿವು ಅನೇಕ ಸತ್ಯಾನ್ವೇಷಿಗಳಿಗೆ ಆಗಿತ್ತು. ಬೇರೆ ಬೇರೆ ದೇವತೆಗಳು ಆ ಮೂಲಶಕ್ತಿಯ ಪ್ರತೀಕಗಳು ಮಾತ್ರ, ಎಂದು ಅಲ್ಲಲ್ಲಿ ಉಲ್ಲೇಖವಿರುವದು. ಇಷ್ಟೇ ಅಲ್ಲ. ಈ ಬಾಹ್ಯಪ್ರತೀಕಗಳ ಉಪಾಸನೆ ಮಾಡುವಾಗ ಕೂಡ ಅಂತರಿಂದ್ರಿಯದಿಂದ ಆ ಗೂಢಶಕ್ತಿಯನ್ನು ಗೋಚರಿಸಲಿಕ್ಕೆ ಬೇಕು, ಎಂದೇ ಆ ದ್ರಷ್ಟಾರರು ಉಪಾಸಕರಿಗೆ ಹೇಳುತಿರಲಿಕ್ಕೆ ಸಾಕು. ಉದಾಹರಣಾರ್ಥವಾಗಿ, ಗಾಯತ್ರಿಯ ಮಂತ್ರವನ್ನೆ ವಿಚಾರಿಸಿದರೂ ಅದರಲ್ಲಿಯ ಸವಿತೃದೇವತೆಯು, ನಮ್ಮ ಬಾಹ್ಯಕಣ್ಣುಗಳಿಗೆ ಕಾಣುತಿರುವ ಸೂರ್ಯನು ಬರಿಯ ಪಾರ್ಥಿವ ಸೂರ್ಯನಲ್ಲ. ಆದರೆ ನಿಜವಾಗಿ ಆತನು ಚಿತ್ಸೂರ್ಯನು, ಚೈತನ್ಯದೇವತೆಯು, ಜ್ಞಾನಜ್ಯೋತಿಯು ಇರಲಿಕ್ಕೆ ಸಾಕು. ಇಲ್ಲದಿದ್ದರೆ ಅವನು ನಮ್ಮ ಧೀಶಕ್ತಿಯನ್ನು, ಬುದ್ಧಿಯನ್ನು ಪ್ರೇರಿಸಲಿ, ಎಂಬ ಮಂತ್ರಕ್ಕೆ ನಿಜವಾದ ಅರ್ಥವಾಗುವದಿಲ್ಲ !

ಇದಲ್ಲದೆ ಉಪನಿಷತ್ತುಗಳಲ್ಲಿ ಅಂದರೆ ಜ್ಞಾನಕಾಂಡದಲ್ಲಿ ಅಲ್ಲಲ್ಲಿ, ತದೇಷ ಶ್ಲೋಕಃ— ಆ ಬಗ್ಗೆ ಈ ಶ್ಲೋಕವು, ಅಥವಾ ತದೇತದೃಚಾಭ್ಯುಕ್ತಂ— ಈ ಋಚೆಯ ಮೂಲಕ ಅದು ಹೇಳಲ್ಪಟ್ಟಿದೆ, ಎಂದು ಮೊದಲು ಪ್ರಚಲಿತವಿದ್ದ ಮಂತ್ರಗಳು ಉದಹರಿಸಲ್ಪಟ್ಟಿವೆ. ಆದುದರಿಂದ ಉಪನಿಷತ್ತುಗಳ ಜ್ಞಾನವು ಪರಂಪರಾಪ್ರಾಪ್ತವೆಂದು ಸ್ಪಷ್ಟವಾಗಿ ಹೇಳಬಹುದು. ಅದೇ ಪ್ರಕಾರ, ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ— ಇದನ್ನು ನಮಗೆ

ಹೇಳಿದ ಧೀರರಿಂದ ನಾವು ಹೀಗೆ ಕೇಳಿರುವೆವು, ಎಂಬ ಉಲ್ಲೇಖವು ಎಷ್ಟೋ ಕಡೆಗೆ ಇರುವದು. ಇದೆಲ್ಲದರ ಮೇಲಿಂದ ಸಿದ್ಧವಾಗುವದೇನೆಂದರೆ, ಬಾಹ್ಯತಃ ಕರ್ಮಕಾಂಡಾತ್ಮಕ ಮತ್ತು ಪ್ರವೃತ್ತಿಪರ ಕಾಣುತಿರುವ ವೇದ-ಗಳಲ್ಲಿ ಮುಂದೆ ಉಪನಿಷತ್ತುಗಳಲ್ಲಿ ಮೈದೋರಿದ ಜ್ಞಾನದ ಮತ್ತು ನಿವೃತ್ತಿ-ಮಾರ್ಗದ ಸಾಕಷ್ಟು ಬೀಜಗಳು ಹುದಗಿಕೊಂಡಿದ್ದವು ಹಾಗೂ ದೀಕ್ಷೆ-ಗೊಂಡವರಿಗೆ ಪೂರ್ಣ ಪರಿಚಿತವಿದ್ದವು. ಆರ್ಯರ ತತ್ತ್ವಾನ್ವೇಷಿ ಪ್ರತಿಭೆಗೆ ಅನುಕೂಲ ಕಾಲವು ಪ್ರಾಪ್ತವಾದೊಡನೆ ಆ ಜ್ಞಾನವೆ ಉಪನಿಷತ್ತುಗಳ ರೂಪದಿಂದ ಹೇಳಲಾಯಿತು ಹಾಗೂ ಮೈವೆತ್ತಿತೆನ್ನಬಹುದು.

ವೇದಗಳಲ್ಲಿ ಕರ್ಮ, ಯಜ್ಞ, ಸ್ತುತಿ ಇವು ಮುಖ್ಯವಿದ್ದಂತೆ ಉಪನಿಷತ್ತು-ಗಳಲ್ಲಿ ಜ್ಞಾನವು ಹಾಗೂ ಉಪಾಸನೆಯು— ಯಾವದೊಂದು ಶಾಸ್ತ್ರಸಂಮತ ಆಲಂಬನದಲ್ಲಿ ಚಿತ್ತವನ್ನು ಸಮಮಾಡುವ, ಏಕಾಗ್ರಮಾಡುವ, ಸಮರ್ಪಿಸುವ ಕ್ರಿಯೆಯು— ಮುಖ್ಯವಿರುವವು. ವೇದಗಳಲ್ಲಿ ವಿಜಿಗೀಷುವೃತ್ತಿ, ಶತ್ರು-ಸಂಹಾರದ ಹವಣಿಕೆ, ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಪುಣ್ಯವನ್ನು ಪಡೆಯುವ ಹಂಬಲ, ಸುಖಸಮೃದ್ಧಿಗಳ ಇಚ್ಛೆ ಇವು ಒಡೆದು ಕಾಣಿಸುವವು. ಆದರೆ ಉಪನಿಷತ್ತುಗಳಲ್ಲಿ ರಮ್ಯವಾದ ಪುಣ್ಯಾಶ್ರಮಗಳಲ್ಲಿ ಕುಳಿತು ಪ್ರಶಾಂತ ಚಿತ್ತದಿಂದ ತತ್ತ್ವಚಿಂತನೆಮಾಡುತ್ತ ಅದರಲ್ಲಿ ಲೀನವಾಗಿರುವ ಒಲವು ಬಲ-ಗೊಂಡಿದ್ದು ಕಂಡುಬರುವದು. ಬರಬರುತ್ತ ವೇದಕಾಲದ ಕರ್ಮಾಡಂಬರವು ಬೆಳೆಬೆಳೆದು, ಕರ್ಮರಹಸ್ಯವು ಅಡಗಿಹೋಗಿ ಕೇವಲ ಕರ್ಮಾಚಾರಕ್ಕೆ ಮಹತ್ವ ಬಂದಿತು. ಯಜ್ಞಗಳ ಸ್ತೋಮವು ಹೆಚ್ಚಾಗಿ ವಿಧಿನಿಷೇಧಗಳ ಅರ್ಥವಿಹೀನ ಅರಣ್ಯವೇ ಹಬ್ಬಿತು. ಸಗುಣದೇವತೆಗಳ ಸ್ತುತಿಸ್ತೋತ್ರಗಳ ಸಂದಣಿಯು ಬೇಸರಗೊಡುವಷ್ಟು ಪಸರಿಸಿತು. ಎಲ್ಲರೂ ಅತಿಶಯ ಪ್ರವೃತ್ತಿ-ಪರರಾಗಿ ಸ್ವರ್ಗಸುಖಗಳನ್ನು ಭೋಗಿಸಲು ಬಹಳ ಉತ್ಸುಕರಾದರು. ಪುಣ್ಯಲೋಕಗಳನ್ನು ಪಡೆಯುವ ಆತುರವು ಮೇರೆದಪ್ಪಿತು. ತತ್ತ್ವಕ್ಕಿಂತ ಬಾಹ್ಯ ಆವರಣವಾದ ಆಚಾರಧರ್ಮಕ್ಕೆ ಬಹು ಮಹತ್ವ ಉಂಟಾಯಿತು. ಈ ಬಗೆಯ ಬಾಹ್ಯಪ್ರವೃತ್ತಿಯ ಬೆಳವಣಿಗೆಯ ಪ್ರತಿಕ್ರಿಯೆಯು ಆಗದೆ ಇರುವ ಬಗೆ ಹೇಗೆ? ಆ ಪ್ರತಿಕ್ರಿಯೆಯೆ ಉಪನಿಷತ್ಕಾಲದಲ್ಲಿಯ ಉಪಾಸನೆ, ನಿವೃತ್ತಿ, ಮೋಕ್ಷ, ಜ್ಞಾನ, ಈ ರೂಪದಿಂದ ಮೈಗೊಂಡಿತು. ಆದುದರಿಂದಲೆ ವೇದಗಳಲ್ಲಿ ಶ್ರೇಯಸ್ಸು, ಅಭ್ಯುದಯ, ಅಭಿವೃದ್ಧಿ, ಸ್ವರ್ಗಸುಖ ಇವು

ಹೆಚ್ಚು ಇಷ್ಟವಿದ್ದರೆ ಉಪನಿಷತ್ತುಗಳಲ್ಲಿ ಅವುಗಳಿಗೆ ಪ್ರತಿಯಾಗಿ ಶ್ರೇಯಸ್ಸು, ನಿಃಶ್ರೇಯಸ, ಜನ್ಮಮರಣರಹಿತ ಮೋಕ್ಷ, ಅತೀಂದ್ರಿಯಸುಖ, ಇವು ಇಷ್ಟವಾದ ಧ್ಯೇಯಗಳಾದವು. ವೇದಗಳಲ್ಲಿ ಯಜ್ಞಾದಿಕರ್ಮಗಳು ಸಾಧನ-ಗಳೆಂದು ಹೇಳಲ್ಪಟ್ಟಿದ್ದರೆ ಉಪಾಸನೆ, ಧ್ಯಾನ ಇವು ಉಪನಿಷತ್ತುಗಳಲ್ಲಿ ಸಾಧನಗಳೆಂದು ಹೇಳಲ್ಪಟ್ಟವೆ. ವೇದಗಳಲ್ಲಿ ಗೃಹಸ್ಥಾಶ್ರಮಾದಿ ಪ್ರವೃತ್ತಿ-ಮಾರ್ಗವು ಮುಖ್ಯವಿದ್ದಂತೆ ಉಪನಿಷತ್ತುಗಳಲ್ಲಿ ಅರಣ್ಯಗಳಲ್ಲಿದ್ದು ತಪಸ್ಸು ಮಾಡುವದು ಅಂದರೆ ನಿವೃತ್ತಿಮಾರ್ಗವು ಮುಖ್ಯವೆಂದು ಹೊಗಳಲ್ಪಟ್ಟಿದೆ. ಹೀಗೆ ವೇದಕಾಲದಲ್ಲಿಯ ಪ್ರವೃತ್ತಿಪರ ಕ್ರಮಗಳಿಗೆ ಪ್ರತಿಕ್ರಿಯಾರೂಪವಾಗಿ ನಿವೃತ್ತಿಪರ ಕ್ರಮಗಳು ಆರಂಭವಾದವು. ಆದರೆ ಅವೂ ಮುಂದೆ ಮೇರೆ ಮೀರಿದವು. ಯಥಾರ್ಥವಾಗಿ ಜೀವನಕ್ಕೆ, ಜೀವನೋದಯಕ್ಕೆ ಜೀವನ ಪ್ರಗತಿಗೆ, ಜೀವನ ಸಾಫಲ್ಯಕ್ಕೆ ಪ್ರವೃತ್ತಿನಿವೃತ್ತಿಗಳೆರಡೂ ಅವಶ್ಯವಿರುವವು. ಮಾನವೀಪ್ರಾಣಿಯೆಂದರೆ ಕೇವಲ ದೇಹವೂ ಅಲ್ಲ, ಕೇವಲ ಆತ್ಮವೂ ಅಲ್ಲ. ಮಾನವೀಮನಸು ಬಾಹ್ಯ ಮತ್ತು ಅಂತರ ಈ ಎರಡೂ ರಂಗಸ್ಥಲಗಳಲ್ಲಿ ನಟಿಸುವದು. ಮಾನವನ ಭವಿಷ್ಯವು ಸ್ವರ್ಗದಲ್ಲಿ ಅಥವಾ ಮೋಕ್ಷದಲ್ಲಿ ಇದ್ದರೆ ಅವನ ವರ್ತಮಾನವು ಇಹಲೋಕದಲ್ಲಿ ಇದೆ ಮಾನವನ ತಲೆಯು ಆಕಾಶದಲ್ಲಿದ್ದರೂ ಅವನ ಪಾದಗಳು ಭೂಮಿಯ ಮೇಲೆ ಇವೆ. ಆದುದರಿಂದ ಪ್ರವೃತ್ತಿನಿವೃತ್ತಿಗಳ ಅತಿರೇಕಗಳಲ್ಲಿ ಯಾವುದೇ ಒಂದು, ಮನುಷ್ಯನಿಗೆ ಉಪಕಾರಕವಾಗಲಾರದು.

ಈ ಮಾತನ್ನು ಗುರುತಿಸಿ, ಈ ಸನಾತನ ಸತ್ಯವನ್ನು ಸಾಕ್ಷಾತ್ಕರಿಸಿ, ಮುಂದೆ ಗೀತೆಯು ಈ ಪ್ರವೃತ್ತಿ ನಿವೃತ್ತಿ ಮಾರ್ಗಗಳ ಯೋಗ್ಯ ಸಮನ್ವಯ ವನ್ನು ಮಾಡಿತು; ಯಜ್ಞ, ಕರ್ಮ, ನಿವೃತ್ತಿ ಇವುಗಳಿಗೆ ತತ್ತ್ವಾರ್ಥಗಳನ್ನು ಕಲ್ಪಿಸಿ ಪೂರ್ಣ ಯೋಗವನ್ನು, ಸಮನ್ವಯ ಮಾರ್ಗವನ್ನು ಪ್ರತಿಪಾದಿಸಿತು. ಸಮನ್ವಯ ಮಾರ್ಗವು ಕೇವಲ ಹೊಸದು ಎಂದು ಹೇಳಲಿಕ್ಕೆ ಆಗದು. ಅದರ ಬೀಜಗಳು ಅಲ್ಲಲ್ಲಿ ಉಪನಿಷತ್ತುಗಳಲ್ಲಿ ಸಹ ಕಂಡುಬರುವವು. ಈ ರೀತಿ ಪರಂಪರೆಯು ಖಂಡನವಾಗದೆ ಒಂದೇ ಒಂದು ಸರಲ ಗಂಗಾಪ್ರವಾಹದಂತೆ ನಮ್ಮ ಆಧ್ಯಾತ್ಮಿಕ ಸಂಸ್ಕೃತಿಯು ಹರಿಯುತ್ತ ಬಂದಿದೆ. ನಿಜವಾದ ಆತ್ಮ ವಿಕಾಸದ ಮಾರ್ಗವಾದರೂ ಮೇಲೆ ಹೇಳಿದಂತೆ ಆತ್ಯಂತಿಕ ಪ್ರವೃತ್ತಿ ಅಥವಾ ಆತ್ಯಂತಿಕ ನಿವೃತ್ತಿ ಎಂಬ ಎರಡು ತುದಿಗಳ ನಡುವಿನಿಂದ ಸಮತ್ವದಿಂದ

ಇದು

ಮುಂದೆ ಸಾಗುವದು. ಯಾವುದೇ ತತ್ತ್ವಜ್ಞಾನದ ಅಭ್ಯಾಸ ಮಾಡುವವರು ಈ ವಿಷಯುವನ್ನು ಚೆನ್ನಾಗಿ ಲಕ್ಷದಲ್ಲಿಟ್ಟುಕೊಳ್ಳಬೇಕೆಂದು ನನ್ನ ಬಿನ್ನಹ ವಿರುವದು.

ಮೇಲೆ ಹೇಳಿದ ಸಾಮಾನ್ಯ ಪ್ರಮೇಯುಗಳನ್ನೆ ಛಾಂದೋಗ್ಯೋಪನಿಷತ್ತಿಗೆ ಹಚ್ಚಿ ಅದರಲ್ಲಿ ಉಕ್ತವಾದ ವಿಷಯುಗಳ ಬಗ್ಗೆ ಇಲ್ಲಿ ನಾಲ್ಕು ನುಡಿಗಳನ್ನು ನಾನು ಕೆಳಗೆ ಬರೆದಿರುವೆನು.

ಎಲ್ಲ ಉಪನಿಷತ್ತುಗಳ ಗುರಿಯು ಆತ್ಮಜ್ಞಾನವೇ ಇರುವಂತೆ ಛಾಂದೋಗ್ಯದ ಮುಖ್ಯ ಗುರಿಯಾದರೂ ಅದೇ ಇರುವದು. ಈ ಗುರಿಯು ಉಪನಿಷತ್ತಿನ ಶಾಂತಿಮಂತ್ರದಲ್ಲಿಯೆ, 'ಮಾಹಂ ಬ್ರಹ್ಮನಿರಾಕುರ್ಯಾಂ ಮಾಹಂ ಬ್ರಹ್ಮನಿರಾಕರೋತ್'— ನನ್ನಿಂದ ಬ್ರಹ್ಮನ ನಿರಾಕರಣವಾಗದಿರಲಿ, ನನ್ನನ್ನು ಬ್ರಹ್ಮನು ನಿರಾಕರಿಸದಿರಲಿ— ಎಂಬ ವಾಕ್ಯಗಳಲ್ಲಿ ಸ್ಪಷ್ಟವಾಗಿ ಕಾಣಿಸಲ್ಪಟ್ಟಿರುವದು. ಇದಲ್ಲದೆ ಉಪನಿಷದ್ಧರ್ಮಗಳು ನನ್ನಲ್ಲಿ ನೆಲೆಗೊಳ್ಳಲಿ, ಎಂದು ಅದರಲ್ಲಿ ಉಪಾಸಕನು ಬೇಡಿಕೊಂಡಿರುವನು. ಹೀಗೆ ಆತ್ಮಜ್ಞಾನವನ್ನು ಗುರಿಯಾಗಿಟ್ಟುಕೊಂಡರೂ ತನ್ನ ಕರ್ಮೇಂದ್ರಿಯ ಜ್ಞಾನೇಂದ್ರಿಯುಗಳು ತೇಜಸ್ವಿಯಾಗಲಿ, ಎಂದು ಉಪಾಸಕನು ಬೇಡುವನು ಹೊರತು ಅವು ಕುಗ್ಗಲಿ, ಮುಗ್ಗಲಿ, ಕಂದಲಿ ಎಂದು ಅವನು ಬೇಡಿಕೊಂಡಿಲ್ಲ; ಇದನ್ನು ನಾವು ಲಕ್ಷದಲ್ಲಿಟ್ಟುಕೊಳ್ಳಬೇಕು. ಶುದ್ಧ ಅಧ್ಯಾತ್ಮಮಾರ್ಗಿಗಳು ಕೂಡ ದೇಹದ ಕಡೆಗೆ ದುರ್ಲಕ್ಷ್ಯ ಮಾಡಕೂಡದೆಂಬುದೆ ಇದರ ತಾತ್ಪರ್ಯ.

ಈ ಉಪನಿಷತ್ತಿನಲ್ಲಿ ಆತ್ಮಜ್ಞಾನದ ಪ್ರಶಂಸೆಯು ಅಲ್ಲಲ್ಲಿ ಕಂಡುಬರುವದು. ಅದಕ್ಕೆ ಬ್ರಹ್ಮಜ್ಞಾನ, ಬ್ರಹ್ಮವಿದ್ಯೆ, ಆತ್ಮವಿದ್ಯೆ ಎಂಬ ಪರ್ಯಾಯನಾಮುಗಳು ಇರುವವು. ಕಡಲುಡಿಗೆಯಾದ ಈ ಇಡೀ ಪೃಥ್ವಿಯನ್ನು ಕೊಡಮಾಡಿದರೂ ಅನಧಿಕಾರಿಗೆ ಅಥವಾ ಅಯೋಗ್ಯನಿಗೆ ಈ ಆತ್ಮಜ್ಞಾನವನ್ನು ಹೇಳಕೂಡದು; ಯಾಕಂದರೆ ಈ ಜ್ಞಾನವು ಆ ಪೃಥಿವಿಗಿಂತ ಹೆಚ್ಚಿನದು, ಎಂದು ಉಪನಿಷತ್ಕಾರರ ಮತವಿರುವದು. ಇದು ಹಣ ಕೊಟ್ಟು ಪೇಟೆಯಲ್ಲಿ ಪಡೆಯತಕ್ಕ ವಿದ್ಯೆಯಲ್ಲ. ಇದು ಎಲ್ಲಕ್ಕಿಂತ ಹೆಚ್ಚಿನ ವಿದ್ಯೆ. ಈ ವಿದ್ಯೆ ಹಸ್ತಗತವಾಯಿತೆಂದರೆ ಆ ವರೆಗೆ ಕೇಳಿಸದೆ ಇದ್ದುದು ಕೇಳಿಸುವದು, ತಿಳಿಯದೆ ಇದ್ದುದು ತಿಳಿಯುವದು. ಈ ಜ್ಞಾನದಿಂದಲೆ ಮನುಷ್ಯನು ಶೋಕಾತೀತನಾಗಬಲ್ಲನು.

ಆತ್ಮಜ್ಞಾನಿಯು ಅಮೃತನು, ಅಭಯನು, ಸತ್ಯಸಂಕಲ್ಪನು, ಸತ್ಯಕಾಮನು ಆಗುವನು. ಅವನು ಪ್ರಿಯಾಪ್ರಿಯಗಳು ಎಂಬ ದ್ವಂದ್ವವನ್ನು ದಾಟಿಹೋಗುವನು. ಅವನು ಸದೈವ ಪ್ರಕಾಶದಲ್ಲಿರುವವನಾಗುವನು. ಅವನಿಗೆ ಹಸಿವೆನೀರಡಿಕೆಗಳು ಜನನಮರಣಗಳು ತಗಲಲಾರವು. ಅವನ ಪಾಪಗಳು ಬೆಂಕಿಯಿಟ್ಟ ಹುಲ್ಲುಗುಡ್ಡದಂತೆ ಸುಟ್ಟುಹೋಗುವವು. ಅವನು ಬ್ರಹ್ಮಲೋಕವನ್ನು ಪಡೆಯುವನು. ಆತ್ಮಾನಂದವನ್ನು ಪಡೆದು ಆತನು ಆತ್ಮರತನೂ ಆತ್ಮಕ್ರೀಡನೂ ಆಗುವನು. ಎಲ್ಲೆಲ್ಲಿಯೂ ಅವನಿಗೆ ಆತ್ಮಸಾಕ್ಷಾತ್ಕಾರವಾಗುವದು. ಅವನು ಸ್ವತಂತ್ರನೂ ಸ್ವರಾಟನೂ ಆಗುವನು. ಆತ್ಮನಿಂದಲೆ ಇದೆಲ್ಲ ಎಂಬುದು ಅವನಿಗೆ ಪ್ರತ್ಯಕ್ಷವಾಗುವದು. ಒಂದೇ ಮಾತಿನಲ್ಲಿ ಹೇಳುವದಾದರೆ, ಆತ್ಮಜ್ಞಾನಿಯು ಮುಕ್ತನಾಗುವನು, ಮೋಕ್ಷಪದವಿಯ ಅಧೀಶ್ವರನಾಗುವನು. ಮಿಕ್ಕ ಜ್ಞಾನಗಳೆಲ್ಲ, ವೇದ ಇತಿಹಾಸಗಳೆಲ್ಲ ಮನುಷ್ಯನಿಗೆ ನಾಮರೂಪಾತ್ಮಕ ಬಾಹ್ಯಸೃಷ್ಟಿಯಲ್ಲಿ ಪ್ರಭುತ್ವವನ್ನು ಪ್ರಾಪ್ತಮಾಡಿಕೊಡಬಹುದು. ಆದರೆ ಆತ್ಮಜ್ಞಾನವೊಂದೇ ಮನುಷ್ಯನನ್ನು ಇವುಗಳಾಚೆಗಿರುವ ಅಮೃತತತ್ವವನ್ನು ಪ್ರಾಪ್ತಮಾಡಿಕೊಡಬಲ್ಲದು. ತ್ರಯೀ ವಿದ್ಯೆಯು, ಕರ್ಮಮಾರ್ಗದ, ಯಜ್ಞಯಾಗಾದಿ ಕರ್ಮಗಳ ಫಲದಿಂದ ಪುಣ್ಯಲೋಕವು ಪ್ರಾಪ್ತವಾಗಬಹುದು. ಅಂಥ ಪುಣ್ಯಲೋಕಗಳು ಭಂಗುರವಾದವುಗಳು. ಅವು ಅಕ್ಷಯವಾದವುಗಳಲ್ಲ. ಪುಣ್ಯಲೋಕಕ್ಕೆ ಹೋದ ಜನರು ಪುಣ್ಯಕ್ಷಯವಾದೊಡನೆ ಪುನಃ ಇಹಲೋಕಕ್ಕೆ ಬರುವರು. ಅವರನ್ನು ಜನ್ಮಮರಣ ಚಕ್ರವು ಬಿಟ್ಟಿರುವದಿಲ್ಲ. ಬ್ರಹ್ಮಜ್ಞಾನಿಯು ಮಾತ್ರ ಅವುಗಳನ್ನು ದಾಟಿ ಅಕ್ಷಯಸುಖವನ್ನು ಪಡೆಯಬಲ್ಲನು. ಆದುದರಿಂದ ಉಪನಿಷತ್ಕಾರರು ಕರ್ಮಕಾಂಡವು ಹೀನವೆಂದು ಜರೆದು ಜ್ಞಾನಮಾರ್ಗವೆ ಹೆಚ್ಚಿನದೆಂದು ಹೇಳಿರುವರು.

ಇನ್ನು ಇಲ್ಲಿ ಜ್ಞಾನವೆಂದರೆ ಕೇವಲ ಬೌದ್ಧಿಕ ಜ್ಞಾನವಲ್ಲವೆಂಬುದನ್ನು ನಾವು ಲಕ್ಷದಲ್ಲಿಡಲಿಕ್ಕೆ ಬೇಕು. ಜ್ಞಾನವೆಂದರೆ ಅನುಭವಯುಕ್ತ ಆತ್ಮಜ್ಞಾನವು, ಆತ್ಮಾನುಭವವು, ಸತ್ಯಸಾಕ್ಷಾತ್ಕಾರವು. ಯಾವ ರೀತಿ ಈ ಬಾಹ್ಯ ವಸ್ತುಗಳು ಇಂದ್ರಿಯಗಳಿಗೆ ಗೋಚರವಾಗುವವೋ ಆ ರೀತಿ ಜಗತ್ತಿನಲ್ಲಿ ಗೂಢವಾಗಿ ಇರುವ ಆತ್ಮತತ್ವವು ಒಳಗಣ್ಣಿಗೆ ಸ್ಪಷ್ಟವಾಗಿ ಸತತ ಗೋಚರವಾದರೆ ಅದೇ ಸಾಕ್ಷಾತ್ಕಾರವೆನಿಸುವದು. ಅದು ಆ ಬಳಿಕ ನಮ್ಮ ಸ್ವಾನು-

ಭವದ ಮಾತಾಗುವದು. ಅಲ್ಲಿಯವರೆಗೆ ಕೇವಲ ಕಲ್ಪನಾಸೃಷ್ಟಿಯಲ್ಲಿಯೆ ಇರುವದು. ಇಂಥ ಅತೀಂದ್ರಿಯ ಸಾಕ್ಷಾತ್ಕಾರದಿಂದ ಮಾತ್ರ ಮುಕ್ತಿಯು ದೊರೆಕೊಳ್ಳುವದು, ಪಾಪಗಳು ಸುಟ್ಟು ಬೂದಿಯಾಗುವವು, ಆತ್ಮೈಪವ್ಯ ಬುದ್ಧಿಯು ಅಳವಡುವದು, ಚಿತ್ ಸಾಮ್ರಾಜ್ಯದ ಮೇಲೆ ಪೂರ್ಣ ಪ್ರಭುತ್ವವು ಸ್ಥಾಪಿತವಾಗುವದು ಮತ್ತು ಅಖಂಡ ಆತ್ಮಾನಂದವು ನೆಲೆಗೊಳ್ಳುವದು.

ಯಾವ ಆತ್ಮನ ಜ್ಞಾನವಾಯಿತೆಂದರೆ, ಅನುಭವವಾಯಿತೆಂದರೆ, ಮೋಕ್ಷಪದವು ಕೈವಶವಾಗುವದೋ ಆ ಆತ್ಮನ ಸ್ವರೂಪವೇನು, ಆ ಮೂಲ ವಸ್ತು ಹೇಗೆ ಇರುವದು ಇದನ್ನು ನೋಡುವ. ಆತ್ಮ ಎಂಬ ಶಬ್ದವು ಇಲ್ಲಿ ಬ್ರಹ್ಮ, ಪರಂಜ್ಯೋತಿ, ಮೂಲವಸ್ತು, ಸತ್, ಮುಖ್ಯಪ್ರಾಣ, ಚೈತನ್ಯ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಆತ್ಮನು ಸರ್ವವ್ಯಾಪಿ, ಅವನು ಸೃಷ್ಟಿಯ ಉತ್ಪತ್ತಿ ಸ್ಥಿತಿ ಲಯಕ್ಕೆ ಕಾರಣನು, ಚಿನ್ಮಾತ್ರನು, ಜ್ಯೋತಿಸ್ವರೂಪನು, ಸತ್ಯ ಸಂಕಲ್ಪನು, ಸತ್ಯಕಾಮನು. ಇದೆಲ್ಲವೂ, ಗೋಚರವಾಗುವುದೆಲ್ಲವೂ ಆತ್ಮನೇ ಇರುವನು. ಅವನು ಎಲ್ಲೆಲ್ಲಿಯೂ ಜ್ಯೋತಿಯಂತೆ ಪ್ರಕಾಶಿಸುವನು. ಈ ಆಕಾಶ, ವಾಯು, ಆದಿತ್ಯಾದಿಗಳು, ಮರುತಾದಿ ದೇವತೆಗಳು, ಆ ಆತ್ಮನ ಕೇವಲ ಅಂಶಮಾತ್ರಗಳು. ಅವನು ಇವೆಲ್ಲವುಗಳಾಚೆಗೆ, ಇವುಗಳನ್ನು ಸಂಪೂರ್ಣ ವ್ಯಾಪಿಸಿ ಇವುಗಳಿಗೆ ಶಕ್ತಿಯನ್ನು ಪೂರೈಸುತಿದ್ದರೂ ಅವುಗಳಿಂದ ಅಲಿಪ್ತನೆ ಇರುವನು. ಈ ಶರೀರವನ್ನು ಚಲಿಸುವ ಸಾಮರ್ಥ್ಯವು ಆತ್ಮನ ಮೂಲಕವೆ ಉಂಟಾದುದು. ಆತ್ಮನು ಇಲ್ಲದಿದ್ದರೆ ಈ ಶರೀರವ್ಯಾಪಾರಗಳೆಲ್ಲ ನಿಂತು ಹೋಗುವವು. ಆ ಆತ್ಮನಿಗೆ ಬಾಹ್ಯವಸ್ತುಗಳ ಜ್ಞಾನವಾಗಬೇಕೆಂದೇ ಈ ಇಂದ್ರಿಯಾದಿಗಳು ಇರುವವು. ಆತ್ಮನಿಂದಲೆ ತೇಜ, ಆಪ, ಮುಂತಾದವುಗಳು ಹುಟ್ಟಿ ಸೃಷ್ಟಿಯು ಮೊದಲು ನಿರ್ಮಾಣವಾಯಿತು. ಚರಾಚರ ಸೃಷ್ಟಿಯು ಆ ಆತ್ಮನಲ್ಲಿಯೆ ಲೀನವಾಗಿ ಪುನಃ ಆತ್ಮನಿಂದಲೆ ಆವಿರ್ಭವಿಸುವದು. ಆತ್ಮನು ಅತ್ಯಂತ ಸೂಕ್ಷ್ಮನು, ಎಲ್ಲವುಗಳ ಆಶ್ರಯನು. ಇದೆಲ್ಲವೂ ಅವನಿಂದ ವ್ಯಾಪ್ತವು. ಅವನೇ ಸತ್ಯವಸ್ತುವು. ಆತ್ಮನೆಂಬುವನು ಕೇವಲ ಏಕಾಕಿಯು, ಅಮೃತನು, ಅಖಂಡನು, ಅನಂತನು. ಪಾಪಪುಣ್ಯ, ಸುಖ ದುಃಖ, ಶೀತ–ಉಷ್ಣ ಮುಂತಾದ ದ್ವಂದ್ವಗಳು ಅವನನ್ನು ಮುಟ್ಟಲರಿಯುವು. ಅವನು ಅಕೃತನು ಅಂದರೆ ಸ್ವಯಂಭುವು, ತಮದಾಚೆಗಿರುವವನು. ನಿಜವಾಗಿ ನೋಡಿದರೆ ಅವನು ಅಜ್ಞೇಯನು; ಯಾಕಂದರೆ ಅವನು ಅಂತರ್ಬಾಹ್ಯ

ವಿರಹಿತ, ಅದ್ವಿತೀಯ, ನಿರ್ದ್ವಂದ್ವ, ನಾಮರೂಪದೇಶಕಾಲಾತೀತ ವಸ್ತುವಿರುವದರಿಂದ ಅವನು ಜ್ಞಾನವಿಷಯನಾಗಲರಿಯನು. ನಮ್ಮ ಬುದ್ಧಿಯು ನಾಮರೂಪಗಳ ಮಟ್ಟಿಗೆ, ದೇಶಕಾಲಗಳ ಮಟ್ಟಿಗೆ, ಸಗುಣವಸ್ತುಗಳ ಮಟ್ಟಿಗೆ ಮಾತ್ರ ಕೆಲಸ ಮಾಡಬಲ್ಲದು. ನಿರ್ಗುಣ, ಅನಂತ, ದೇಶಕಾಲಾತೀತನಾದ ಆತ್ಮನನ್ನು ವರ್ಣಿಸಲಿಕ್ಕೆ ನಮ್ಮಲ್ಲಿ ಶಬ್ದಸೃಷ್ಟಿಯೆ ಇಲ್ಲ. ಹೀಗಿದ್ದರೂ ಆ ಆತ್ಯಂತಿಕ ಸತ್ಯವೆಂಬ ಆತ್ಮವಸ್ತುವನ್ನು ನಾವು ನಿರ್ದೇಶಗಳಿಂದ ತಿಳಿದುಕೊಳ್ಳಬೇಕಾದರೆ ಮೇಲೆ ಹೇಳಿದಂತೆ ಆತ್ಮನ ವರ್ಣನೆ ಮಾಡದ ಹೊರತು ಇನ್ನೊಂದುಪಾಯವಿಲ್ಲ. ಯಥಾರ್ಥವಾಗಿ ಶಬ್ದಾತೀತವಿದ್ದುದನ್ನು ಶಬ್ದಕ್ಕೆ ಒಳಗುಮಾಡುವ ಮಾನವ ಮನದ ಕುಂಟ ಪ್ರಯತ್ನವಿದು.

ಯಾವ ರೀತಿ ಅಜ್ಞೇಯವನ್ನು ಬುದ್ಧಿಯ ಭಾಷೆಯಲ್ಲಿ, ಅನಿರ್ವಚನೀಯ-ವನ್ನು ವಚನದ ತೆಕ್ಕೆಯಲ್ಲಿ ತರಲಿಕ್ಕೆ ಪ್ರಯತ್ನಮಾಡಲ್ಪಟ್ಟಿದೆಯೊ ಅದೇ ರೀತಿ ಈ ಅಚಿಂತ್ಯವಾದ ಆತ್ಮನ ಚಿಂತನಮಾಡುವದಕ್ಕಾಗಿ ಅಂದರೆ ಉಪಾಸನೆ-ಗಾಗಿ ಅವನಿಗೆ ಸ್ಥಾನಪ್ರತೀಕಾದಿಗಳು ಕಲ್ಪಿಸಲ್ಪಟ್ಟಿವೆ. ಛಾಂದೋಗ್ಯದಲ್ಲಿ ಪ್ರಾಣವೆ ಪಿಂಡಗತಪ್ರತೀಕವೆಂದು ಹೇಳಲ್ಪಟ್ಟಿದೆ. ಅದೇ ಪ್ರಕಾರ ಆದಿತ್ಯನು ಬ್ರಹ್ಮಾಂಡಗತ ಪ್ರತೀಕನೆಂದು ಉಲ್ಲೇಖವಿದೆ. ಆತ್ಮನು ಇರುವ ಸ್ಥಾನವನ್ನು ಕುರಿತು ಒಳ್ಳೆ ರುಚಿಕಟ್ಟಾದ ವರ್ಣನೆಯು ಒಂದೆಡೆಗೆ ಬಂದಿದೆ. ಮಾನವ ಹೃದಯವೆಂಬುದೊಂದು ಪುರವು. ಅದರಲ್ಲಿ ಒಂದು ಅಚ್ಚ ಬಿಳಿಯ ಕಮಲ-ವಿರುವದು. ಆ ಕಮಲಗತವಾದ ಆಕಾಶದಲ್ಲಿ ಇದ್ದುದೆ ಆತ್ಮವು, ಬ್ರಹ್ಮವು ಎಂದು ವರ್ಣನೆ ಇರುವದು. ಆ ಸೂಕ್ಷ್ಮತಮ ಆಕಾಶದಲ್ಲಿ ಈ ವಿಶ್ವಕೋಟಿ-ಗಳೆಲ್ಲ ಒಳಗೊಂಡಿರುವವು. ಒಂದು ಚಿಕ್ಕ ವಟಬೀಜವನ್ನು ಒಡೆದರೆ ಅದರಲ್ಲಿ ಏನೂ ಕಾಣುವದಿಲ್ಲ. ಆದರೆ ಅದರಿಂದಲೆ ಮಹಾಮರವು ಹುಟ್ಟಿ ಬೆಳೆಯುವದು. ಆ ಅದೃಶ್ಯ ಅಗೋಚರ ವಸ್ತುವೆ ಆತ್ಮನು, ಎಂದು ಛಾಂದೋಗ್ಯವು ಹೇಳುವದು. ಇದೇ ರೀತಿ, ಆತ್ಮನ ಸರ್ವವ್ಯಾಪಕತ್ವ, ಸರ್ವಾಶ್ರಯತ್ವ, ಮುಂತಾದವುಗಳನ್ನು ಉಪನಿಷತ್ಕಾರರು, ನೀರಲ್ಲಿ ಕೂಡಿಹೋದ ಉಪ್ಪಿನ ಹರಳಿನಂತೆ ಸರ್ವವ್ಯಾಪಕ, ಎಲ್ಲ ನದಿಗಳು ಹೋಗಿಕೂಡುವ ಸಾಗರದಂತೆ ಸರ್ವಾಶ್ರಯ, ಎಂಬ ದೃಷ್ಟಾಂತಗಳನ್ನು ಕೊಟ್ಟು ವರ್ಣಿಸಿರುವರು.

ಈ ಉಪನಿಷತ್ತಿನಲ್ಲಿ ಬ್ರಹ್ಮನ ಆದೇಶಗಳೆಂದು ಎರಡುಮಂತ್ರಗಳು ಬಂದಿ-ರುವವು. 'ಓಂ' ಎಂಬುದೊಂದು. 'ತತ್ತ್ವಮಸಿ' ಎಂಬುದು ಎರಡನೆಯದು.

'ತತ್ತ್ವಮಸಿ' ಎಂಬುದು ಮಹಾವಾಕ್ಯವೆನಿಸುವದು. ಮಹಾವಾಕ್ಯವೆಂದರೆ ಅತ್ಯಂತ ಸಾರಗರ್ಭವಾದ ವಾಕ್ಯ. ಓಂಕಾರೋಪಾಸನೆಯು ಛಾಂದೋಗ್ಯದ ಮೊದಲನೆಯ ಅಧ್ಯಾಯದಲ್ಲಿಯೆ ಚೆನ್ನಾಗಿ ವರ್ಣಿಸಲ್ಪಟ್ಟಿದೆ. ಅದು ಎಲ್ಲ ವೇದಗಳ ಸಾರ ಎಂದು ಹೇಳಿ ಸಾರಾತ್ ಸಾರತಮವಾದ ಈ ಮಂತ್ರವನ್ನು ಬ್ರಹ್ಮವೆಂದು ಉಪಾಸಿಸಬೇಕು, ಎಂದು ಉಪದೇಶವಿರುವದು. ಬಾಹ್ಯ ವಿಷಯಗಳ ಬೆನ್ನು ಬಿದ್ದು ಹರಿದಾಡುವ ಚಂಚಲಚಿತ್ತವನ್ನು ಸ್ಥಿರೀಕರಿಸಲಿಕ್ಕೆ ಏನಾದರೊಂದು ಆಲಂಬನವು ಬೇಕು. ಮಂತ್ರ, ನಾದ, ಜ್ಯೋತಿ, ಪ್ರತೀಕ ಈ ಮುಂತಾದ ಅನೇಕ ಆಲಂಬನಗಳಲ್ಲಿ ಒಂದನ್ನು ಇಟ್ಟುಕೊಂಡು ಉಪಾಸನೆ ಯನ್ನು ಮಾಡುವ ಪದ್ಧತಿಯುಂಟು. ಆದರೆ ಉಪನಿಷತ್ಕಾಲದಲ್ಲಿ ಈಗಿನಂತೆ ಮನುಷ್ಯದೇಹಧಾರಿಯಾದ ಅವತಾರರೂಪ ಪ್ರತೀಕವನ್ನು ಕೈಕೊಳ್ಳುವ ರೂಢಿಯು ಇದ್ದೀ ಇಲ್ಲವೆಂದು ಹೇಳಬಹುದು. ಈ ರೂಢಿಯು ಮುಂದೆ ಪುರಾಣಕಾಲಗಳಲ್ಲಿ ಅವತಾರಕಲ್ಪನೆಯೊಡನೆ ಬಂದಿರಬೇಕು. ಅವತಾರ ಕಲ್ಪನೆಯು ಕಿಂಚಿತ್ ಕೂಡ ಉಪನಿಷತ್ತುಗಳಲ್ಲಿ ಕಂಡುಬರುವದಿಲ್ಲ. ಅಂದ ಬಳಿಕ ಅವತಾರಗಳನ್ನು ಪೂಜಿಸುವ ಪದ್ಧತಿಯು ಆ ಕಾಲದಲ್ಲಿ ಎಲ್ಲಿಂದ ಬರಬೇಕು? ಇಲ್ಲಿ ನಿರ್ಗುಣ ನಿರಾಕಾರ ಶಬ್ದಾದಿ ವಿಷಯಗಳಾಚೆಗಿರುವ ಆತ್ಮನನ್ನು ಓಂಕಾರ ಮಂತ್ರದ ಆಲಂಬನದಿಂದ ಉಪಾಸಿಸಬೇಕು, ಎಂದು ಛಾಂದೋಗ್ಯಕಾರರು ಉಪದೇಶಮಾಡಿರುವರು. ಅದೇ ಪ್ರಕಾರ, ತತ್-ತ್ವಮ್-ಅಸಿ ಎಂಬ ವಾಕ್ಯದಿಂದ ಭಕ್ತನ ಆತ್ಮವೂ ಸರ್ವವ್ಯಾಪಿ ಪರ-ಮಾತ್ಮನೂ ತತ್ತ್ವತಃ ಒಂದೇ ಎಂದು ಉಪನಿಷತ್ಕಾರರು ಪ್ರತಿಪಾದಿಸಿರುವರು.

ಈ ಆತ್ಮನ ಸಾಕ್ಷಾತ್ಕಾರದಿಂದ ದೊರೆಯತಕ್ಕ ಮೋಕ್ಷದ ಸ್ವರೂಪವನ್ನು ಇಲ್ಲಿ ಸ್ವಲ್ಪ ವಿಶದಪಡಿಸುವದು ಅವಶ್ಯವಿರುವದು. ಮೋಕ್ಷವೆಂದರೆ ಆತ್ಯಂತಿಕ ಗತಿಯು, ಚಿತ್ತದ ಒಂದು ಸ್ಥಿರವಾದ ಸ್ಥಿತಿಯು. ವೇದಗಳಲ್ಲಿ ಸಾಮಾನ್ಯತಃ ಕೊನೆಯ ಗತಿಯೆಂದರೆ ನಿರಂತರ ಸ್ವರ್ಗಸುಖ ಮತ್ತು ಅದನ್ನು ದೊರಕಿಸುವ ಮಾರ್ಗವೆಂದರೆ ಯಜ್ಞಯಾಗಾದಿ ಕರ್ಮಗಳು. ಉಪನಿಷತ್ತುಗಳು ಈ ಮಾತನ್ನು ಅಲ್ಲಗಳೆದು ಕೃತದಿಂದ ಅಂದರೆ ಕರ್ಮದಿಂದ ಅಕೃತವು ಅಂದರೆ ಸ್ವಯಂಭು ಆತ್ಮಸ್ಥಾನವು ದೊರೆಯದು, ಎಂಬ ಸಿದ್ಧಾಂತವನ್ನು ಮಾಡಿದವು. ಕರ್ಮದ ಬಂಧಕತ್ವವು ಕರ್ಮಗಳನ್ನು ಮಾಡುತ್ತ ಹೋಗುವದರಿಂದ, ಅಳಿಯಲರಿಯದು. ಕರ್ಮವನ್ನು ಬಿಟ್ಟೀ ಅಥವಾ ಆಸಕ್ತಿಯನ್ನು ತೊರೆದೇ

ನಾವು ಕರ್ಮಾತೀತವಾದ ಬ್ರಹ್ಮಲೋಕವನ್ನು ಪಡೆಯುವದು ಸಾಧ್ಯ, ಎಂದು ಅವರು ಪ್ರಮೇಯವನ್ನು ಕಟ್ಟಿದರು. ಆದುದರಿಂದ ಉಪನಿಷತ್ಕಾರರಿಗೆ ಮೋಕ್ಷವೆಂದರೆ ಜನ್ಮಮರಣಗಳಿಂದ ಬಿಡುಗಡೆ, ಸ್ವರ್ಗಾದಿ ಲೋಕಗಳಿಂದ ಬಿಡುಗಡೆ, ಪಾಪಗಳಿಂದ ಬಿಡುಗಡೆ, ಅಲ್ಪದಿಂದ ಬಿಡುಗಡೆ, ಹಸಿವೆ-ನೀರಡಿಕೆ ಶೀತ-ಉಷ್ಣ ಮುಂತಾದ ದ್ವಂದ್ವಗಳಿಂದ ಬಿಡುಗಡೆ, ಎಲ್ಲಕ್ಕೂ ಹೆಚ್ಚಿನದೆಂದರೆ ಕರ್ಮದಿಂದ ಬಿಡುಗಡೆ. ಇವೆಲ್ಲವುಗಳಿಂದ ಬಿಡುಗಡೆಹೊಂದಿ ಮುಕ್ತನು ಆತ್ಮ-ನೊಡನಾಡುತ್ತ ಆತ್ಮಾನಂದದಲ್ಲಿ ನಿಮಗ್ನನಿರುವನು, ಸ್ವತಂತ್ರನಾಗುವನು. ಅವನು ಸತ್ಯಸಂಕಲ್ಪನಾಗಿ ಬೇಕಾದ ಲೋಕಗಳಲ್ಲಿ ವಿಹರಿಸಬಲ್ಲನು, ಎಂಬ ವರ್ಣನೆಯೂ ಇರುವದು. ಆದರೆ ಮುಕ್ತನು ಸತ್ಯಕಾಮನಾಗುವನು ಎಂಬು-ವದು ಅವನು ಕಾಮಾತೀತನಾಗಿರುವದರಿಂದ ಕೇವಲ ಅರ್ಥವಾದಾತ್ಮಕವೆಂದೇ ಹೇಳಬಹುದು. ಸತತ ನಿರ್ಮಲ ನಿರಾಲಂಬ ಆನಂದದಲ್ಲಿ ಸ್ವತಂತ್ರನಾಗಿ ಸ್ವಾತ್ಮನಲ್ಲಿ ಅಥವಾ ಆತ್ಮಸ್ವರೂಪದಲ್ಲಿ ಲೀನವಾಗುವದೆ ಮುಕ್ತಿ, ಪರಮಪದವಿ, ಎಂಬುದು ಉಪನಿಷತ್ಕಾರರ ಮುಕ್ತಿಸಿದ್ಧಾಂತವೆಂದು ಹೇಳಬಹುದು.

ಇನ್ನು ಮುಕ್ತಿಗೆ ಯಾವ ದೇವಯಾನ ಮಾರ್ಗದಿಂದ ಉಪಾಸಕನು ಹೋಗುವನೊ ಅದರ ವರ್ಣನೆಯಾದರೂ ಛಾಂದೋಗ್ಯದಲ್ಲಿ ಪ್ರತ್ಯೇಕವಾಗಿ ಕೊಡಲ್ಪಟ್ಟಿದೆ. ಅದಕ್ಕೆ ಅರ್ಚಿರಾದಿ ಮಾರ್ಗ, ದೇವಯಾನ, ಜ್ಯೋತಿರ್ಮಾರ್ಗ, ಪ್ರಕಾಶಮಾರ್ಗ, ಉತ್ತರಾಯಣಮಾರ್ಗ, ಜ್ಞಾನಮಾರ್ಗ ಎಂಬ ಬೇರೆ ಬೇರೆ ಹೆಸರುಗಳು ಇರುವವು. ಜ್ಞಾನಮಾರ್ಗದಿಂದ ಮುಕ್ತಿಪಡೆಯುವವನು ಮೊದಲು ಅರ್ಚಿಲೋಕಕ್ಕೆ ಹೋಗಿ ಅಲ್ಲಿಂದ ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ತು, ಈ ಮಾರ್ಗವಾಗಿ ಸಾಗುವನು. ಆ ವಿದ್ಯುಲ್ಲೋಕದಲ್ಲಿ ಅಮಾನವ ಪುರುಷನಿರುವನು. ಅವನು ಉಪಾಸಕ ನನ್ನು ಬ್ರಹ್ಮಲೋಕಕ್ಕೆ ಕರಕೊಂಡು ಹೋಗುವನು. ಇದೇ ದೇವಯಾನ ಪಂಥವು. ಜ್ಞಾನಮಾರ್ಗದಿಂದ, ಉಪಾಸನಾಮಾರ್ಗದಿಂದ ಮುಕ್ತಿಪಡೆಯುವ ವರು ಈ ಪಥದಿಂದ ಸಾಗಿ ನಿರಂತರ ಬ್ರಹ್ಮಲೋಕವನ್ನು ಪಡೆದು ಅಖಂಡ ವಾಗಿ ಅಲ್ಲಿಯೆ ಇರುವರು. ಇದಕ್ಕೆ ಪ್ರತಿಯಾಗಿ ಪಿತೃಯಾನ ಮಾರ್ಗ ವಿರುವದು. ಯಜ್ಞಯಾಗಾದಿ, ಇಷ್ಟಾಪೂರ್ತಾದಿ ಮಾಡಿ ಕರ್ಮಮಾರ್ಗದಿಂದ ನಡೆಯುವವರು ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಸಂವತ್ಸರ, ಪಿತೃಲೋಕ, ಆಕಾಶ, ಚಂದ್ರಲೋಕ ಹೀಗೆ ಸಾಗುವರು. ಆ ಚಂದ್ರಲೋಕ

ದಲ್ಲಿ ತಮ್ಮ ಪುಣ್ಯಕ್ಷಯವಾಗುವ ವರೆಗೆ ಸುಖವನ್ನು ಭೋಗಿಸಿ ಮುಂದೆ ತಮ್ಮ ಪೂರ್ವಕರ್ಮದಂತೆ ಪುನರ್ಜನ್ಮವನ್ನು ಹೊಂದುವರು. ಇದಕ್ಕೆ ಧೂಮ್ರಾದಿ ಮಾರ್ಗ, ಪಿತೃಯಾನ, ತಮೋಮಾರ್ಗ, ದಕ್ಷಿಣಾಯನಮಾರ್ಗ, ಕರ್ಮಮಾರ್ಗ ಎಂಬ ಹೆಸರುಗಳೂ ಇರುವವು. ಇವೆರಡಲ್ಲದೆ ಮೂರನೆಯ ದೊಂದು ಗತಿಯು ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುವದು. ಅದಾವುದೆಂದರೆ, ಯಾರು ಜ್ಞಾನಮಾರ್ಗದಿಂದ ಸಾಗದೆ, ಕರ್ಮಮಾರ್ಗದಿಂದಲೂ ಸಾಗದೆ, ಕೇವಲ ಪಶುತುಲ್ಯ ಜೀವನವನ್ನು ಸಾಗಿಸುವರೊ ಅವರು ಅತ್ತ ಮುಕ್ತಿಗೂ ಹೋಗರು, ಇತ್ತ ಸ್ವರ್ಗವನ್ನೂ ಕಾಣರು. ಅವರು ಪುನಃ ಪುನಃ ಇದೇ ಲೋಕ ದಲ್ಲಿ ಹುಟ್ಟುವರು ಸಾಯುವರು, ಹಾಗೂ ಹುಟ್ಟುವದು ಸಾಯುವದು ಎಂಬ ಈ ಜನನಮರಣ ಚಕ್ರದಲ್ಲಿ ಸುತ್ತುತ್ತ ತೊಳಲಾಡುವರು. ಇಲ್ಲಿ ಉಪನಿಷ-ತ್ಕಾರರು ನರಕಲೋಕವೆಂಬುದನ್ನು ಉಲ್ಲೇಖಿಸದೆ ಈ ಪ್ರಕಾರದ ಗತಿಯನ್ನು ಪಾಪಿಗಳಿಗಾಗಿ ಮೀಸಲಿಟ್ಟಿರುವರು. ಮೇಲೆ ಹೇಳಿದ ಮೂರೇ ಗತಿಗಳು ಈ ಛಾಂದೋಗ್ಯದಲ್ಲಿ ಇವೆ—ಮುಕ್ತಿ, ಸ್ವರ್ಗ, ಇಹಲೋಕದಲ್ಲಿ ಪುನರಪಿ ಜನನ ಪುನರಪಿ ಮರಣ. ಮುಕ್ತಿಯಿಂದ ಜನ್ಮಮರಣಗಳು ಪೂರಾ ತಪ್ಪಿಹೋಗುವವು, ಸ್ವರ್ಗಪ್ರಾಪ್ತಿಯಿಂದ ಪುಣ್ಯಕ್ಷಯವಾಗುವ ವರೆಗೆ ಅವು ತಪ್ಪುವವು, ಮತ್ತು ಮೂರನೆಯ ಗತಿಯಲ್ಲಿ ಅವು ತಪ್ಪದೆ ಒಂದೇಸವನೆ ಬೆನ್ನುಹತ್ತುವವು. ಮುಕ್ತ ಸ್ಥಿತಿಯಲ್ಲಿ ಅತೀಂದ್ರಿಯ ಆನಂದದ ಆತ್ಯಂತಿಕ ಅನುಭವವು ನಿರಂತರವಿರುವದು. ಸ್ವರ್ಗದಲ್ಲಿ ನಿರ್ದುಃಖವಾದ ಸೂಕ್ಷ್ಮವಿಷಯಾನಂದವು ಪುಣ್ಯಕ್ಷಯವಾಗುವ ವರೆಗೆ ದೊರೆಯುತ್ತ ಇರುವದು ಮತ್ತು ಪುಣ್ಯಕ್ಷಯವಾದಬಳಿಕ ಪುನಃ ಮೃತ್ಯುಲೋಕಕ್ಕೆ ಬರಬೇಕಾಗುವದು. ಮೂರನೆಯ ಗತಿಯಲ್ಲಿ ಇಹಲೋಕ-ದಲ್ಲಿಯೇ ಯಾವಾಗಲು ಇದ್ದು ಪುನಃ ಹುಟ್ಟುತ್ತ ಪುನಃ ಸಾಯುತ್ತ ಈ ಲೋಕದ ದುಃಖಾನುಭವಗಳಲ್ಲಿ ತೊಳಲಾಡುತಿರಬೇಕಾಗುವದು.

ಇದುವರೆಗೆ ಆತ್ಮಸ್ವರೂಪ, ಆತ್ಮಜ್ಞಾನ, ಆತ್ಮಜ್ಞಾನಿಯ ಗತಿ, ಮೋಕ್ಷ-ಸ್ವರೂಪ ಮುಂತಾದವುಗಳನ್ನು ವಿವರಿಸಿದ್ದಾಯಿತು. ಇನ್ನು ಆ ಧ್ಯೇಯವನ್ನು ಪಡೆಯುವ ಯಾವ ಮಾರ್ಗವನ್ನು ಛಾಂದೋಗ್ಯಕಾರರು ಹೇಳಿರುವರು ಇದನ್ನು ಮುಖ್ಯವಾಗಿ ನೋಡುವಾ.

ಉಪನಿಷತ್ಕಾರರು ದೇವದೇವತೆಗಳನ್ನು ಯಜ್ಞಯಾಗಾದಿ ಕರ್ಮಗಳಿಂದ ಪ್ರಸನ್ನಮಾಡುವ ಮಾರ್ಗವನ್ನು ಪೂರಾ ಬಿಟ್ಟಿದ್ದಲ್ಲದೆ ಅದು ಹೀನತರವಾದ

ಮಾರ್ಗವೆಂದು ಅದನ್ನು ಅವರು ಹೀಯಾಳಿಸಿದ್ದಾರೆ. ಅರ್ಥಾತ್ ಸ್ವರ್ಗವು ತಮ್ಮ ಗುರಿಯಲ್ಲವೆಂದು ಅವರು ಸ್ಪಷ್ಟವಾಗಿ ಸಾರಿದ್ದಾರೆ. ಯಾಕಂದರೆ ಸ್ವರ್ಗವೆಂಬುದು ಅಕ್ಷಯವಾದ ಗತಿಯಲ್ಲ. ಈ ರೀತಿ ಅವರ ಗುರಿಯೇ ಬೇರೆಯಿರುವುದರಿಂದ ಉಪನಿಷತ್ಕಾರರು ಬೇರೆ ಸಾಧನಗಳನ್ನೇ ಹುಡುಕ-ಬೇಕಾಯಿತು. ಅವರು ಕರ್ಮಮಾರ್ಗವನ್ನು, ಪ್ರವೃತ್ತಿಪರ ಯಜ್ಞಯಾಗಾದಿ ಗಳನ್ನು, ಕಾಮ್ಯವೃತ್ತಿಯನ್ನು ಬಿಟ್ಟು, ಉಪಾಸನಾಮಾರ್ಗವನ್ನು ನಿವೃತ್ತಿಪರ ಜ್ಞಾನಮಾರ್ಗವನ್ನು, ನಿಷ್ಕಾಮವೃತ್ತಿಯನ್ನು ಪ್ರತಿಪಾದಿಸಿದರು. ಅವರು ಯಜ್ಞಯಾಗಾದಿಗಳನ್ನು ಅಥವಾ ಕರ್ಮಮಾರ್ಗವನ್ನು ಪುಟ್ಟಪೂರಾ ಬಿಟ್ಟ-ರೆಂದು ಇದರ ಅರ್ಥವಲ್ಲ. ಆದರೆ ಅವರು ಅವುಗಳಿಗೆ ಬಹಳೇ ಗೌಣಸ್ಥಾನ ವನ್ನು ಕೊಟ್ಟರು. ಯಾಕಂದರೆ, ಅಕೃತವಾದ ಮೋಕ್ಷಪದವು ಕೃತದಿಂದ ಅಂದರೆ ಕರ್ಮದಿಂದ ಸಿಗಲರಿಯದು ಎಂಬುದನ್ನು ಅವರು ಮನಗಂಡಿದ್ದರು. ಆದುದರಿಂದ ಯಜ್ಞ, ಅಧ್ಯಯನ, ದಾನ, ತಪ ಈ ಮುಂತಾದ ಸಾಧನಗಳಿಂದ ಪುಣ್ಯಲೋಕವು ಪ್ರಾಪ್ತವಾಗಬಲ್ಲದು. ಅಮೃತತ್ವವನ್ನು ಪಡೆಯಲಿಚ್ಛಿಸುವ ವನು ಬ್ರಹ್ಮಸಂಸ್ಥನಾಗಲಿಕ್ಕೆಬೇಕು, ಬ್ರಹ್ಮಜ್ಞಾನದಲ್ಲಿ ಸ್ಥಿರನಾಗಲಿಕ್ಕೆಬೇಕು, ಎಂದು ಛಾಂದೋಗ್ಯಕಾರರ ಮತ. ಸಂನ್ಯಸ್ತವೃತ್ತಿಯಿಂದ ಅರಣ್ಯದಲ್ಲಿ ಇದ್ದು ಶ್ರದ್ಧಾಪೂರ್ವಕವಾಗಿ ಬ್ರಹ್ಮಚಿಂತನವೆಂಬ ತಪ ಮಾಡುವವರು ಬ್ರಹ್ಮ-ಲೋಕಕ್ಕೆ ತೆರಳುವರು, ಊರಲ್ಲಿದ್ದು ಇಷ್ಟಾಪೂರ್ತಾದಿ ಪುಣ್ಯಕರ್ಮಗಳನ್ನು ಮಾಡುವವರು ಪುಣ್ಯಲೋಕಕ್ಕೆ ಹೋಗಿ, ಪುಣ್ಯಕ್ಷಯವಾದೊಡನೆ ಅವರು ಪುನಃ ಈ ಲೋಕಕ್ಕೆ ಬರುವರು, ಎಂದು ಈ ಉಪನಿಷತ್ತಿನ ನಿಶ್ಚಿತ ಮತ ವಿರುವದು.

ಜ್ಞಾನ ಮತ್ತು ಕರ್ಮಮಾರ್ಗಗಳಲ್ಲಿರುವ ಪರಸ್ಪರ ವಿರೋಧವನ್ನು ಈ ಉಪನಿಷತ್ಕಾರರು ಬಗೆಬಗೆಯಿಂದ ವ್ಯಕ್ತಗೊಳಿಸಿರುವರು. ತತ್ತ್ವಜ್ಞಾನ-ವನ್ನರಿಯದೆ ಬರೀ ಯಜ್ಞಯಾಗಾದಿಗಳಲ್ಲಿ ತೊಡಗಿದ ಋತ್ವಿಕ್ಕುಗಳು ಮತ್ತು ತತ್ತ್ವಜ್ಞನಾದ ಉಷಸ್ತಿ ಚಾಕ್ರಾಯಣ ಇವರ ಕಥೆಯಾದರೂ ನಮಗೆ ಈ ವಿರೋಧವನ್ನೇ ಬಿಚ್ಚಿತೋರಿಸುವದು. ಅದೇ ರೀತಿ ಜಾನಶ್ರುತಿಯು ಬೇಕಾ-ದಷ್ಟು ಪುಣ್ಯಕರ್ಮಗಳನ್ನು ಮಾಡುತಿದ್ದ ಅರಸನಿದ್ದರೂ ಹುರುಕು ಕೆರೆಯುತ್ತ ತನ್ನ ಮುರುಕು ಬಂಡಿಯ ಕೆಳಗೆ ಕುಳಿತ ರೈಕ್ವನು ತತ್ತ್ವಜ್ಞನಿದ್ದುದರಿಂದ ಆವನ ಕೀರ್ತಿಯೇ ಹೆಚ್ಚಿನದೆಂದು ಛಾಂದೋಗ್ಯಕಾರರ ನಿರ್ಣಯವಿರುವದು.

ಅನೇಕವಿದ್ಯಾವಿಶಾರದನಾದ ನಾರದನಿಗೆ, ಆ ವಿದ್ಯೆಗಳಿಂದ ಯಾವ ಸಮಾ-ಧಾನವೂ ಉಂಟಾಗಲಿಲ್ಲ. ತನ್ನ ಅಸಮಾಧಾನವು ಆತ್ಮಜ್ಞಾನವಿಲ್ಲದೆ ಇದ್ದುದರ ಪರಿಣಾಮವು, ಎಂಬುದನ್ನರಿತುಕೊಂಡು ಅವನು ಆ ಆತ್ಮವಿದ್ಯೆ ಯನ್ನು ದೊರಕಿಸಲಿಕ್ಕೆಂದು ಸನತ್ಕುಮಾರನ ಬಳಿಗೆ ಹೋದನು. ಆ ವಿದ್ಯೆ-ಯನ್ನು ದೊರಕಿಸಿದಮೇಲೆ ಅವನು ಶೋಕಾತೀತನಾದನು. ಶ್ವೇತಕೇತುವು ಗುರುಗಳಕಡೆ ಹೋಗಿ ಎಲ್ಲ ವಿದ್ಯೆಯನ್ನು ಕಲಿತರೂ ಆತ್ಮವಿದ್ಯೆಯನ್ನು ಅವನು ಕಲಿಯದೆ ಇದ್ದುದರಿಂದ ದುರಭಿಮಾನಿಯೂ ಸ್ತಬ್ಧನೂ ಆಗಿ ತಂದೆಯ ಬಳಿಗೆ ಬಂದನು. ಆಗ ತಂದೆಯು ಅವನಿಗೆ ಶ್ರೇಷ್ಠತಮವಾದ ಆತ್ಮವಿದ್ಯೆ ಯನ್ನು ಕೊಟ್ಟನು. ಹೀಗೆ ಒಂದಲ್ಲ, ಎರಡಲ್ಲ, ಅನೇಕ ಉದಾಹರಣೆಗಳು ಛಾಂದೋಗ್ಯದಲ್ಲಿ ಈ ಬಗ್ಗೆ ಬಂದಿರುವವು.

ಕರ್ಮಮಾರ್ಗಕ್ಕಿಂತ ಉಪಾಸನಾಮಾರ್ಗವು ಹೆಚ್ಚಿನದೆಂದು ಉಪನಿಷ-ತ್ಕಾರರು ನಿಶ್ಚಯಿಸಿದ್ದೇನೋ ನಿಜ. ಆದರೆ ಪರಂಪರಾಗತವಾಗಿ ಬಂದ ಕರ್ಮವು ಕೇವಲ ತ್ಯಾಜ್ಯವೆಂದು ಅದನ್ನು ಬಿಟ್ಟುಬಿಡಲಿಲ್ಲ. ಕರ್ಮಕ್ಕಿಂತ ಜ್ಞಾನ ಶ್ರೇಷ್ಠ ಎಂದು ಅವರ ನಿರ್ಣಯ. ಈ ಉಪಾಸನೆಯನ್ನು ಹೇಳುವಾಗ ಸಹ ಅವರು ಕರ್ಮಮಾರ್ಗದ ಪರಿಭಾಷೆಯನ್ನು ಬಿಡಲಿಲ್ಲ. ಇಷ್ಟೇ ಅಲ್ಲ. ಇಡೀ ಛಾಂದೋಗ್ಯದಲ್ಲಿ ಅನೇಕ ಕಡೆ ಸ್ವಾಹಾಕಾರಾದಿ ಯಜ್ಞಪರಿಭಾಷೆಯು ತುಂಬಾ ಇದೆ. ಅಗ್ನಿಹೋತ್ರದ ಪರಿಭಾಷೆಯಾದರೂ ತುಂಬಿದೆ. ಆ ಪರಿ-ಭಾಷೆಯ ಉಪಯೋಗ ಮಾಡುತ್ತಲೆ ಉಪನಿಷತ್ಕಾರರು ನಮ್ಮನ್ನು ಕರ್ಮ-ಗಳಿಂದ ಉಪಾಸನೆಯಕಡೆಗೆ ಮೆಲ್ಲಮೆಲ್ಲನೆ ಒಯ್ಯುವರು. ಉದಾಹರಣಾರ್ಥ ವಾಗಿ ಇಡೀ ಮಾನವೀ ಆಯುಷ್ಯವೆ ಒಂದು ಯಜ್ಞವೆಂದು ಎರಡನೆಯ ಅಧ್ಯಾಯದ ಕೊನೆಗೆ ಹೇಳಲ್ಪಟ್ಟಿದೆ. ಐದನೆಯ ಅಧ್ಯಾಯದಲ್ಲಿ ಅಪ್ಪು ಐದನೆಯ ಆಹುತಿಯಲ್ಲಿ ಪುರುಷರೂಪವನ್ನು ಹೇಗೆ ಧರಿಸುವದು ಎಂಬ ಪ್ರಶ್ನೆಗೆ ಯಾಜ್ಞಿಕಭಾಷೆಯಲ್ಲಿಯೆ ಉತ್ತರವು ಕೊಡಲ್ಪಟ್ಟಿದೆ. ಅದೇ ಐದನೆಯ ಅಧ್ಯಾಯದಲ್ಲಿ ಪ್ರಾಣಪೋಷಣಕ್ಕಾಗಿ ಬಾಯಲ್ಲಿ ಹಾಕತಕ್ಕ ಆಹುತಿಗಳ ವಿಷಯವನ್ನು ಹೇಳುವಾಗ ಕೂಡ ಅದೇ ತರದ ಭಾಷೆಯು ಉಪಯೋಗಿಸಲ್ಪ-ಟ್ಟಿದೆ. ಇಷ್ಟೇ ಏಕೆ, ಮುಂದೆ ಭಗವದ್ಗೀತಾದಿ ಗ್ರಂಥಗಳಲ್ಲಿ ಕೂಡ ಇದೇ ಪ್ರವೃತ್ತಿಯು ಕಂಡುಬರುವದು. ಶ್ರೀಕೃಷ್ಣನು ಸಂಯಮ ಪ್ರಾಣಾಯಾಮಾದಿ ಗಳನ್ನು ಇದೇ ಪರಿಭಾಷೆಯ ಮೂಲಕ ವರ್ಣಿಸಿದ್ದಾನೆ. ಯಾರು ಬರೆಯ

ಬೇಕಾದರೂ ಆಯಾ ಕಾಲದಲ್ಲಿ ಪ್ರಚಲಿತವಿದ್ದ ಪರಿಭಾಷೆ, ಪರಿಸ್ಥಿತಿ, ವಾತಾವರಣ ಇವುಗಳನ್ನು ನೋಡಿಕೊಂಡೆ ಬರೆಯುವದು ಸ್ವಾಭಾವಿಕವಾಗಿದೆ.

ಇನ್ನು ಕರ್ಮ ಮತ್ತು ಉಪಾಸನೆ ಇವುಗಳಲ್ಲಿ ಮುಖ್ಯ ಭೇದವೇನಂದರೆ ಕರ್ಮವು ಬಾಹ್ಯಕ್ರಿಯೆಯಿರುವದು, ಉಪಾಸನೆಯು ಆಂತರಿಕ ಕ್ರಿಯೆಯು. ಕರ್ಮವನ್ನು ನಾವು ಕರ್ಮೇಂದ್ರಿಯಗಳಿಂದ ಮಾಡುವೆವು, ಉಪಾಸನೆಯನ್ನು ಅಂತಃಕರಣದಿಂದ ಮಾಡುವೆವು. ಕರ್ಮ ಮಾಡುವಾಗ ನಮ್ಮ ಚಿತ್ತವು ಬಾಹ್ಯವಿಷಯಗಳಲ್ಲಿ ವ್ಯಗ್ರವಾಗುವದು, ಉಪಾಸನೆಮಾಡುವಾಗ ಚಿತ್ತವು ಯಾವುದೊಂದು ಆಂತರಿಕ ಕಲ್ಪನೆಯಲ್ಲಿ ಏಕಾಗ್ರವಾಗುವದು. ಕರ್ಮಕ್ಕೆ ಅನೇಕ ಬಾಹ್ಯಸಾಧನೆಗಳ ಅವಶ್ಯಕತೆ ಇರುವದು, ಉಪಾಸನೆಗೆ ಚಿತ್ತವನ್ನು ಏಕಾಗ್ರಮಾಡುವ ಸಾಮರ್ಥ್ಯವೊಂದಿದ್ದರೆ ಸಾಕು.

ಉಪನಿಷತ್ಕಾರರು ಕರ್ಮಮಾರ್ಗವನ್ನು ಹೀನವೆಂದೆಣಿಸಿ ಉಪಾಸನೆಯನ್ನು ಸ್ವೀಕರಿಸಿದ್ದೇನೊ ನಿಜ. ಆದರೆ ಅವರು ಅಲ್ಲಿಯೇ ನಿಲ್ಲಲಿಲ್ಲ. ಎಲ್ಲ ಉಪಾಸನೆಗಳಲ್ಲಿ ಆತ್ಮೋಪಾಸನೆಯೆ, ಬ್ರಹ್ಮೋಪಾಸನೆಯೆ ಹೆಚ್ಚಿನದೆಂದು ಅವರು ಉಪದೇಶಿಸಿದರು. ಉಪನಿಷತ್ತುಗಳಲ್ಲಿ ಮಿಕ್ಕ ಉಪಾಸನೆಗಳು ಹೇಳಲ್ಪಟ್ಟಿದ್ದರೂ ಅವು ಕೇವಲ ಆನುಷಂಗಿಕವಾಗಿ ಹೇಳಲ್ಪಟ್ಟಿವೆ. ಅವು ಮುಖ್ಯವಲ್ಲ. ಎಲ್ಲಕ್ಕೂ ಆಚೆಗಿರುವ, ಎಲ್ಲಕ್ಕೂ ಆಧಾರಭೂತವಾದ ಅತೀಂದ್ರಿಯ ಆತ್ಮನನ್ನು ಸಾಕ್ಷಾತ್ಕರಿಸಿದ ಋಷಿಗಳು ಬ್ರಹ್ಮೋಪಾಸನೆಯೆ ಪ್ರಧಾನವೆಂದು ಸಾರುವದು ಸಹಜ. ಆದರೆ ಆ ನಿರ್ಗುಣ, ನಿರವಯ, ಅನಂತನನ್ನು ಆಕಲನ ಮಾಡಿ ಅದರ ಉಪಾಸನೆ ಮಾಡುವ ಬಗೆ ಹೇಗೆ, ಎಂಬುದೊಂದು ದೊಡ್ಡ ಸಮಸ್ಯೆ ಆ ಋಷಿಗಳಿಗೆ ಎದುರಾಗಿರಲಿಕ್ಕೆ ಸಾಕು. ಸಗುಣ ಸಾಕಾರ ವಿಷಯಗಳನ್ನೆ ಆಕಲನಮಾಡುವ ರೂಢಿಯಿದ್ದ ನಮ್ಮ ಬುದ್ಧಿಗೆ ಒಮ್ಮೆಲೆ ನಿರ್ಗುಣ ನಿರಾಕಾರ ಪರಮಾತ್ಮನು ಗೋಚರನಾಗನೆಂಬುದು ಅವರಿಗೆ ಅರಿತ ವಿಷಯ. ಆದುದರಿಂದ ಅವರು ಆದಿತ್ಯಾದಿ ಪ್ರತ್ಯಕ್ಷ ಪ್ರತೀಕಗಳನ್ನು, ಪ್ರಾಣಾದಿ ಸೂಕ್ಷ್ಮಶಕ್ತಿಗಳನ್ನು, ಓಂಕಾರಾದಿ ಶಬ್ದರೂಪ ಮಂತ್ರಗಳನ್ನು, ಹೃದಯಗುಹೆಯಲ್ಲಿರುವ ಸ್ಫುರಣಾತ್ಮಕ ಆಕಾಶವನ್ನು ಅನುಲಕ್ಷಿಸಿ, ಅದೇ ಬ್ರಹ್ಮವೆಂದು ಉಪಾಸಕನು ಉಪಾಸನೆ ಮಾಡಬೇಕು, ಎಂದು ಉಪನಿಷತ್ಕಾರರು ಸೂಚಿಸಿರುವರು. ಇವು ಕೇವಲ ಪ್ರತೀಕಗಳು, ಬ್ರಹ್ಮನು ಇವೆಲ್ಲವುಗಳಾಚೆಗಿರುವನು, ಇವು ಕೇವಲ ನಿರ್ದೇಶಮಾತ್ರಗಳು, ಎಂಬುದನ್ನು ಉಪಾಸಕನು

ಮರೆಯಕೂಡದು. ಈ ಉಪಾಸನೆಯೆ ಮುಕ್ತಿಯ ಸಾಧನವೆಂದು ಯಾರೂ ತಿಳಿಯಕೊಡದು. ಜ್ಞಾನವೇ ಮುಕ್ತಿಯ ಸಾಧನ, ಆತ್ಮಜ್ಞಾನದಿಂದಲೆ ಮೋಕ್ಷ ಉಪಾಸನೆಯು ಆ ಜ್ಞಾನದ ಪೂರ್ವಸಾಧನ.

ಈ ರೀತಿ ಎಲ್ಲ ಉಪಾಸನೆಗಳಲ್ಲಿ ಬ್ರಹ್ಮೋಪಾಸನೆಯೆ ಎಲ್ಲಕ್ಕೂ ಮುಖ್ಯ-ವಾದುದೆಂದು ಉಪನಿಷತ್ಕಾರರು ಹೇಳಿರುವರು. ಇದರಿಂದ ಜ್ಞಾನವಾಗುವದು, ಮತ್ತು ಅದರಿಂದ ಮುಂದೆ ಮುಕ್ತಿ, ಹೀಗೆ ಕ್ರಮವಿರುವದು. ಇನ್ನು ಮಿಕ್ಕ ಶಕ್ತಿಗಳ ಅಥವಾ ದೇವತೆಗಳ ಉಪಾಸನೆಯನ್ನು ಮಾಡಿದವರಿಗೆ ಆಯಾ ಉಪಾಸನೆಗನುಸಾರವಾಗಿ ಫಲಪ್ರಾಪ್ತವಾಗುವದೆಂದು ಉಪನಿಷತ್ಕಾರರು ಒಪ್ಪಿರುವರು. ಏಳನೆ ಅಧ್ಯಾಯದಲ್ಲಿ ಈ ವಿಷಯವು ಬಹಳ ಸ್ಪಷ್ಟವಾಗಿ ಕೊಡಲ್ಪಟ್ಟಿರುವದು. ಅದರಲ್ಲಿ ಸನತ್ಕುಮಾರನು ನಾಮ, ವಾಣಿ, ಮನ, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ, ಆಪ, ತೇಜ, ಆಕಾಶ, ಸ್ಮರಣ, ಆಶೆ, ಪ್ರಾಣ ಇವು ಒಂದಕ್ಕೊಂದು ಹೆಚ್ಚಿನವೆಂದು ನಾರದನಿಗೆ ಹೇಳುವನು. ಅದೇ ಸಮಯದಲ್ಲಿ, ಈ ಶಕ್ತಿಗಳನ್ನು ಬ್ರಹ್ಮವೆಂದು ಉಪಾ-ಸಿಸುವನು ಆಯಾ ಶಕ್ತಿಗಳ ವಿಷಯದಲ್ಲಿ ಪೂರ್ಣ ಪ್ರಭುತ್ವವನ್ನು ಪಡೆಯು-ವನು ಎಂದು ಹೇಳುವನು. ಇದರ ಅರ್ಥವೇನೆಂದರೆ, ಉಪಾಸಕನು ಯಾವ ಉಪಾಸ್ಯದ ಉಪಾಸನೆ ಮಾಡುವನೊ ಆ ಉಪಾಸ್ಯದ ವಿಷಯದಲ್ಲಿ ಪೂರ್ಣ ಪ್ರಭುತ್ವವನ್ನು ಪಡೆಯುವನು ಉದಾಹರಣಾರ್ಥವಾಗಿ, ಸ್ಮರಣಶಕ್ತಿಯೆ ಬ್ರಹ್ಮವು, ಆತ್ಯಂತಿಕ ಸತ್ಯವು ಎಂದು ಉಪಾಸಿಸುವವನು ಸ್ಮರಣಶಕ್ತಿ-ಯೊಡನೆ ಒಂದಾಗಿ ಸ್ಮರಣಶಕ್ತಿಯ ಮರ್ಯಾದೆ ಇದ್ದಮಟ್ಟಿಗೆ ಅದನ್ನು ಉಪಯೋಗಿಸಲು ಸಮರ್ಥನಾಗುವನು. ಇದಲ್ಲದೆ ಇಂಥ ಉಪಾಸನೆಯ ಫಲಗಳನ್ನು ಅಥವಾ ಇಂಥ ಐಹಿಕ ಜ್ಞಾನದ ಫಲವನ್ನು ಹೇಳುವಾಗ ಉಪ-ನಿಷತ್ಕಾರರು ಎಷ್ಟೋ ಕಡೆಗೆ ಪಾರ್ಥಿವ ಅಥವಾ ಐಹಿಕ ಫಲಗಳು ದೊರೆಯು-ವವು, ಎಂದು ಸ್ಪಷ್ಟವಾಗಿ ಹೇಳುವರು. ಇದರ ಉದಾಹರಣೆಯನ್ನು ನೋಡ-ಬೇಕಾದರೆ ಎರಡನೆಯ ಅಧ್ಯಾಯದಲ್ಲಿ, 'ಈ ಜ್ಞಾನವು ಗೊತ್ತಿದ್ದವನು ಆಯುಷ್ಮಂತನಾಗುವನು, ಪ್ರಜಾವಂತನಾಗುವನು, ಧನವಂತನಾಗುವನು, ಕೀರ್ತಿವಂತನಾಗುವನು', ಎಂಬ ಮುಂತಾದ ಉಲ್ಲೇಖವಿರುವದು. ತಾತ್ಪರ್ಯ-ವೇನೆಂದರೆ, ಉಪಾಸಕನು ಅತ್ಯಂತ ಉಚ್ಚತಮವಾದ ಧ್ಯೇಯವನ್ನು ಪ್ರಾಪ್ತ-ಮಾಡಿಕೊಳ್ಳುವದಕ್ಕಾಗಿ ಅಂದರೆ ಬ್ರಹ್ಮಪ್ರಾಪ್ತಿಗಾಗಿ ಉಪಾಸನಾಮಾರ್ಗದ

ಉಪಯೋಗವನ್ನು ಮಾಡಬೇಕು. ಅಂದರೆ ಉಪಾಸಕನು ಆ ಧ್ಯೇಯದೊಡನೆ ತಾದಾತ್ಮ್ಯ ಹೊಂದುವನು, ತದಾಕಾರನಾಗುವನು, ತತ್ಸಾಕ್ಷಾತ್ಕಾರವನ್ನು ಪಡೆದು ಧನ್ಯನಾಗುವನು. ಹಾಗೆ ಮಾಡದೆ ಅವನು ಅನ್ಯಧ್ಯೇಯಗಳನ್ನು ತನ್ನೆದುರಿಗಿಟ್ಟುಕೊಂಡು ಉಪಾಸನೆ ಮಾಡಿದರೆ ಆಯಾ ಉಪಾಸ್ಯದಂತೆ ಅಥವಾ ಧ್ಯೇಯದಂತೆ ಅವನಿಗೆ ಫಲ ದೊರೆಯುವದು. 'ತಂ ತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಾಃ |' 'ಎಲೈ ಅರ್ಜುನನೆ, ಆಯಾ ಭಾವವುಳ್ಳವರು ಆಯಾ ಗತಿಗಳನ್ನು ಹೊಂದುವರು' ಎಂಬ ಶ್ರೀಕೃಷ್ಣೋಕ್ತಿಯು ಈ ಮಾತನ್ನು ಸಾರಾಂಶರೂಪದಿಂದ ಹೇಳಿರುವದು.

ಉಪಾಸನೆಯೆ ಜ್ಞಾನಸಾಧನವು ಎಂದು ಹೇಳಿದ್ದಾಯಿತು. ಇದಕ್ಕೆ ಆನುಷಂಗಿಕವಾಗಿ ಇನ್ನು ಕೆಲವು ಸಾಧನಗಳನ್ನು ಛಾಂದೋಗ್ಯವು ಹೇಳಿರುವದು. ಬ್ರಹ್ಮಚರ್ಯದಿಂದ ಬ್ರಹ್ಮಲೋಕವು ಪ್ರಾಪ್ತವಾಗುವದು, ಎಂದು ಹೇಳಿ ಯಜ್ಞ, ಮೌನ, ಅನಾಶಕಾಯನ ಮುಂತಾದವುಗಳೆಲ್ಲ ಬ್ರಹ್ಮಚರ್ಯ ವ್ರತವನ್ನೆ ಒಳಗೊಂಡಿರುವವು ಎಂದು ಎಂಟನೆಯ ಅಧ್ಯಾಯದಲ್ಲಿ ಉಲ್ಲೇಖವಿರುವದು. ಬ್ರಹ್ಮಚರ್ಯವೆಂದರೆ ಇಲ್ಲಿ ಕೇವಲ ಉಪಸ್ಥದ ಸಂಯಮವಲ್ಲ. ಬ್ರಹ್ಮಜ್ಞಾನವಾಗಬೇಕೆಂಬ ಆತುರದಿಂದ ವಿದ್ಯಾರ್ಥಿಯು ಸರ್ವೇಂದ್ರಿಯ ಸಂಯಮಾದಿ ಯಾವ ಯಾವ ವ್ರತಗಳನ್ನು ಆಚರಿಸುವನೋ ಅವೆಲ್ಲ ಇಲ್ಲಿ ಬ್ರಹ್ಮಚರ್ಯವೆಂಬುದರಲ್ಲಿ ಸಮಾವಿಷ್ಟವಾಗುವವು. ಇನ್ನೊಂದೆಡೆಗೆ ಏಳನೆಯ ಅಧ್ಯಾಯದ ಕೊನೆಗೆ, ಆಹಾರಶುದ್ಧಿಯಿಂದ ಸತ್ವಶುದ್ಧಿಯಾಗುವದು ( ಜೀವನ ಶುದ್ಧಿ ), ಅದರಿಂದ ಸ್ಮೃತಿಯು ದೃಢವಾಗುವದು, ಸ್ಮೃತಿಯು ದೃಢವಾಗುವದರಿಂದ ಬಂಧನಗಳೆಲ್ಲ ಹರಿದುಹೋಗುವವು, ಎಲ್ಲ ಸಂಶಯಗಳ ಪರಿಹಾರವಾಗುವದು ಎಂದು ಉಲ್ಲೇಖವಿರುವದು. ಎಂಟನೆಯ ಅಧ್ಯಾಯದ ಕೊನೆಯಲ್ಲಿ ಬ್ರಹ್ಮಚರ್ಯವ್ರತದಿಂದ ಆಚಾರ್ಯಕುಲದಲ್ಲಿದ್ದು, ಆ ಬಳಿಕ ಸಮಾವರ್ತನ ಮಾಡಿ, ಗೃಹಸ್ಥಾಶ್ರಮಿಯಾಗಿ, ವೇದಾಧ್ಯಯನ ಮಾಡುತಿರುವ ಮತ್ತು ಸರ್ವ ಇಂದ್ರಿಯಗಳನ್ನು ಆತ್ಮನಲ್ಲಿ ಸ್ಥಾಪಿಸಿ, ಅಹಿಂಸಾವ್ರತವನ್ನು ಆಜನ್ಮ ಆಚರಿಸುವ ಉಪಾಸಕನಿಗೆ ಬ್ರಹ್ಮಲೋಕವು ಪ್ರಾಪ್ತವಾಗುವದು, ಎಂದು ಹೇಳಲ್ಪಟ್ಟಿರುವದು. ಅದೇ ರೀತಿ ಶ್ರದ್ಧಾಪೂರ್ವಕವಾಗಿ ಅರಣ್ಯದಲ್ಲಿ ತಪವನ್ನಾಚರಿಸುತ್ತ ಇರೋಣವು, ಸೇವೆಯಿಂದ ಪಡೆದ ಗುರುಗಳ ಅನುಗ್ರಹವು, ಇವು ಬ್ರಹ್ಮಜ್ಞಾನಕ್ಕೆ ಮತ್ತು ತನ್ಮೂಲಕ ಮೋಕ್ಷಕ್ಕೆ ಅನುಕೂಲವಾದ

ಸಾಧನಗಳು ಎಂದು ಛಾಂದೋಗ್ಯದಲ್ಲಿ ಉಲ್ಲೇಖವಿರುವದು. ಇದರ ಮೇಲಿಂದ ನೋಡಲಾಗಿ ಈ ಉಪನಿಷತ್ತಿನಲ್ಲಿ ಸಂನ್ಯಾಸಮಾರ್ಗವೊಂದೇ ಸಾಧನವೆಂದು ಎಲ್ಲಿಯೂ ಹೇಳಿದಂತಿಲ್ಲ. ಇಷ್ಟೇ ಅಲ್ಲ. ಗುರುಗೃಹದಲ್ಲಿ ಉಪಕೋಸಲನು ಅಗ್ನಿಸೇವೆಯನ್ನು ಮಾಡುತ್ತಲೆ ಇರುವಾಗ ಜ್ಞಾನದ್ವಾರವು ಅವನಿಗಾಗಿ ತೆರೆಯಿತು. ಸತ್ಯಕಾಮ ಜಾಬಾಲಾದಿ ಜ್ಞಾನಿಗಳು ಗೃಹಸ್ಥಾಶ್ರಮಿಗಳೇ ಇದ್ದರು. ಎಂಟನೆಯ ಅಧ್ಯಾಯದ ಕೊನೆಯಲ್ಲಿ ಗೃಹಸ್ಥಾಶ್ರಮಿಗೂ ಬ್ರಹ್ಮ-ಲೋಕವು ಪ್ರಾಪ್ತವಾಗುವದು, ಆ ಆಶ್ರಮದಲ್ಲಿದ್ದು ಸಾಧನಮಾಡುವವನು ಕೂಡ ಬ್ರಹ್ಮಲೋಕಕ್ಕೆ ಹೋಗುವನು, ಎಂದು ಸ್ಪಷ್ಟ ಉಲ್ಲೇಖವಿರುವದು.

ಇನ್ನು ನೀತಿಯ ಸಂಬಂಧದಿಂದ ಒಂದೆರಡು ಕಡೆ ಈ ಉಪನಿಷತ್ತಿನಲ್ಲಿ ಉಲ್ಲೇಖವು ಬಂದಿರುವದು. ಅದು ಆಧ್ಯಾತ್ಮಿಕ ದೃಷ್ಟಿಯಿಂದ ಮಹತ್ವದ್ದಿರುವದು. ಆದುದರಿಂದ ಅದನ್ನು ಇಲ್ಲಿ ನಾನು ಕಾಣಿಸದೆ ಇರಲಾರೆನು. ಆತ್ಮಜ್ಞಾನವು ಪಿಂಡದೃಷ್ಟಿಯನ್ನಳಿದು ಬ್ರಹ್ಮಾಂಡದೃಷ್ಟಿಯನ್ನು ಪಡೆದವನಿಗೆ, ಸ್ಥೂಲ-ದೃಷ್ಟಿಯನ್ನು ಬಿಟ್ಟು ಸೂಕ್ಷ್ಮದೃಷ್ಟಿಯನ್ನು ಹಿಡಿದವನಿಗೆ, ವ್ಯಕ್ತಿದೃಷ್ಟಿ-ಯನ್ನಳಿದು ವಿಶ್ವದೃಷ್ಟಿಯನ್ನು ಧರಿಸಿದವನಿಗೆ ಪ್ರಾಪ್ತವಾಗಬಲ್ಲದು. ಹಾಗೆ ಆಗಬೇಕಾದರೆ ನಮ್ಮ ಚಿತ್ತವು ಶುದ್ಧವಾಗಿ ಅದರ ಶಕ್ತಿಯು ಏಕಾಗ್ರವೂ ಸಮರ್ಥವೂ ಆಗಲಿಕ್ಕೆಬೇಕು. ಚಿತ್ತವು ಶುದ್ಧವಾಗಬೇಕಾದರೆ ನೀತಿ ನಿರ್ಬಂಧ ಗಳು ಅವಶ್ಯ. ಆ ದೃಷ್ಟಿಯಿಂದ ಇಲ್ಲಿ ಈ ಉಪನಿಷತ್ತಿನಲ್ಲಿ ಹೇಳಿದ ನೀತಿ ನಿಯಮಗಳನ್ನು ಉಲ್ಲೇಖಿಸುತ್ತಿರುವೆನು. ಮೂರನೆಯ ಅಧ್ಯಾಯದಲ್ಲಿ ದಾನ, ಆರ್ಜವ, ಅಹಿಂಸೆ, ಸತ್ಯ, ಈ ನೀತಿಯ ನಿಯಮಗಳು ಹೇಳಲ್ಪಟ್ಟಿವೆ. ಅರ್ಥಾತ್ ಇವುಗಳಲ್ಲಿ ಸತ್ಯವೇ ಎಲ್ಲಕ್ಕೂ ಹೆಚ್ಚಿನದು. ಸತ್ಯದ ಮೇಲೆಯೆ ಎಲ್ಲ ವಿಶ್ವವು ನಿಂತಿರುವದು. ಸತ್ಯಕಾಮ ಜಾಬಾಲನ ಕಥೆಯಲ್ಲಿ ಈ ಉಪನಿಷತ್ಕಾರರು ಸತ್ಯದ ಮಹತಿಯನ್ನು ಒಂದು ವಿಲಕ್ಷಣ ರೀತಿಯಿಂದ ಹೇಳಿರುವರು. ಬ್ರಾಹ್ಮಣನು, ಬ್ರಹ್ಮಜ್ಞಾನಿಯು ಸತತವೂ ಸತ್ಯವಾದಿ ಇರು-ವನು, ಎಂದು ಅವರ ಪ್ರತಿಪಾದನೆಯು. ಅದೇ ರೀತಿ ಹಿರಣ್ಯಸ್ತೇಯ, ಸುರಾಪಾನ, ಗುರುತಲ್ಪಗಮನ, ಬ್ರಹ್ಮಜ್ಞಾನಿಯ ಹತ್ಯೆ, ಇವು ಅತ್ಯಂತ ಘೋರಪಾತಕಗಳೆಂದೂ ಇವುಗಳನ್ನು ಮಾಡುವವರ ಸಂಗಡಿಗರೂ ಮಹಾ ಪಾತಕಿಗಳೆಂದೂ ಉಪನಿಷತ್ಕಾರರು ಹೇಳಿರುವರು. ಅವರ ದೃಷ್ಟಿಯಿಂದ ಇವು ಹೆಚ್ಚಿನ ಅನೀತಿಯ ಕೃತ್ಯಗಳು. ಇನ್ನೊಂದೆಡೆಗೆ ಅಶ್ವಪತಿ ಕೈಕೇಯ

ನೆಂಬ ಅರಸನು ತನ್ನ ರಾಜ್ಯದಲ್ಲಿಯ ಪರಿಸ್ಥಿತಿಯನ್ನು ಹೊಗಳುವಾಗ ತನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಕುಡುಕರಿಲ್ಲ, ಜಿಪುಣರಿಲ್ಲ, ಸ್ವೈರರಿಲ್ಲ, ಸ್ವೈರಿಣಿಯರಂತೂ ಇಲ್ಲೇ ಇಲ್ಲ, ಎಂದು ವರ್ಣಿಸಿರುವನು. ಅರ್ಥಾತ್ ಇದರ ಮೇಲಿಂದ ಅಸ್ತೇಯ, ದಾನ, ಏಕಪತ್ನೀವ್ರತ ಮುಂತಾದವುಗಳು ಆ ಕಾಲದ ಶ್ರೇಷ್ಠವಾದ ನೀತಿನಿಯಮಗಳಿದ್ದುವೆಂಬುದು ಸ್ಪಷ್ಟವಾಗುವದು.

ಇನ್ನು ಆತ್ಮಜ್ಞಾನಿಯ ಜೀವನಕ್ರಮವನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಿಸುವಾ. ಆತ್ಮಜ್ಞಾನಿಯೆಂದರೆ ಆತ್ಮಸಾಕ್ಷಾತ್ಕಾರವನ್ನು ಪಡೆದವನು. ಇಲ್ಲಿ ಜ್ಞಾನವೆಂದರೆ ಸಾಕ್ಷಾತ್ಕಾರವು; ಬರಿಯ ಬೌದ್ಧಿಕ ಜ್ಞಾನವಲ್ಲ. ಒಬ್ಬ ರೋಗಿಯ ರೋಗದ ಜ್ಞಾನವು ಅಥವಾ ನಿದಾನವು ಆಗುವುದಕ್ಕೂ ಚಿಕಿತ್ಸೆಯ ನಂತರ ಆ ರೋಗವು ಪೂರ್ಣ ಹೋಗುವದಕ್ಕೂ ಯಾವ ಭೇದವೊ ಅದೇ ಭೇದವು ಒಬ್ಬನ ಬೌದ್ಧಿಕ ಜ್ಞಾನಕ್ಕೂ ಅವನ ಸಾಕ್ಷಾತ್ಕಾರಕ್ಕೂ ಇರುವದು. ಆತ್ಮಜ್ಞಾನಿಯು ಅಮೃತತ್ವವನ್ನು ಪಡೆಯುವನು, ಅಂದರೆ ಮರಣಪಶ್ಚಾತ್ ಜನನ ಮರಣಕ್ಕೆ ಪುನಃ ಒಳಗಾಗನು ಎಂದು ಉಪನಿಷತ್ಕಾರರ ಸ್ಪಷ್ಟ ಅಭಿಪ್ರಾಯವಿರುವದು. ' ನ ಸ ಪುನರಾವರ್ತತೇ ' ಎಂಬ ಪಲ್ಲವಿಯು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಗೋಚರವಾಗುವದು. ಇನ್ನು ಆತ್ಮಜ್ಞಾನಿಗೆ ಮರಣಪಶ್ಚಾತ್ ಯಾವ ಗತಿಯು ದೊರೆಯುವದೆಂಬ ಮಾತಿಗಿಂತ ಅವನು ಜೀವದಿಂದಿರುವಾಗ ಯಾವ ರೀತಿ ಇರುವನು, ಅವನ ಮನಸ್ಥಿತಿಯು ಹೇಗೆ ಇರುವದು, ಇದು ಜನರ ದೃಷ್ಟಿಯಿಂದ ಹೆಚ್ಚು ಮಹತ್ವದ್ದಿರುವದು. ಮರಣದ ನಂತರ ಅವನಿಗೆ ಸಿಕ್ಕತಕ್ಕಗತಿಯು ಅಗೋಚರವಿದ್ದು ಅವನೊಬ್ಬನನ್ನೆ ಸಂಬಂಧಿಸಿರುವದು, ಆದರೆ ಅವನು ಇಹಲೋಕದಲ್ಲಿರುವಾಗ ಹೇಗೆ ವರ್ತಿಸುವನು, ಏನು ಮಾಡುವನು, ಇದು ಸಾಮಾಜಿಕ ದೃಷ್ಟಿಯಿಂದ ವಿಚಾರಣೀಯವಿರುವದು.

ಆತ್ಮನ ಸಾಕ್ಷಾತ್ಕಾರವಾದವನು ಎಲ್ಲೆಲ್ಲಿಯೂ ಆತ್ಮನನ್ನೆ ನೋಡುವನು. ಆದುದರಿಂದ ಅವನ ಚಿತ್ತವು ಆತ್ಮಮಯವಿರುವದು. ಅವನು ಆತ್ಮರತನು, ಆತ್ಮಕ್ರೀಡನು, ಆತ್ಮಾನಂದದಲ್ಲಿ ನಿಮಗ್ನನು. ಆ ಆನಂದದಾಚೆಗೆ ಯಾವ ಆನಂದವೂ ಇಲ್ಲ. ಜ್ಞಾನಿಯು ಪೂರ್ಣಕಾಮನಿರುವನು, ಆದುದರಿಂದ ನಿರತಿಶಯ ಸುಖದಲ್ಲಿ ಅವನು ಓಲಾಡುವನು. ಆತ್ಮನೊಬ್ಬನೇ ನಿಜವು, ಆತ್ಮನೊಬ್ಬನೇ ಇರುವನು, ಎಂಬ ಸಾಕ್ಷಾತ್ಕಾರವು ಜ್ಞಾನಿಗೆ ಇರುತಿರುವದರಿಂದ ಅವನು ಅಭಯನಿರುವನು. ಒಬ್ಬನೇ ಒಬ್ಬನಿದ್ದ ಅವನಿಗೆ ಯಾತರಿಂದ

ಏಕೆ ಭಯವು ಉಂಟಾಗಬೇಕು ? ಅವನು ಸ್ವರಾಟನಿರುವನು ಅಂದರೆ ಪೂರ್ಣ ಸ್ವತಂತ್ರನಿರುವನು.

ಇದು ಅವನ ಆಂತರಿಕ ಸ್ಥಿತಿಯಾಯಿತು. ಇನ್ನು ವ್ಯವಹಾರದಲ್ಲಿ ಅವನು ಯಾವ ಬಗೆಯಿಂದ ನಡೆಯುವನು ಇದನ್ನು ನೋಡುವ. ಎಲ್ಲೆಲ್ಲಿಯೂ ಅವನಿಗೆ ಆತ್ಮಸಾಕ್ಷಾತ್ಕಾರವಿರುವದರಿಂದ ಎಲ್ಲವೂ ಆತ್ಮನಿಂದಲೆ ಬಂದಿರುವದು, ನಿಜವಸ್ತುವು ಆತ್ಮನೇ ಇರುವದು, ಎಂಬ ಜ್ಞಾನವು ಅವನಲ್ಲಿ ಸ್ಥಿರವಾಗಿರುವುದ- ರಿಂದ ಆವನು ಯಾವಾಗಲೂ ಆತ್ಮೌಪಮ್ಯಬುದ್ಧಿಯಿಂದಲೇ ನಡಕೊಳ್ಳುವನು. ಅವನು ಯಾವ ನೀತಿಯ ಸಹಾಯದಿಂದ, ಯಾವ ಯಾವ ನಿಯಮಗಳ ಸಹಾಯದಿಂದ, ಯಾವ ವ್ರತ ಉಪಾಸನಾದಿಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದಿರುವನೊ ಅವುಗಳನ್ನು ಜ್ಞಾನಪಶ್ಚಾತ್ ಸಹ ಅವನು ಪಾಲಿಸುತ್ತಲೇ ಇರುವನು ಎಂದು ಬೇರೆ ಹೇಳಬೇಕಾಗಿಲ್ಲ. ಅಂದರೆ ಅವನು ಯಾವಾಗಲೂ ಬ್ರಹ್ಮಚರ್ಯ, ಸತ್ಯ, ಅಹಿಂಸೆ, ಅಸ್ತೇಯ, ಆತ್ಮಸಂಯಮ, ಶುದ್ಧಾಹಾರ- ಭಕ್ಷಣ ಮುಂತಾದ ನಿಯಮಗಳನ್ನು ದೇಹಪಾತದ ವರೆಗೆ ಪಾಲಿಸುತ್ತಲೆ ಇರುವನು. ತಾನು ಸ್ವತಃ ಏನೂ ದೊರಕಿಸತಕ್ಕುದಿರುವದಿಲ್ಲ. ಅಂದ- ಬಳಿಕ ಈ ನಿಯಮಾದಿಗಳು ಅವಗೇಕೆ, ಎಂದು ಯಾರಾದರೂ ಆಕ್ಷೇಪಿಸಿದರೆ- ಅದಕ್ಕೆ ಉತ್ತರವೇನೆಂದರೆ, ದೇಹಪಾತದ ವರೆಗೆ ಈ ನಿಯಮಗಳನ್ನು ಅವನು ಪಾಲಿಸುತ್ತ ಇರದೆಹೋದರೆ ಅವನು ಆತ್ಮಜ್ಞಾನದಿಂದ ಚ್ಯುತನಾಗಿ ಹೋಗುವ ಭಯವಿರುವದು ಮತ್ತು ಸಮಾಜವು ಕೂಡ ದುರ್ಮಾರ್ಗಕ್ಕೆ ಹತ್ತಬಹುದು. ಆದ್ದರಿಂದ ತಾನು ಪಡೆದ ಸ್ಥಾನವನ್ನು ಆಜೀವ ಸ್ಥಿರವಾಗಿಟ್ಟುಕೊಳ್ಳ- ಬೇಕೆಂದೂ ತಾನು ಯಾವ ಸಮಾಜದಲ್ಲಿರುವನೋ ಆ ಸಮಾಜಕ್ಕೆ ಯೋಗ್ಯ ಮಾರ್ಗವನ್ನು ತೋರಲಿಕ್ಕೆಂದೂ ಆವನು ಸಂಯಮಿಯು, ವ್ರತಿಯು, ಆಗಿ ನಡೆಯುವನು. ನಿಜವಾದ ಜ್ಞಾನಿಯು ಹಠಾತ್ತಾಗಿ ಅಥವಾ ಯಾವದೊಂದು ಬಾಹ್ಯನಿಯಮಗಳಿಂದ ಬದ್ಧನಾದವನಾಗಿ ಹಾಗೆ ನಡೆಯುವನೆಂದರ್ಥವಲ್ಲ. ಅದು ಅವನ ಸಹಜ ಸ್ವಭಾವವೆ ಆಗಿ ಹೋಗುವದು. ಆತ್ಮಜ್ಞಾನಿಯು ಸಾಧನಾವಸ್ಥೆಯಲ್ಲಾಗಲಿ, ಸಿದ್ಧಾವಸ್ಥೆಯಲ್ಲಾಗಲಿ, ಸಂನ್ಯಾಸವನ್ನು ಸ್ವೀಕರಿಸಲಿಕ್ಕೇ ಬೇಕು ಎಂದು ಉಪನಿಷತ್ಕಾರರು ಎಲ್ಲಿಯೂ ಹಟ ಹಿಡಿದಿಲ್ಲ. ಕರ್ಮಮಾರ್ಗವು ಮುಕ್ತಿದಾಯಕವಲ್ಲ, ಜ್ಞಾನವೇ ಮುಕ್ತಿಯನ್ನು ಕೊಡುವದು ಎಂದು ಈ ಉಪನಿಷತ್ತು ಹೇಳುತಿರುವದೇನೊ ನಿಜ. ಆದರೆ ಕರ್ಮತ್ಯಾಗ

ಮಾಡಬೇಕು ಅಥವಾ ಅದಷ್ಟು ಕಡಿಮೆ ಕರ್ಮ ಮಾಡಬೇಕು ಎಂದು ಇದರ ಅರ್ಥವಲ್ಲ. ಅರಣ್ಯದಲ್ಲಿ ಇದ್ದು ಶ್ರದ್ಧಾಯುಕ್ತವಾಗಿ ತಪಸ್ಸು ಮಾಡುವವರು ಅರ್ಚಿರಾದಿ ಮಾರ್ಗದಿಂದ ಹೋಗುವರು, ಎಂದು ಈ ಉಪನಿಷತ್ಕಾರರು ಸಂನ್ಯಾಸಪರ ಉಪದೇಶವನ್ನು ಒಂದೆಡೆಗೆ ಮಾಡಿದ್ದರೂ ಇದೇ ಉಪನಿಷತ್ಕಾರರು ತನ್ನ ಬಂಡಿಯ ನೆರಳಲ್ಲಿ ಕುಳಿತ ರೈಕ್ವನು, ಅಗ್ನಿಹೋತ್ರಿಯಾದ ಸತ್ಯಕಾಮನು, ತನ್ನ ರಾಜ್ಯವನ್ನು ಕ್ಷಾತ್ರಧರ್ಮದಂತೆ ಆಳುತಿದ್ದ ಅಶ್ವಪತಿ ಕೈಕೇಯನೆಂಬ ಅರಸನು, ಪ್ರವಾಹಣ ಜೈವಲಿ ಎಂಬ ರಾಜರ್ಷಿಯು, ಇವರು ಬ್ರಹ್ಮಜ್ಞಾನಿಗಳಿದ್ದರೆಂದು ವರ್ಣಿಸಿರುವರು. ಇದರ ಅರ್ಥವೇನೆಂದರೆ, ಸಮಾಜದಲ್ಲಿಯ ತಮ್ಮ ತಮ್ಮ ಕಾರ್ಯಗಳನ್ನು ಜ್ಞಾನಿಗಳು ಬಿಡಬೇಕು ಎಂಬ ಯಾವ ವಿಧಿಯೂ ಇಲ್ಲ. ಉಪನಿಷತ್ಕಾರರ ಮುಖ್ಯ ಕಟಾಕ್ಷವು, ಬರಿಯ ಕರ್ಮದಿಂದ ಮೋಕ್ಷವಿಲ್ಲ, ಎಂಬ ತತ್ವದ ಮೇಲೆ ಇದೆ ಮನುಷ್ಯನು ಜ್ಞಾನಿಯಾದನೆಂದರೆ ಅವನು ಕರ್ಮ ಮಾಡಲಿ, ಮಾಡದಿರಲಿ ಅವನಿಗೆ ಮೋಕ್ಷವು ದೊರೆಯುವದು, ಎಂದು ಉಪನಿಷತ್ಕಾರರ ಪ್ರತಿಪಾದನವಿರುವದು. ಚಿತ್ತವು ಸತ್ಯಜ್ಞಾನಪೂರ್ಣ-ವಾಗುವದೊಂದೇ ತಡ ಮೋಕ್ಷವು ಕಟ್ಟಿಟ್ಟಂತೆ ಕೈವಶವಾಗುವದು. ಚಿತ್ತವು ಜ್ಞಾನಯೋಗ್ಯವಾಗುತಿರುವಾಗ ಇಲ್ಲವೆ ಜ್ಞಾನಪೂರ್ಣವಾದ ಬಳಿಕ ಅವನು ಕರ್ಮ ಮಾಡುತಿರಲಿ ಬಿಟ್ಟಿರಲಿ, ಮನುಷ್ಯನಿಗೆ ಅವನ ಜ್ಞಾನದ ಫಲವೆಂದು ಮುಕ್ತಿಯು ದೊರೆಯುವುದೆ ಹೊರತು ಅವನ ಕರ್ಮಕ್ಕಾಗಿಯೂ ಅಲ್ಲ ಅಥವಾ ಅಕರ್ಮಕ್ಕಾಗಿಯೂ ಅಲ್ಲ. ಆದುದರಿಂದಲೇ ಉಪನಿಷತ್ಕಾರರು ಸಂನ್ಯಾಸದ ಹಟವನ್ನೂ ತೊಟ್ಟಿಲ್ಲ ಅಥವಾ ಗೃಹಸ್ಥಾಶ್ರಮಿಗಳಾಗಬೇಕೆಂಬ ವಿಧಿಯನ್ನೂ ಹೇಳಿಲ್ಲ. ಸಂನ್ಯಾಸ ಅಥವಾ ಕರ್ಮಮಾರ್ಗ ಇವೆರಡರಲ್ಲಿ ಯಾವ ಮಾರ್ಗದ ಪಕ್ಷಪಾತವನ್ನು ಮಾಡದೆ ಅವರು ಜ್ಞಾನದಿಂದ ಮುಕ್ತಿ ಎಂಬ ತತ್ವವನ್ನು ಒತ್ತಿ ಹೇಳಿರುವರು. ಆ ಜ್ಞಾನವನ್ನು ಅರಣ್ಯದಲ್ಲಿದ್ದು, ಶ್ರದ್ಧಾಯುಕ್ತರಾಗಿ ತಪವನ್ನಾಚರಿಸುವವರೂ ದೊರಕಿಸಬಹುದು, ಗೃಹಸ್ಥಾಶ್ರಮಿಗಳಾಗಿ ಆತ್ಮ-ಸಂಯಮದಿಂದಿದ್ದವರೂ ಗಳಿಸಬಹುದು. ಇದರ ಮೇಲಿಂದ ಉಪನಿಷತ್ತಿನಲ್ಲಿಯ ನಿವೃತ್ತಿಯೆಂದರೆ ಸಂನ್ಯಾಸವಲ್ಲ, ಆದರೆ ಕರ್ಮಗಳಲ್ಲಿಯ ಕಾಮ್ಯಬುದ್ಧಿಯನ್ನು ಬಿಟ್ಟು ಆತ್ಮಸಂಯಮಿಯಾಗಿ, ಧ್ಯಾನಪರರಾಗಿ ಜ್ಞಾನವನ್ನು ದೊರಕಿಸುವ ವೃತ್ತಿ. ಇದೇ ತತ್ವವನ್ನು ಮುಂದೆ ಗೀತಾಕಾರರು ವಿಶೇಷ ಬಲಪಡಿಸಿ ಉಪದೇಶಿಸಿದ್ದಾರೆ. ಅವರು ಕರ್ಮವಿಷಯದಲ್ಲಿ ಉಪನಿಷತ್ಕಾರರಿಗಿಂತ ಒಂದು

ಹೆಜ್ಜೆ ಮುಂದು ಹೋಗಿರುವರೆಂದು ಹೇಳಬಹುದು. ಉಪನಿಷತ್ಕಾರರು ಕರ್ಮದ ಬಗ್ಗೆ ಉದಾಸೀನರಿರುವರು. ಆದರೆ ಗೀತಾಕಾರರು ನಿಷ್ಕಾಮಬುದ್ಧಿಯಿಂದ ಕರ್ತವ್ಯವನ್ನು ಮಾಡಿಯೇ ತೀರಬೇಕು ಮತ್ತು ಜ್ಞಾನವನ್ನು ಪಡಕೊಳ್ಳಲಿಕ್ಕೆ ಅದೂ ಒಂದು ಶ್ರೇಷ್ಠ ಮಾರ್ಗವಿರುವದು ಎಂದು ಪ್ರತಿಪಾದಿಸಿರುವರು. ಕಾಮ್ಯಕರ್ಮವು ಇಬ್ಬರಿಗೂ ತ್ಯಾಜ್ಯವಿರುವದು. ನಿಷ್ಕಾಮಕರ್ಮವನ್ನು ಮಾಡಿದರೂ ಸೈ ಬಿಟ್ಟರೂ ಸೈ, ಜ್ಞಾನವನ್ನು ಪಡೆಯುವದು ಉಪಾಸಕನ ಕರ್ತವ್ಯ, ಅದನ್ನು ಅವನು ಉಪಾಸನಾಮಾರ್ಗದಿಂದ ಪಡೆದುಕೊಳ್ಳಬೇಕು ಎಂದು ಉಪನಿಷತ್ಕಾರರು ಹೇಳುವರು. ಆದರೆ ಗೀತಾಕಾರರು ಎರಡನೆಯ ಯಾವ ಉಪಾಸನೆಯನ್ನು ಮಾಡದಿದ್ದರೂ ಸತತ ನಿಷ್ಕಾಮಕರ್ಮವನ್ನು ಮಾಡುತ್ತ ಹೋದರೆ ಇದೇ ಜ್ಞಾನದ ಸಾಧನವಾಗುವದು, ಎಂದು ಹೇಳುವರು.

ಒಟ್ಟಿಗೆ ತಾತ್ಪರ್ಯವೇನೆಂದರೆ, ಮುಕ್ತಿ, ಮೋಕ್ಷ, ಇದೇ ಪರಮಾನಂದದ ಚರಮಸೀಮೆ. ಅದು ಪ್ರಾಪ್ತವಾಗಲಿಕ್ಕೆ ಎಲ್ಲವೂ ಆತ್ಮಮಯವು ಎಂಬ ಜ್ಞಾನವೆ, ಆತ್ಮಸಾಕ್ಷಾತ್ಕಾರವೆ ಸಾಧನವು. ಅದನ್ನು ಅರಣ್ಯಾದಿಗಳಲ್ಲಿದ್ದು ತಪಸ್ಸುಮಾಡಿ ದೊರಕಿಸಬಹುದು, ಇಲ್ಲವೆ ಅಗ್ನಿಹೋತ್ರಾದಿಗಳನ್ನು ಮಾಡುತ್ತ ಗೃಹಸ್ಥಾಶ್ರಮದಲ್ಲಿದ್ದರೂ ಧ್ಯಾನಮಗ್ನರಾಗಿ ಪಡೆಯಬಹುದು. ಚಿತ್ತವು ಈ ರೀತಿ ಧ್ಯಾನಮಗ್ನವಾಗಬೇಕಾದರೆ ಅದು ಶುದ್ಧವಾಗಿ ಏಕಾಗ್ರ-ವಾಗುವ ಸಾಮರ್ಥ್ಯವನ್ನು ಪಡೆಯಲಿಕ್ಕೆ ಬೇಕು. ಅದಕ್ಕೆ ಆಹಾರಶುದ್ಧಿ, ಬ್ರಹ್ಮಚರ್ಯ, ಆತ್ಮಸಂಯಮ, ಸತ್ಯ, ಅಹಿಂಸೆ, ಅಸ್ತೇಯ ಮುಂತಾದ ವ್ರತಗಳ ಪರಿಪಾಲನ, ಗುರೂಪದೇಶ ಇವೇ ಸಾಧನಗಳು. ಈ ಸಾಧನಗಳನ್ನು ಮಾಡುತಿರುವಾಗ ಅಥವಾ ಸಿದ್ಧನಾದಬಳಿಕ ಮನುಷ್ಯನು ತನ್ನ ಸಹಜ ಮತ್ತು ಸಾಮಾಜಿಕ ವ್ಯವಹಾರಗಳನ್ನು ಕಡೆಗೂ ಬಿಡುವ ಅವಶ್ಯಕತೆ ಇಲ್ಲ. ಈ ರೀತಿ ವರ್ತಿಸಿ ಚಿತ್ತದ ಆ ಪರಮಪದವನ್ನು ಪಡೆದು ನಿರಂತರ ಆತ್ಮಾ-ನಂದಲ್ಲಿರುವ ಸಾಮರ್ಥ್ಯವನ್ನು ಪಡೆಯಬೇಕು. ಬಳಿಕ ನಾವು ಮಾಡುತಿರುವ ಕಾರ್ಯಗಳೆಲ್ಲ ಆತ್ಮಕ್ರೀಡೆಯೆಂಬ ಭಾವನೆಯಿಂದ ನಡೆಯಿಸಬೇಕು. ಅದೇ ಪರಮ ಗತಿ, ಪರಮ ಪದವಿ, ಪರಮ ಸಿದ್ಧಿ. ಛಾಂದೋಗ್ಯೋಪನಿಷದೋಕ್ತ ಕೊನೆಯ ಆಧ್ಯಾತ್ಮಿಕ ಸಿದ್ಧಾಂತವು ಇದೇ ಇರುವದು.

ಓಂ ಶಾಂತಿಃ ಶಾಂತಿಃ ಶಾಂತಿಃ

# ಛಾಂದೋಗ್ಯೋಪನಿಷತ್

## ಶಾಂತಿಮಂತ್ರ

ಓಂ ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮಥೋ-ಬಲಮಿಂದ್ರಿಯಾಣಿ ಚ । ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ಮಾಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾಕರೋದನಿರಾಕರಣಮಸ್ತ್ವನಿರಾಕರಣಂ ಮೇऽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ನನ್ನ ಕೈಕಾಲು ಮುಂತಾದ ಅಂಗಾಂಗಗಳು, ವಾಣಿ, ಪ್ರಾಣ, ಕಣ್ಣು, ಕಿವಿ ಇತ್ಯಾದಿ ಇಂದ್ರಿಯಗಳು ಮತ್ತು ಬಲ ಇವು ಪೂರ್ಣ ವಿಕಸಿತವಾಗಲಿ. ಇದೆಲ್ಲ, ಈ ವಿಶ್ವವೆಲ್ಲ ಉಪನಿಷತ್ತಿನಲ್ಲಿ ವರ್ಣಿಸಲ್ಪಟ್ಟ ಬ್ರಹ್ಮವಿರುವದು. ನನ್ನಿಂದ ಬ್ರಹ್ಮನ ನಿರಾಕರಣವು ಆಗದಿರಲಿ, ಬ್ರಹ್ಮನು ನನ್ನನ್ನು ನಿರಾಕರಿಸ-ದಿರಲಿ ( ತಿರಸ್ಕಾರ ಮಾಡದಿರಲಿ, ದುರ್ಲಕ್ಷಿಸದಿರಲಿ ). ಇಬ್ಬರಿಂದಲೂ ಪರಸ್ಪರರ ನಿರಾಕರಣವಾಗದಿರಲಿ. ಉಪನಿಷತ್ತುಗಳಲ್ಲಿ ಹೇಳಿದ ಎಲ್ಲ ಧರ್ಮಗಳೂ ಆತ್ಮನಿಷ್ಠನಾದ ನನ್ನಲ್ಲಿ ನೆಲೆಗೊಳ್ಳಲಿ, ನನ್ನಲ್ಲಿ ಮನೆಮಾಡಲಿ. ಓಂ ಶಾಂತಿ, ಶಾಂತಿ, ಶಾಂತಿ.

# ೧ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಮುಖ್ಯವಾಗಿ ಓಂಕಾರದ ಉತ್ಪತ್ತಿ, ಓಂಕಾರದ ಅರ್ಥ ಮತ್ತು ಅದರ ಉಪಾಸನೆ ಇವು ಹೇಳಲ್ಪಟ್ಟಿರುವವು. ಉಪನಿಷತ್ಕಾಲಕ್ಕೂ ಪೂರ್ವದಲ್ಲಿ ಮತ್ತು ಅವುಗಳ ಕಾಲದಲ್ಲಿ ಸಹ ವಿವಿಧ ಉಪಾಸನೆಗಳು (ಯಾವದೊಂದು ಶಾಸ್ತ್ರ-ವಿಹಿತ ಆಲಂಬನದಲ್ಲಿ ಚಿತ್ತವೃತ್ತಿಯನ್ನು ಏಕಾಗ್ರಮಾಡುವುದೇ ಉಪಾಸನೆ ಎನಿಸುವದು) ಪ್ರಚಲಿತವಿದ್ದವು. ಅವುಗಳಲ್ಲಿ ಸಕಾಮ ಉಪಾಸನೆಗಳೇ ಹೆಚ್ಚು. ಉಪನಿಷತ್ತುಗಳು ಮೋಕ್ಷಾರ್ಥಿಗಳು—ಸ್ವರ್ಗಾರ್ಥಿಗಳಲ್ಲ; ಆದುದರಿಂದ ಅವುಗಳ ಒಲವು ನಿಷ್ಕಾಮ ಬ್ರಹ್ಮೋಪಾಸನೆಯ ಕಡೆಗೆ ಇರುವದು.

ಓಂಕಾರವು ಎಲ್ಲ ವಸ್ತುಗಳ ಸಾರವು, ಸಾರಾತ್ ಸಾರತರವು. ಆದುದರಿಂದ ಅದು ಪರಮಾತ್ಮನ ಪ್ರತೀಕವಾಗಲು ಯೋಗ್ಯವು, ಎಂದು ಹೇಳಿ ಉಪನಿಷತ್ಕಾರರು ಓಂಕಾರೋಪಾಸನೆಯನ್ನು ಉಪದೇಶಿಸಿರುವರು. ಪ್ರಾಣವಾಣಿಗಳನ್ನೂ ಈ ಓಂಕಾರದಲ್ಲಿ ಲೀನಮಾಡಬೇಕು. ಈ ಜ್ಞಾನದಿಂದ ಯುಕ್ತವಾಗಿ ಮಾಡಿದ ಕರ್ಮಗಳು ವೀರ್ಯವತ್ತರವಾಗುವವು, ಬಹಳ ಫಲವನ್ನೂ ಕೊಡುವಂಥವಾಗುವವು ಎಂದು ಫಲಶ್ರುತಿಯಿರುವದು.

ಈ ಅಧ್ಯಾಯದಲ್ಲಿ ಓಂಕಾರದ ಮಹತ್ವವು ಅನೇಕ ರೀತಿಯಿಂದ ಹೇಳಲ್ಪಟ್ಟಿದೆ. ತ್ರಯೀ ವಿದ್ಯೆಗಳು ಓಂಕಾರದಿಂದಲೇ ಹುಟ್ಟಿರುವವು, ಓಂಕಾರದಿಂದಲೇ ಮನುಷ್ಯನು ಅನುಜ್ಞೆ ಕೊಡುವನು, ದೇವತೆಗಳು ಓಂಕಾರದ ಆಶ್ರಯದಿಂದಲೆ ಅಮೃತರಾದರು. ಪಿಂಡಗತ ಮುಖ್ಯಪ್ರಾಣ ಮತ್ತು ವಿಶ್ವಗತ ಆದಿತ್ಯ ಇವು ಓಂಕಾರಗಳು, ಎಂದು ಪ್ರತಿಪಾದಿಸಿ ಈ ಅಧ್ಯಾಯವು ಓಂಕಾರದ ಉಪಾಸನೆಯನ್ನು ಹೇಳುವದು.

ಮೂರು ವೇದಗಳಲ್ಲಿ ಹೇಳಿದ ಕರ್ಮಗಳ ಆಚರಣೆಯಿಂದ ಸಹ ನಾವು ಅಮೃತ-ರಾಗಲಾರೆವು, ಓಂಕಾರೋಪಾಸನೆಯಿಂದಲೆ ಅಮೃತರೂ ಅಭಯರೂ ಆಗಬಲ್ಲೆವು. ದೇವತೆಗಳು ಅಂದರೆ ಮನುಷ್ಯನಲ್ಲಿಯ ಸತ್ಪ್ರವೃತ್ತಿಗಳು ಗೆದೆಯಬೇಕಾದರೆ ಓಂಕಾರದ ಆಶ್ರಯವನ್ನೇ ಮಾಡಲಿಕ್ಕೆಬೇಕು.

ಓಂಕಾರವು ಸಾಮಗಾಯನದೊಡನೆ, ಉದ್ಗೀಥದೊಡನೆ, ಸಮವೆಂದು ತಿಳಿಯ-ಲ್ಪಟ್ಟಿದ್ದರಿಂದ ಸಾಮದ ಗತಿ ಯಾವದು ಎಂದು ಶಿಲಕಾದಿ ಮೂವರಲ್ಲಿ ಚರ್ಚೆ ನಡೆದ ಕಥೆಯೂ ಇದರಲ್ಲಿ ಇರುವದು. ಆಕಾಶವೇ ಕೊನೆಯ ಆಶ್ರಯವು, ಪರಾಯಣವು ಎಂದು ನಿರ್ಣಯವು ಹೇಳಲ್ಪಟ್ಟಿರುವದು. ಅದೇ ರೀತಿ ಉಷಸ್ತಿ ಚಾಕ್ರಾಯಣನ ಕಥೆಯೂ ಇದರಲ್ಲಿರುವದು.

ಹೀಗೆ ತೋರಿಕೆಗೆ ಕೆಲವು ವಿವಿಧ ವಿಷಯಗಳು ಇದರಲ್ಲಿ ಬಂದಿದ್ದರೂ ಓಂಕಾರೋಪಾಸನೆಯೆ ಪ್ರಧಾನ ವಿಷಯವಿರುವದು. ಆಧ್ಯಾತ್ಮಶಾಸ್ತ್ರದ ದೃಷ್ಟಿ-ಯಿಂದಾದರೂ ಇದೇ ಮಹತ್ವದ್ದಿರುವದು.

# ಅಥ ಪ್ರಥಮೋಽಧ್ಯಾಯಃ

ಓಂ ಇತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯುದ್ಗಾಯತಿ
ತಸ್ಯೋಪವ್ಯಾಖ್ಯಾನಮ್ ॥ ೧ ॥

ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸೋಽಪಾಮೋ-
ಷಧಯೋ ರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯ ವಾಗ್ರಸೋ
ವಾಚ ಋಗ್ರಸ ಋಚಃ ಸಾಮ ರಸಃ ಸಾಮ್ನ ಉದ್ಗೀಥೋ ರಸಃ ॥ ೨ ॥

ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದು-
ದ್ಗೀಥಃ ॥ ೩ ॥

ಕತಮಾ ಕತಮರ್ಕ್ಕತಮತ್ಕತಮತ್ಸಾಮ ಕತಮಃ ಕತಮ ಉದ್ಗೀಥ
ಇತಿ ವಿಮೃಷ್ಟಂ ಭವತಿ ॥ ೪ ॥

ವಾಗೇವರ್ಕ್ ಪ್ರಾಣಃ ಸಾಮೋಮಿತ್ಯೇತದಕ್ಷರಮುದ್ಗೀಥಸ್ತದ್ವಾ ಏತ-
ನ್ಮಿಥುನಂ ಯದ್ವಾಕ್ಚ ಪ್ರಾಣಶ್ಚರ್ಕ್ ಚ ಸಾಮ ಚ ॥ ೫ ॥

(೧) ಓಂ, ಈ ಅಕ್ಷರವೇ ಉದ್ಗೀಥವು. ಇದರ ಉಪಾಸನೆ ಮಾಡಬೇಕು. ಇದರಲ್ಲಿ ಚಿತ್ತವನ್ನು ಏಕಾಗ್ರ ಮಾಡಬೇಕು. ಓಂ, ಎಂದು ಸಾಮಗಾಯನ ಮಾಡುವರು. ಇಲ್ಲಿ ಅದರ ವಿವೇಚನೆ ಇರುವದು.

(೨) ಪೃಥಿವಿಯು ಈ ಚರಾಚರ ಸೃಷ್ಟಿಯ ಸಾರವು. ಅಪ್ಪು (ನೀರು) ಪೃಥಿವಿಯ ಸಾರವು. ವನಸ್ಪತಿಗಳು ಅಪ್ಪಿನ ಸಾರವು, ಪುರುಷನು ವನಸ್ಪತಿಗಳ ಸಾರವು. ವಾಣಿಯು ಪುರುಷನ ಸಾರವು, ಋಕ್ಕು (ಋಗ್ವೇದ ಮಂತ್ರ) ವಾಣಿಯ ಸಾರವು. ಸಾಮವು (ಸಾಮವೇದ ಮಂತ್ರವು) ಋಕ್ಕಿನ ಸಾರವು. ಓಂಕಾರವು ಸಾಮದ ಸಾರವು.

(೩) ಈ ಓಂಕಾರವು ಸಾರಗಳ ಸಾರವು, ಎಲ್ಲಕ್ಕೂ ಶ್ರೇಷ್ಠವು. ಸಾರಗಳಲ್ಲಿ ಎಂಟನೆಯದಾದ ಈ ಓಂಕಾರವು ಪರಮಾತ್ಮನ ಸ್ಥಾನದಲ್ಲಿ ಇರಲು ಯೋಗ್ಯವು (ಪೂಜನೀಯವು).

(೪) ಇನ್ನು ಋಕ್ಕು ಯಾವದು, ಸಾಮ ಯಾವದು, ಉದ್ಗೀಥ ಯಾವದು ಇದರ ವಿಚಾರವಾಗುವದು.

(೫) ವಾಣಿಯೇ ಋಕ್ಕು, ಪ್ರಾಣವೇ ಸಾಮವು, ಓಂ ಇದೇ ಉದ್ಗೀಥವು, ಇದೇ ಮಿಥುನವು ( ಹೆಣ್ಣು-ಗಂಡು ), ಋಕ್ಕಿನ ಸ್ಥಾನವಾದ ವಾಣಿ ಮತ್ತು ಸಾಮದ ಸ್ಥಾನವಾದ ಪ್ರಾಣ ಇವೆರಡೂ ಒಂದು ಮಿಥುನವು.

ತದೇತನ್ಮಿಥುನಮೋಮಿತ್ಯೇತಸ್ಮಿನ್ನಕ್ಷರೇ ಸꣳಸೃಜ್ಯತೇ ಯದಾ ವೈ ಮಿಥುನೌ ಸಮಾಗಚ್ಛತ ಆಪಯತೋ ವೈ ತಾವನ್ಯೋಽನ್ಯಸ್ಯ ಕಾಮಮ್ ॥ ೬ ॥

ಆಪಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರ-ಮುದ್ಗೀಥಮುಪಾಸ್ತೇ ॥ ೭ ॥

ತದ್ವಾ ಏತದನುಜ್ಞಾಕ್ಷರಂ ಯದ್ಧಿ ಕಿಂಚಾನುಜಾನಾತ್ಯೋಮಿತ್ಯೇವ ತದಾಹೈಷಾ ಏವ ಸಮೃದ್ಧಿರ್ಯದನುಜ್ಞಾ ಸಮರ್ಧಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರಮುದ್ಗೀಥ-ಮುಪಾಸ್ತೇ ॥ ೮ ॥

ತೇನೇಯಂ ತ್ರಯೀ ವಿದ್ಯಾ ವರ್ತತೇ ಓಮಿತ್ಯಾಶ್ರಾವಯತ್ಯೋಮಿತಿ ಶꣳಸತ್ಯೋಮಿತ್ಯುದ್ಗಾಯತ್ಯೇತಸ್ಯೈವಾಕ್ಷರಸ್ಯಾಪಚಿತ್ಯೈ ಮಹಿಮ್ನಾ ರಸೇನ ॥ ೯ ॥

(೬) ಓಂಕಾರದಲ್ಲಿ ಈ ಮಿಥುನದ ಸಂಯೋಗವಾಗುವದು. ಹೀಗೆ ಹೆಣ್ಣು ಗಂಡು ಕೂಡಿದಾಗ ಅವರು ಪರಸ್ಪರರ ಇಚ್ಛೆಯನ್ನು ಪೂರೈಸುವರು.

(೭) ಇದನ್ನು ತಿಳಿದವನು ಓಂಕಾರದ ಉಪಾಸನೆ ಮಾಡಿದರೆ ಸರ್ವ ಕಾಮನೆಗಳನ್ನು ದೊರಕಿಸುವವನಾಗುವನು.

(೮) ಓಂ, ಇದು ಅನುಜ್ಞೆ (ಸಮ್ಮತಿ) ಕೊಡುವ ಅಕ್ಷರವಿರುವದು. ಅನುಜ್ಞೆ ಕೊಡುವಾಗ ಮನುಷ್ಯನು ಓಂ ಎನ್ನುವನು. ಅನುಜ್ಞೆಯಿಂದ ವೃದ್ಧಿಯಾಗುವದು. ಇದನ್ನರಿತು ಓಂಕಾರೋಪಾಸನೆ ಮಾಡುವವನು ಇಚ್ಛೆಗಳನ್ನು (ಯಜಮಾನನ) ಪೂರೈಸುವವನಾಗುವನು.

(೯) ಆ ಓಂಕಾರದಿಂದ ಈ ತ್ರಯೀ ವಿದ್ಯೆಯು (ಋಕ್ಯಜುಸ್ಸಾಮಗಳು) ಪ್ರವೃತ್ತವಾಗುವದು. ಓಂ ಎಂದು ಅಧ್ವರ್ಯುವು ಆಶ್ರವಣಕರ್ಮ (ಋಗ್ವೇದ ಕರ್ಮ) ಮಾಡುವನು; ಓಂ ಎಂದು ಹೋತೃವು ಶಂಸನಕರ್ಮ (ಯಜುರ್ವೇದ ಕರ್ಮ) ಮಾಡುವನು; ಮತ್ತು ಉದ್ಗಾತೃವು ಸಾಮಗಾಯನವನ್ನು ಮಾಡುವನು. ಈ ಅಕ್ಷರದ ಪೂಜೆಗಾಗಿಯೇ ಮತ್ತು ಇದರ ಮಹಿಮೆಯಿಂದಲೇ ಎಲ್ಲ ಕರ್ಮವು ಪ್ರವೃತ್ತವಾಗುವದು.

ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ । ನಾನಾ
ತು ವಿದ್ಯಾ ಚಾವಿದ್ಯಾ ಚ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪ-
ನಿಷದಾ ತದೇವ ವೀರ್ಯವತ್ತರಂ ಭವತೀತಿ ಖಲ್ವೇತಸ್ಯೈವಾಕ್ಷರ-
ಸ್ಯೋಪವ್ಯಾಖ್ಯಾನಂ ಭವತಿ ॥ ೧೦ ॥

॥ ತೃತೀಯಸ್ಯ ಪ್ರಥಮಃ ಖಂಡಃ ॥

(೧೦) ಈ ರಹಸ್ಯವನ್ನು (ಓಂಕಾರದ ರಹಸ್ಯ) ಅರಿತವನು ಮತ್ತು ಅರಿಯದವನು ಇಬ್ಬರೂ ಕರ್ಮ ಮಾಡುವರು. ಆದರೆ ಜ್ಞಾನಪೂರ್ವಕ ಮತ್ತು ಅಜ್ಞಾನಪೂರ್ವಕ ಮಾಡಿದ ಕರ್ಮಗಳ ಫಲಗಳು ಬೇರೆ ಬೇರೆ ಇರುವವು. ಯಾವನು ಜ್ಞಾನ, ಶ್ರದ್ಧೆ ಮತ್ತು ಉಪಾಸನೆ ಇವುಗಳಿಂದ ಯುಕ್ತನಾಗಿ ಮಾಡುವನೊ, ಅವನ ಕರ್ಮವೇ ವೀರ್ಯವುಳ್ಳದ್ದಾಗುವದು, ಸಫಲವಾಗುವದು. ಇದು ಓಂಕಾರದ ವಿವೇಚನೆಯು.

೧ ನೇ ಖಂಡವು ಸಮಾಪ್ತವು.

ದೇವಾಸುರಾ ಹ ವೈ ಯತ್ರ ಸಂಯೇತಿರ ಉಭಯೇ ಪ್ರಾಜಾಪತ್ಯಾಸ್ತದ್ಧ
ದೇವಾ ಉದ್ಗೀಥಮಾಜಹುರನೇನೈನಾನಭಿಭವಿಷ್ಯಾಮ ಇತಿ ॥ ೧ ॥

ತೇ ಹ ನಾಸಿಕ್ಯಂ ಪ್ರಾಣಮುದ್ಗೀಥಮುಪಾಸಾಂಚಕ್ರಿರೇ ತಂ ಹಾಸುರಾಃ
ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಜಿಘ್ರತಿ ಸುರಭಿ ಚ
ದುರ್ಗಂಧಿ ಚ ಪಾಪ್ಮನಾ ಹ್ಯೇಷ ವಿದ್ಧಃ ॥ ೨ ॥

(೧) ಪ್ರಜಾಪತಿಯ ಮಕ್ಕಳಾದ ದೇವಾಸುರರು (ಸತ್ಪ್ರವೃತ್ತಿ ಮತ್ತು ದುಷ್ಟ ಪ್ರವೃತ್ತಿ) ಒಮ್ಮೆ ತಮ್ಮತಮ್ಮೊಳಗೆ ಹೋರಾಡುತ್ತಿರುವಾಗ ಅಸುರರನ್ನು ಸೋಲಿಸಬೇಕೆಂದು ದೇವತೆಗಳು ಉದ್ಗೀಥದ ಉಪಾಸನೆಯನ್ನು ಅಂದರೆ ಮುಖ್ಯವಾಗಿ ಓಂಕಾರೋಪಾಸನೆ ಮಾಡಿದರು.

(೨) ಅವರು ಘ್ರಾಣೇಂದ್ರಿಯದಲ್ಲಿರುವ (ಮೂಗು) ಪ್ರಾಣವನ್ನವಲಂಬಿಸಿ ಉದ್ಗೀಥದ ಉಪಾಸನೆ ಮಾಡಿದರು. ಆದರೆ ಅಸುರರು ಅದನ್ನು ಪಾಪದಿಂದ ವೇಧಿಸಿದರು. ಆದುದರಿಂದ ಘ್ರಾಣೇಂದ್ರಿಯದಿಂದ ಸುಗಂಧ ದುರ್ಗಂಧಗಳೆರಡೂ ಅನುಭವಕ್ಕೆ ಬರುವವು. ಅದು ಪಾಪದಿಂದ ದೂಷಿತವಿರುವದು.

ಅಥ ಹ ವಾಚಮುದ್ಗೀಥಮುಪಾಸಾಂಚಕ್ರಿರೇ ತಾಂ ಹಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತಯೋಭಯಂ ವದತಿ ಸತ್ಯಂ ಚಾನೃತಂ ಚ ಪಾಪ್ಮನಾ ಹ್ಯೇಷ ವಿದ್ಧಃ || ೩ ||

ಅಥ ಹ ಚಕ್ಷುರುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಪಶ್ಯತಿ ದರ್ಶನೀಯಂ ಚಾದರ್ಶನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಮ್ || ೪ ||

ಅಥ ಹ ಶ್ರೋತ್ರಮುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಶೃಣೋತಿ ಶ್ರವಣೀಯಂ ಚಾಶ್ರವಣೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಮ್ || ೫ ||

ಅಥ ಹ ಮನ ಉದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಸಂಕಲ್ಪಯತೇ ಸಂಕಲ್ಪನೀಯಂ ಚಾಸಂಕಲ್ಪನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಮ್ || ೬ ||

ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ ತಂ ಹಾಸುರಾ ಋತ್ವಾ ವಿದಧ್ವಂಸುರ್ಯಥಾಶ್ಮಾನಮಾಖಣಮೃತ್ವಾ ವಿಧ್ವಂಸೇತ್ || ೭ ||

(೩-೬) ಬಳಿಕ ಅವರು ಕ್ರಮವಾಗಿ ವಾಣಿ, ಕಣ್ಣು, ಕಿವಿ ಮತ್ತು ಮನ ಇವುಗಳನ್ನವಲಂಬಿಸಿ ಉದ್ಗೀಥದ ಉಪಾಸನೆಯನ್ನು ಮಾಡಿದರು. ಆದರೆ ಅಸುರರು ಕ್ರಮದಿಂದ ಅವೆಲ್ಲವುಗಳನ್ನು ಪಾಪದಿಂದ ವೇಧಿಸಿದರು. ಆದುದರಿಂದ ವಾಣಿಯು ಸತ್ಯಾಸತ್ಯಗಳೆರಡನ್ನೂ ನುಡಿಯುವದು, ಕಣ್ಣು ಸುರೂಪ ಕುರೂಪಗಳೆರಡನ್ನೂ ನೋಡುವದು. ಕಿವಿಯು ಒಳಿತು ಕೆಡಕುಗಳೆರಡನ್ನೂ ಕೇಳುವದು. ಮತ್ತು ಮನಸ್ಸು ಚಲೋ ಕೆಟ್ಟ ಎರಡನ್ನೂ ಕಲ್ಪಿಸುವದು. ಇವೆಲ್ಲ ಪಾಪದಿಂದ ವಿದ್ಧವಿರುವವು.

(೭) ಕೊನೆಗೆ ದೇವತೆಗಳು ಮುಖ್ಯ ಪ್ರಾಣವನ್ನವಲಂಬಿಸಿ ಉದ್ಗೀಥದ ಉಪಾಸನೆ ಮಾಡಿದರು. ಅಸುರರು ಅವರ ಮೇಲೆ ಸಾಗಿ ಹೋಗಲು ಮಣ್ಣಿನ ಹೆಂಟೆಯು ಕಲ್ಲಿನ ಮೇಲೆ ಅಪ್ಪಳಿಸಿ ನಾಶಹೊಂದುವಂತೆ ನಾಶಹೊಂದಿದರು.

ಏವಂ ಯಥಾಶ್ಮಾನಮಾಖಣಮೃತ್ವಾ ವಿಧ್ವಂಸತ ಏವಂ ಹೈವ ಸ
ವಿಧ್ವಂಸತೇ ಯ ಏವಂವಿದಿ ಪಾಪಂ ಕಾಮಯತೇ ಯಶ್ಚೈನಮಭಿ-
ದಾಸತಿ ಸ ಏಷೋಽಶ್ಮಾಖಣಃ ॥ ೮ ॥

ನೈವೈತೇನ ಸುರಭಿ ನ ದುರ್ಗಂಧಿ ವಿಜಾನಾತ್ಯಪಹತಪಾಪ್ಮಾ ಹ್ಯೇಷ ತೇನ
ಯದಶ್ನಾತಿ ಯತ್ಪಿಬತಿ ತೇನೇತರಾನ್ ಪ್ರಾಣಾನವತ್ಯೇತಮು
ಏವಾಂತತೋಽವಿತ್ತ್ವೋತ್ಕ್ರಾಮತಿ ವ್ಯಾದದಾತ್ಯೇವಾನ್ತತ ಇತಿ ॥ ೯ ॥

ತಂ ಹಾಂಗಿರಾ ಉದ್ಗೀಥಮುಪಾಸಾಂಚಕ್ರ ಏವಾಂಗಿರಸಂ ಮನ್ಯ-
ತೇಽಂಗಾನಾಂ ಯದ್ರಸಃ ॥ ೧೦ ॥

ತೇನ ತಂ ಹ ಬೃಹಸ್ಪತಿರುದ್ಗೀಥಮುಪಾಸಾಂಚಕ್ರ ಏತಮು ಏವ ಬೃಹ-
ಸ್ಪತಿಂ ಮನ್ಯತೇ ವಾಗ್ಘಿ ಬೃಹತೀ ತಸ್ಯಾ ಏಷ ಪತಿಃ ॥ ೧೧ ॥

(೮) ಮುಖ್ಯಪ್ರಾಣದ ಜ್ಞಾನವಿದ್ದವನೊಡನೆ ಪಾಪವನ್ನಾಚರಿಸಲು ಅಥವಾ ಅವನನ್ನು ದೂಷಿಸಲು ಅನುವಾದವನು ಕಲ್ಲಿನ ಮೇಲೆ ಅಪ್ಪಳಿಸಿ ನಾಶಹೊಂದುವ ಹೆಂಟೆಯಂತೆ ನಾಶಹೊಂದುವನು. ಯಾಕಂದರೆ, ಅವನು ಕಲ್ಲಿನಂತೆ ಅಚಲನಿರುವನು.

(೯) ಸುಗಂಧ ದುರ್ಗಂಧಗಳ ಜ್ಞಾನವು ಜನರಿಗೆ ಆಗಲು ಮುಖ್ಯ-ಪ್ರಾಣವು ಕಾರಣವಲ್ಲ. ಯಾಕಂದರೆ ಅದು ನಿಷ್ಪಾಪವಿರುವದು. ಮನುಷ್ಯನು ಅದರ ಮುಖಾಂತರ ತಿನ್ನುವ ಅನ್ನದಿಂದ ಮತ್ತು ಕುಡಿಯುವ ನೀರಿನಿಂದ ಇತರ ಪ್ರಾಣಗಳನ್ನು ( ಅಪಾನ ವ್ಯಾನಾದಿ ) ರಕ್ಷಿಸುವನು. ಅಂತ್ಯಕಾಲದಲ್ಲಿ ಇವು ( ಅನ್ನಪಾನ ) ದೊರೆಯದೆ ಇರುವುದರಿಂದ ದೇಹಬಿಟ್ಟು ( ಪ್ರಾಣವು ) ಹೋಗುವದು ಮತ್ತು ಕೊನೆಗೆ ದೇಹವು ಬಾಯಿ ತೆರೆಯುವದು ( ಅನ್ನಪಾನ ಕ್ಕಾಗಿ).

(೧೦) ಅಂಗಿರಾ ಋಷಿಯು ಪ್ರಾಣರೂಪ ಉದ್ಗೀಥದ ಉಪಾಸನೆ ಮಾಡಿದನು. ಪ್ರಾಣವು ಅಂಗದ (ದೇಹದ) ಸಾರವಿರುವದರಿಂದ ಅದಕ್ಕೆ ಅಂಗಿರಸ ವೆನ್ನುವರು.

(೧೧) ಆದುದರಿಂದ ಬೃಹಸ್ಪತಿಯು ಆ ಉದ್ಗೀಥದ (ಪ್ರಾಣದ) ಉಪಾಸನೆ ಮಾಡಿದನು. ಈ ಪ್ರಾಣಕ್ಕೇ ಬೃಹಸ್ಪತಿ ಅನ್ನುವರು. ಯಾಕಂದರೆ, ವಾಕ್ ಇದು ಬೃಹತೀ (ದೊಡ್ಡದು) ಮತ್ತು ಪ್ರಾಣವು ಅದರ ಪತಿಯು.

ತೇನ ತಂಹಾಯಾಸ್ಯ ಉದ್ಗೀಥಮುಪಾಸಾಂಚಕ್ರ ಏತಮು ಏವಾ-
ಯಾಸ್ಯಂ ಮನ್ಯಂತ ಆಸ್ಯಾದ್ಯದಯತೇ ॥ ೧೨ ॥

ತೇನ ತಂಹ ಬಕೋ ದಾಲ್ಭ್ಯೋ ವಿದಾಂಚಕಾರ ॥ ಸ ಹ ನೈಮಿಶೀ-
ಯಾನಾಮುದ್ಗಾತಾ ಬಭೂವ ಸ ಹ ಸ್ಮೈಭ್ಯಃ ಕಾಮಾನಾಗಾಯತಿ ॥ ೧೩ ॥

ಆಗಾತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರ-
ಮುದ್ಗೀಥಮುಪಾಸ್ತ ಇತ್ಯಧ್ಯಾತ್ಮಮ್ ॥ ೧೪ ॥

॥ ಇತಿ ದ್ವಿತೀಯಃ ಖಂಡಃ ॥

(೧೨) ಆದುದರಿಂದ ಆಯಾಸ್ಯನು ಆ ಉದ್ಗೀಥದ (ಪ್ರಾಣದ) ಉಪಾಸನೆ ಮಾಡಿದನು. ಈ ಪ್ರಾಣಕ್ಕೇ ಆಯಾಸ್ಯ ಅನ್ನುವರು. ಯಾಕಂದರೆ, ಅದು ಮುಖದಿಂದ ಹೊರಕ್ಕೆ ಹೋಗುವದು.

(೧೩) ದಲ್ಭ್ಯನ ಮಗನಾದ ಬಕನು ಈ ಜ್ಞಾನವನ್ನರಿತುಕೊಂಡನು. ಅವನು ನೈಮಿಷಾರಣ್ಯದಲ್ಲಿರುವವರ ಉದ್ಗಾತೃನಾದನು. ಅವನು ಅವರ ಕಾಮನೆಗಳ ಪೂರೈಕೆಗಾಗಿ ಉದ್ಗಾನ ಮಾಡುವನು.

(೧೪) ಈ ಓಂಕಾರರೂಪ ಉದ್ಗೀಥದ ಜ್ಞಾನಪೂರ್ವಕ ಉಪಾಸನೆ ಮಾಡುವವನು ಕಾಮನೆಗಳನ್ನು ಪೂರೈಸುವವನಾಗುವನು. ಇದು ಓಂಕಾರದ ಅಧ್ಯಾತ್ಮವು, ಶರೀರಸ್ಥ ಪ್ರಾಣವೇ ಓಂಕಾರವು ಎಂಬ ಜ್ಞಾನವು.

೨ ನೆಯ ಖಂಡವು ಸಮಾಪ್ತವು.

ಅಥಾಧಿದೈವತಂ ಯ ಏವಾಸೌ ತಪತಿ ತಮುದ್ಗೀಥಮುಪಾಸೀತೋ-
ದ್ಯನ್ವಾ ಏಷ ಪ್ರಜಾಭ್ಯ ಉದ್ಗಾಯತಿ ಉದ್ಯಂಸ್ತಮೋಭಯಮಪ-
ಹನ್ತ್ಯಪಹನ್ತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ ॥ ೧ ॥

(೧) ಇನ್ನು ಉದ್ಗೀಥದ ಆಧಿದೈವಿಕ (ವಿಶ್ವದಲ್ಲಿರುವ) ಸ್ವರೂಪದ ಉಪಾಸನೆಯು. ಈ ತಪಿಸುತ್ತಿರುವ (ಕಾಯುತ್ತಿರುವ) ಸೂರ್ಯನನ್ನು ಉದ್ಗೀಥವೆಂದು ಉಪಾಸಿಸಬೇಕು. ಇವನು ಉದಯಹೊಂದಿ ಪ್ರಜೆಗಳಿಗಾಗಿ ಉದ್ಗಾನ ಮಾಡುವನು ಮತ್ತು ಕತ್ತಲೆಯ ಭಯವನ್ನು ಕಳೆಯುವನು. ಇದನ್ನರಿತವನು ಕತ್ತಲೆಯ ಭಯವನ್ನು ಕಳೆಯುವವನಾಗುವನು.

ಸಮಾನ ಉ ಏವಾಯಂ ಚಾಸೌ ಚೋಷ್ಣೋಽಯಮುಷ್ಣೋಽಸೌ ಸ್ವರ
ಇತೀಮಮಾಚಕ್ಷತೇ ಸ್ವರ ಇತಿ ಪ್ರತ್ಯಾಸ್ವರ ಇತ್ಯಮುಂ ತಸ್ಮಾದ್ವಾ
ಏತಮಿಮಮಮುಂ ಚೋದ್ಗೀಥಮುಪಾಸೀತ || ೨ ||

ಅಥ ಖಲು ವ್ಯಾನಮೇವೋದ್ಗೀಥಮುಪಾಸೀತ ಯದ್ವೈ ಪ್ರಾಣಿತಿ ಸ
ಪ್ರಾಣೋ ಯದಪಾನಿತಿ ಸೋಽಪಾನೋಽಥ ಯಃ ಪ್ರಾಣಾಪಾನ-
ಯೋಃ ಸಂಧಿಃ ಸ ವ್ಯಾನೋ ಯೋ ವ್ಯಾನಃ ಸಾ ವಾಕ್ ತಸ್ಮಾದ-
ಪ್ರಾಣನ್ನನಪಾನನ್ವಾಚಮಭಿವ್ಯಾಹರತಿ || ೩ ||

ಯಾ ವಾಕ್ಸರ್ಕ್ತಸ್ಮಾದಪ್ರಾಣನ್ನನಪಾನನ್ನೃಚಮಭಿವ್ಯಾಹರತಿ
ಯರ್ಕ್ತತ್ಸಾಮ ತಸ್ಮಾದಪ್ರಾಣನ್ನನಪಾನನ್ಸಾಮ ಗಾಯತಿ
ಯತ್ಸಾಮ ಸ ಉದ್ಗೀಥಸ್ತಸ್ಮಾದಪ್ರಾಣನ್ನನಪಾನನ್ನುದ್ಗಾಯತಿ || ೪ ||

(೨) ಈ ಪ್ರಾಣ (ಶರೀರಸ್ಥ ಉದ್ಗೀಥ) ಮತ್ತು ಆ ಸೂರ್ಯ (ವಿಶ್ವಸ್ಥ ಉದ್ಗೀಥ) ಇವೆರಡೂ ಸಮಾನವಿರುವವು. ಇವು ಗುಣಗಳಲ್ಲಿಯೂ ಸದೃಶವಿರುವವು. ಇದೂ ಉಷ್ಣ ಆದೂ ಉಷ್ಣ. ಇದಕ್ಕೆ (ಪ್ರಾಣಕ್ಕೆ) 'ಸ್ವರ' ವೆನ್ನುವರು, ಅದಕ್ಕೂ (ಸೂರ್ಯನಿಗೆ) 'ಸ್ವರ ಪ್ರತ್ಯಾಸ್ವರ' ವೆನ್ನುವರು. ಆದುದರಿಂದ ಪ್ರಾಣ ಹಾಗೂ ಸೂರ್ಯ ಈ ಎರಡೂ ರೂಪದಿಂದ ಉದ್ಗೀಥದ ಉಪಾಸನೆ ಮಾಡಬೇಕು.

(೩) ಇನ್ನು ವ್ಯಾನರೂಪ ಉದ್ಗೀಥದ ಉಪಾಸನೆ ಮಾಡಬೇಕು. ಪ್ರಾಣಿಯು ಹೊರಗೆ ಬಿಡುವ ವಾಯುವು ಪ್ರಾಣವು, ಒಳಗೆ ಎಳಕೊಳ್ಳುವ ವಾಯುವ ಅಪಾನವು. ಇವೆರಡರ ಸಂಧಿಯೆ ವ್ಯಾನವು. ವ್ಯಾನವೇ ವಾಣಿಯು. ಆದುದರಿಂದ ಉಸುರಾಡಿಸುವ ಕ್ರಿಯೆಯನ್ನು ನಿಲ್ಲಿಸಿ (ಉಸುರು ಕಟ್ಟಿ) ಮನುಷ್ಯನು ಮಾತನಾಡುವನು.

(೪) ವಾಣಿಯೇ ಋಕ್ಕು. ಆದುದರಿಂದ ಉಸುರಾಡಿಸದೆ ಮನುಷ್ಯನು ಋಕ್ಕುಗಳನ್ನು ಅನ್ನುವನು. ಋಕ್ಕೆ ಸಾಮವು. ಆದುದರಿಂದ ಉಸುರಾಡಿಸದೆ ಮನುಷ್ಯನು ಸಾಮಗಾನ ಮಾಡುವನು. ಸಾಮವೇ ಉದ್ಗೀಥವು. ಆದುದರಿಂದ ಉಸುರಾಡಿಸದೆ ಮನುಷ್ಯನು ಉದ್ಗಾನ ಮಾಡುವನು.

ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನ-
ಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನꣳ-
ಸ್ತಾನಿ ಕರೋತ್ಯೇತಸ್ಯ ಹೇತೋರ್ವ್ಯಾನಮೇವೋದ್ಗೀಥಮುಪಾಸೀತ ॥ ೫

ಖಲೂದ್ಗೀಥಾಕ್ಷರಾಣ್ಯುಪಾಸೀತೋದ್ಗೀಥ ಇತಿ ಪ್ರಾಣ ಏವೋತ್ಪ್ರಾಣೇನ
ಹ್ಯುತ್ತಿಷ್ಠತಿ ವಾಗ್ಗೀರ್ವಾಚೋ ಹ ಗಿರ ಇತ್ಯಾಚಕ್ಷತೇಽನ್ನಂ
ಥಮನ್ನೇ ಹೀದꣳ ಸರ್ವꣳ ಸ್ಥಿತಮ್ ॥ ೬

ದ್ಯೌರೇವೋದಂತರಿಕ್ಷಂ ಗೀಃ ಪೃಥಿವೀ ಯಮಾದಿತ್ಯ ಏವೋದ್ವಾಯುರ್ಗೀ-
ರಗ್ನಿಸ್ಥꣳಸಾಮವೇದ ಏವೋದ್ಯಜುರ್ವೇದೋ ಗೀಃ ಋಗ್ವೇದಸ್ಥಂ
ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನ-
ವಾನನ್ನಾದೋ ಭವತಿ ಯ ಏತಾನ್ಯೇವಂ ವಿದ್ವಾನುದ್ಗೀಥಾಕ್ಷರಾಣ್ಯು-
ಪಾಸ್ತ ಉದ್ಗೀಥ ಇತಿ ॥ ೭

(೫) ಇದಲ್ಲದೆ ಕಟ್ಟಿಗೆಗಳನ್ನು ತಿಕ್ಕಿ ಅಗ್ನಿಯ ಮಂಥನ, ಓಡುವ ಸ್ಪರ್ಧೆ, ಬಿಗಿಯಾದ ಬಿಲ್ಲಿಗೆ ಹೆದೆಯೇರಿಸೋಣ, ಮುಂತಾದ ಬಲವು ಬೇಕಾಗುವ ಕರ್ಮಗಳನ್ನು ಮನುಷ್ಯನು ಉಸುರುಕಟ್ಟಿಯೇ ಮಾಡುವನು. ಆದುದರಿಂದ ವ್ಯಾನರೂಪದಿಂದಲೇ ಉದ್ಗೀಥದ ಉಪಾಸನೆ ಮಾಡಬೇಕು.

(೬) ಇನ್ನು 'ಉದ್ಗೀಥ' ಎಂದು ಉದ್ಗೀಥದ ಅಕ್ಷರಗಳ ಉಪಾಸನೆ ಮಾಡಬೇಕು. ಪ್ರಾಣವೇ 'ಉತ್' ಯಾಕಂದರೆ ಪ್ರಾಣದ ಮೂಲಕವೇ ಮನುಷ್ಯನು ಮೇಲಕ್ಕೆ ಏಳುವನು. ವಾಣಿಯೇ 'ಗೀ' ಯಾಕಂದರೆ ವಾಣಿಗೆ 'ಗಿರ್' ಎನ್ನುವರು. ಅನ್ನವೇ 'ಥಮ್' ಯಾಕಂದರೆ ಅನ್ನದ ಆಧಾರ ದಿಂದಲೇ ಎಲ್ಲವೂ ನಿಂತಿರುವದು.

(೭) ದ್ಯುಲೋಕವೇ 'ಉತ್' ವಾಯುವೇ 'ಗೀ' ಅಗ್ನಿಯೇ 'ಥಮ್' ಸಾಮವೇದವೇ 'ಉತ್' ಯಜುರ್ವೇದವೇ 'ಗೀ' ಋಗ್ವೇದವೇ 'ಥಮ್' ವಾಣಿಯ ದೋಹಮಾಡುವವನಿಗೆ (ಋಗ್ವೇದಾದಿಗಳ ಅಭ್ಯಾಸ) ವಾಣಿಯು ತಕ್ಕ ಫಲವನ್ನು ಕೊಡುವದು. ಈ ಉದ್ಗೀಥಾಕ್ಷರಗಳ ಜ್ಞಾನವಿದ್ದ ಉಪಾ-ಸಕನು ಅನ್ನವಂತನೂ ಅನ್ನವನ್ನುಭೋಗಿಸುವವನೂ ಆಗುವನು.

ಅಥ ಖಲ್ವಾಶೀಃ ಸಮೃದ್ಧಿರುಪಸರಣಾನೀತ್ಯುಪಾಸೀತ ಯೇನ ಸಾಮ್ನಾ
ಸ್ತೋಷ್ಯನ್ ಸ್ಯಾತ್ತತ್ಸಾಮೋಪಧಾವೇತ್ ॥ ೮ ॥

ಯಸ್ಯಾಮೃಚಿ ತಾಮೃಚಂ ಯದಾರ್ಷೇಯಂ ತಮೃಷಿಂ ಯಾಂ ದೇವತಾ-
ಮಭಿಷ್ಟೋಷ್ಯನ್ ಸ್ಯಾತ್ತಾಂ ದೇವತಾಮುಪಧಾವೇತ್ ॥ ೯ ॥

ಯೇನ ಛಂದಸಾ ಸ್ತೋಷ್ಯನ್ಸ್ಯಾತ್ತಚ್ಛಂದ ಉಪಧಾವೇದ್ಯೇನ
ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ತꣳ ಸ್ತೋಮಮುಪಧಾವೇತ್ ॥ ೧೦ ॥

ಯಾಂ ದಿಶಮಭಿಷ್ಟೋಷ್ಯನ್ಸ್ಯಾತ್ತಾಂ ದಿಶಮುಪಧಾವೇತ್ ॥ ೧೧ ॥

ಆತ್ಮಾನಮಂತತ ಉಪಸೃತ್ಯ ಸ್ತುವೀತ ಕಾಮಂ ಧ್ಯಾಯನ್ನ-
ಪ್ರಮತ್ತೋಽಭ್ಯಾಶೋ ಹ ಯದಸ್ಮೈ ಸ ಕಾಮಃ ಸಮೃಧ್ಯೇತ
ಯತ್ಕಾಮಃ ಸ್ತುವೀತೇತಿ ಯತ್ಕಾಮಃ ಸ್ತುವೀತೇತಿ ॥ ೧೨ ॥

॥ ಇತಿ ತೃತೀಯಃ ಖಂಡಃ ॥

(೮) ಇನ್ನು ಇಷ್ಟಕಾಮನೆಗಳ ಪೂರ್ತಿಗಾಗಿ ಉಪಾಸನೆ ಮಾಡಬೇಕು ಯಾವ ಸಾಮಗಳಿಂದ ಉದ್ಗಾತೃವು ಸ್ತುತಿಸುತಿರುವನೊ ಆ ಸಾಮಗಳ ಉಪಾಸನೆ ಮಾಡಬೇಕು.

(೯) ಯಾವ ಋಕ್ಕುಗಳಲ್ಲಿ ಆ ಸಾಮುವಿರುವದೊ ಆ ಋಕ್ಕಿನ, ಅದರ ಕರ್ತನಾದ ಋಷಿಯ, ಅದರ ಅಧಿಷ್ಠಾತೃದೇವತೆಯ ಧ್ಯಾನ ಮಾಡಬೇಕು.

(೧೦) ಆ ಸಾಮದ ಛಂದಸ್ಸಿನ, ಅದರ ಸ್ತೋಮದ (ಮಂತ್ರದ ಸ್ವರೂಪದ) ಉಪಾಸನೆ ಮಾಡಬೇಕು.

(೧೧) ಉದ್ಗಾತೃವು ಯಾವ ದಿಕ್ಕಿನ ಸ್ತುತಿ ಮಾಡುವವನಿರುವನೊ ಆ ದಿಕ್ಕಿನ ಧ್ಯಾನ ಮಾಡಬೇಕು.

(೧೨) ಕೊನೆಗೆ ತನ್ನ ಗೋತ್ರ ವರ್ಣ, ಆಶ್ರಮಗಳ ಉಚ್ಚಾರ ಮಾಡಿ ಧ್ಯಾನ ಮಾಡಬೇಕು. ತನ್ನ ಕಾಮನೆಗಳನ್ನು ಸ್ಮರಿಸುತ್ತ, ಉಚ್ಚಾರಗಳಲ್ಲಿ ತಪ್ಪು ಮಾಡದೆ ಧ್ಯಾನಿಸಬೇಕು. ಉದ್ಗಾತೃವು ಯಾವ ಕಾಮನೆಗಳ ಸ್ತುತಿ ಮಾಡುವನೊ ಆ ಕಾಮನೆಗಳು ಅವನಿಗೆ ತೀವ್ರ ಕೈವಶವಾಗುವವು.

೩ ನೆಯ ಖಂಡವು ಸಮಾಪ್ತವು

ಓಂ ಇತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯುದ್ಗಾಯತಿ
ತಸ್ಯೋಪವ್ಯಾಖ್ಯಾನಮ್ ॥ ೧ ॥

ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶꣳಸ್ತೇ ಛಂದೋ-
ಭಿರಚ್ಛಾದಯನ್ಯದೇಭಿರಚ್ಛಾದಯꣳಸ್ತಚ್ಛಂದಸಾಂ ಛಂದಸ್ತ್ವಮ್ ॥ ೨ ॥

ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇದೇವಂ
ಪರ್ಯಪಶ್ಯದೃಚಿ ಸಾಮ್ನಿ ಯಜುಷಿ। ತೇ ನು ವಿತ್ತ್ವೋರ್ಧ್ವಾ
ಋಚಃ ಸಾಮ್ನೋ ಯಜುಷಃ ಸ್ವರಮೇವ ಪ್ರಾವಿಶನ್ ॥ ೩ ॥

ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾತಿಸ್ವರತ್ಯೇವꣳಸಾಮೈವಂ
ಯಜುರೇಷ ಉ ಸ್ವರೋಯದೇತದಕ್ಷರಮೇತದಮೃತಮಭಯಂ
ತತ್ಪ್ರವಿಶ್ಯ ದೇವಾ ಅಮೃತಾ ಅಭಯಾ ಅಭವನ್ ॥ ೪ ॥

(೧) ಓಂ, ಎಂಬ ಅಕ್ಷರದ, ಈ ಉದ್ಗೀಥದ ಉಪಾಸನೆ ಮಾಡತಕ್ಕದ್ದು. ಓಂ ಎಂದು ಸಾಮವೇದದ ಗಾಯನ ಮಾಡುವರು. ಆ ಓಂಕಾರದ ವಿವೇಚನೆಯಿದು.

(೨) ದೇವತೆಗಳು ಮರಣಕ್ಕೆ ಅಂಜಿ ತ್ರಯೀ ವಿದ್ಯೆಯನ್ನು (ಋಕ್ ಯಜುಸ್ಸಾಮ ಮಂತ್ರಗಳನ್ನು) ಆಶ್ರಯಿಸಿದರು. ವೇದಗಳ ಛಂದಸ್ಸುಗಳಿಂದ ಅವರು ಆಚ್ಛಾದಿತರಾದರು. ಆದುದರಿಂದ ಛಂದಸ್ಸುಗಳಿಗೆ ಆಚ್ಛಾದಿಸುವ ಗುಣವು, ಛಂದತ್ವವು ಉಂಟಾಗಿರುವದು

(೩) ಆದರೆ ಮೀನವನ್ನು ನೀರಿನಲ್ಲಿ ಸ್ಪಷ್ಟವಾಗಿ ಕಾಣುವಂತೆ ಮೃತ್ಯುವು ದೇವತೆಗಳನ್ನು ಋಗ್ಮಂತ್ರ, ಯಜುರ್ ಮಂತ್ರ, ಸಾಮಮಂತ್ರಗಳಲ್ಲಿ ಗುರುತಿಸಿದನು. ಇದನ್ನರಿತು ದೇವತೆಗಳು ತ್ರಯೀ ವೇದಗಳಿಂದ ಮುಂದೆ ಸಾಗಿ ಸ್ವರವನ್ನು (ಓಂಕಾರವನ್ನು) ಆಶ್ರಯಿಸಿದರು.

(೪) ಋಗ್ವೇದವನ್ನು ಅನ್ನುವಾಗ ಓಂ ಎಂದೆ ಅನ್ನುವವನು ಅತ್ಯಾದರದಿಂದ ಅನ್ನುವನು. ಅದೇ ರೀತಿ ಯಜುಸ್ಸಾಮಗಳನ್ನು ಅನ್ನುವಾಗ ಅನ್ನು-ವವನು ಓಂ ಎಂದು ಪ್ರಾರಂಭ ಮಾಡುವನು. ಈ ಓಂಕಾರವೇ ಸ್ವರವು, ಇದು ಅಕ್ಷರವು. ಇದು ಅಮೃತವು, ಅಭಯವು. ಇದನ್ನಾಶ್ರಯಿಸಿ ದೇವತೆಗಳು ಅಮೃತರೂ ಅಭಯರೂ ಆದರು.

ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ ಸ್ವರ-
ಮಮೃತಮಭಯಂ ಪ್ರವಿಶತಿ ತತ್ಪ್ರವಿಶ್ಯ ಯದಮೃತಾ ದೇವಾಸ್ತ-
ದಮೃತೋಽಭವತಿ ॥ ೫ ॥

॥ ಇತಿ ಚತುರ್ಥಃ ಖಂಡಃ ॥

( ೫ ) ಇದನ್ನರಿತ ಯಾವ ವಿದ್ವಾಂಸನು ಓಂಕಾರದ ಉಪಾಸನೆ ಮಾಡು ವನೋ ಅವನು ಈ ಅಮೃತ, ಅಭಯ ಓಂಕಾರವನ್ನು ಪ್ರವೇಶಿಸುವನು. ಅದನ್ನಾಶ್ರಯಿಸಿ ದೇವತೆಗಳು ಅಮೃತರೂ ಅಭಯರೂ ಆದಂತೆ ಅವನೂ ಅಮೃತನೂ ಅಭಯನೂ ಆಗುವನು.

೪ ನೆಯ ಖಂಡವು ಸಮಾಪ್ತವು

ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ
ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ
ಸ್ವರನ್ನೇತಿ ॥ ೧ ॥

ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮ ತ್ವಮೇಕೋಽಸೀತಿ ಹ
ಕೌಷೀತಕಿಃ ಪುತ್ರಮುವಾಚ ರಶ್ಮೀಂಸ್ತ್ವಂ ಪರ್ಯಾವರ್ತಯಾದ್ಬ-
ಹವೋ ವೈ ತೇ ಭವಿಷ್ಯಂತೀತ್ಯಧಿದೈವತಮ್ ॥ ೨ ॥

( ೧ ) ನಿಜವಾಗಿ ಉದ್ಗೀಥವೇ ಪ್ರಾಣವು, ಪ್ರಾಣವೇ ಉದ್ಗೀಥವು. ಆ ಆದಿತ್ಯನು ಉದ್ಗೀಥವು, ಅದೇ ಪ್ರಾಣವು. ಆದಿತ್ಯನು ಓಂ ಎಂದು ಉಚ್ಚಾರ ಮಾಡುತ್ತ ಸಾಗುವನು.

( ೨ ) "ಈ ಏಕವಾದ ( ಸೂರ್ಯರೂಪೀ ) ಉದ್ಗೀಥನನ್ನು ಕುರಿತೇ ನಾನು ಗಾನ ಮಾಡಿದೆನು. ಆದುದರಿಂದ ನೀನು ನನಗೆ ಒಬ್ಬನೇ ಮಗ- ನಿರುವಿ " ಎಂದು ಕೌಷೀತಕಿಯು ತನ್ನ ಮಗನಿಗೆ ಹೇಳಿ, " ನೀನು ಸೂರ್ಯ ಕಿರಣಗಳ ಉಪಾಸನೆ ಮಾಡು. ಅಂದರೆ ( ಒಂದೇ ಸೂರ್ಯನಿಗೆ ಅನೇಕ ಕಿರಣಗಳಿರುವಂತೆ ) ನಿನಗೆ ಬಹಳ ಮಕ್ಕಳಾಗುವವು," ಎಂದು ಉಪದೇಶಿಸಿ- ದನು. ಇದು ಓಂಕಾರದ ಆಧಿದೈವಿಕ ಉಪಾಸನೆ.

ಅಥಾಧ್ಯಾತ್ಮಂ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾ-
ಸೀತೋಮಿತಿ ಹ್ಯೇಷ ಸ್ವರನ್ನೇತಿ ॥ ೩ ॥
ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮ ತ್ವಮೇಕೋಽಸೀತಿ ಹ
ಕೌಷೀತಕಿಃ ಪುತ್ರಮುವಾಚ ಪ್ರಾಣಾಂಸ್ತ್ವಂ ಭೂಮಾನಮಭಿ-
ಗಾಯತಾದ್ಬಹವೋ ವೈ ಮೇ ಭವಿಷ್ಯಂತೀತಿ ॥ ೪ ॥
ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ
ಇತಿ ಹೋತೃಷದನಾದ್ಧೈವಾಪಿ ದುರುದ್ಗೀಥಮನುಸಮಾಹರತೀ-
ತ್ಯನುಸಮಾಹರತೀತಿ ॥ ೫ ॥

|| ಇತಿ ಪಂಚಮಃ ಖಂಡಃ ||

(೩) ಇನ್ನು ಓಂಕಾರದ ಅಧ್ಯಾತ್ಮದ ಉಪಾಸನೆ. ಈ ಮುಖ್ಯಪ್ರಾಣ ವನ್ನೂ ಉದ್ಗೀಥವೆಂದು ಉಪಾಸಿಸಬೇಕು. ಪ್ರಾಣವು ಓಂ ಎಂದು ಉಚ್ಚರಿಸುತ್ತ ಸಾಗುವದು.

(೪) "ಆ ಮುಖ್ಯಪ್ರಾಣವನ್ನು ಕುರಿತೇ ನಾನು ಗಾನ ಮಾಡಿದೆನು. ಆದುದರಿಂದ ನನಗೆ ನೀನೊಬ್ಬನೆ ಮಗನಿರುವಿ," ಎಂದು ಕೌಷೀತಕಿಯು ತನ್ನ ಮಗನಿಗೆ ಹೇಳಿ, "ಪ್ರಾಣೋಪಾನಾದಿ ಪಂಚಪ್ರಾಣಗಳನ್ನೂ ಕುರಿತು ನೀನು ಉಪಾಸನೆ ಮಾಡು. ನಿನಗೆ ಬಹಳ ಮಕ್ಕಳಾಗಲೆಂದು ಆ ಪ್ರಾಣಗಳನ್ನೂ ಉಪಾಸಿಸು," ಎಂದು ಉಪದೇಶ ಮಾಡಿದನು.

(೫) ನಿಜವಾಗಿ ಉದ್ಗೀಥವೇ ಪ್ರಾಣವು, ಪ್ರಾಣವೇ ಉದ್ಗೀಥವು. ಇದನ್ನರಿತವನು ಹೋತೃಕರ್ಮ ಮಾಡುವಾಗ ಉದ್ಗಾತೃವಿನಿಂದ ಆದ ತಪ್ಪುಗಳನ್ನೆಲ್ಲ ತಿದ್ದುವನು, ತಿದ್ದುವನು.

೫ ನೆಯ ಖಂಡವು ಸಮಾಪ್ತವು

ಇಯಮೇವರ್ಗಗ್ನಿಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ
ತಸ್ಮಾದೃಚ್ಯಧ್ಯೂಢಂ ಸಾಮ ಗೀಯತ ಇಯಮೇವ ಸಾಽಗ್ನಿರಮಸ್ತ-
ತ್ಸಾಮ ॥ ೧ ॥

(೧) ಈ ಪೃಥ್ವಿಯೇ ಋಕ್ಕು, ಅಗ್ನಿಯೇ ಸಾಮವು. ಈ ಅಗ್ನಿ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಋಕ್ಕಿನಲ್ಲಿ ಸ್ಥಿತವಾದ ಸಾಮದ ಗಾಯನವು ಮಾಡಲ್ಪಡುವದು. ಪೃಥಿವಿಯೆ 'ಸಾ' ಮತ್ತು ಅಗ್ನಿಯೆ 'ಅಮ,' ಇವೆರಡೂ ಕೂಡಿ ಸಾಮವು ಸಿದ್ಧವಾಗುವದು.

ಅಂತರಿಕ್ಷಮೇವರ್ಗ್ವಾಯುಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇಽಂತರಿಕ್ಷಮೇವ ಸಾ ವಾಯುರಮಸ್ತತ್ಸಾಮ ॥ ೨ ॥

ದ್ಯೌರೇವರ್ಗಾದಿತ್ಯಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ದ್ಯೌರೇವ ಸಾದಿತ್ಯೋಽಮಸ್ತತ್ಸಾಮ ॥ ೩ ॥

ನಕ್ಷತ್ರಾಣ್ಯೇವರ್ಕ್ ಚಂದ್ರಮಾಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚಂದ್ರಮಾ ಅಮಸ್ತತ್ಸಾಮ ॥ ೪ ॥

ಅಥ ಯದೇತದಾದಿತ್ಯಸ್ಯ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ॥ ೫ ॥

( ೨ ) ಅಂತರಿಕ್ಷವೇ ಋಕ್ಕು, ವಾಯುವೇ ಸಾಮವು, ಈ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಹೀಗೆ ಋಕ್ಕಿನಲ್ಲಿ ಸ್ಥಿತವಿದ್ದ ಸಾಮವು ಹಾಕಲ್ಪಡುವದು. ಅಂತರಿಕ್ಷವೇ ' ಸಾ ' ವಾಯುವೇ ' ಅಮ ' ಇವೆರಡೂ ಕೂಡಿ ಸಾಮವು.

( ೩ ) ದ್ಯುಲೋಕವೇ ಋಕ್ಕು, ಆದಿತ್ಯವೇ ಸಾಮವು. ಈ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಹೀಗೆ ಋಕ್ಕಿನಲ್ಲಿ ಸ್ಥಿತವಿದ್ದ ಸಾಮವನ್ನು ಹಾಡುವರು. ದ್ಯುಲೋಕವೆ ' ಸಾ ' ಆದಿತ್ಯವೆ ' ಅಮ ' ಇವೆರಡೂ ಕೂಡಿ ಸಾಮವು.

( ೪ ) ನಕ್ಷತ್ರಗಳೆ ಋಕ್ಕು, ಚಂದ್ರನೆ ಸಾಮವು. ಈ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಹೀಗೆ ಋಕ್ಕಿನಲ್ಲಿ ಸ್ಥಿತವಿದ್ದ ಸಾಮನನ್ನು ಹಾಡುವರು. ನಕ್ಷತ್ರಗಳೆ ' ಸಾ ' ಚಂದ್ರನೆ ' ಅಮ ' ಇವೆರಡೂ ಕೂಡಿ ಸಾಮವು.

( ೫ ) ಇನ್ನು ಆದಿತ್ಯನ ಶುಭ್ರ ಪ್ರಕಾಶವೇ ಋಕ್ಕು, ಅವನ ನೀಲ ರೂಪವೇ ಅಥವಾ ಅತಿಶಯ ಕಪ್ಪು ಬಣ್ಣವೆ ( ರಾತ್ರಿ ಅಥವಾ ಗ್ರಹಣ ಕಾಲದಲ್ಲಿ ) ಸಾಮವು. ಈ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಹೀಗೆ ಋಕ್ಕಿನಲ್ಲಿ ಸ್ಥಿತವಾದ ಸಾಮನನ್ನು ಹಾಡುವರು.

ಅಥ ಯದೇವೈತದಾದಿತ್ಯಸ್ಯ ಶುಕ್ಲಂ ಭಾಃ ಸೈವ ಸಾಽಥ ಯನ್ನೀಲಂ
ಪರಃ ಕೃಷ್ಣಂ ತದಮಸ್ತತ್ಸಾಮಾಥ ಯ ಏಷೋಽಂತರಾದಿತ್ಯೇ
ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ
ಆಪ್ರಣಖಾತ್ಸರ್ವ ಏವ ಸುವರ್ಣಃ || ೬

ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ
ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇಭ್ಯಃ
ಪಾಪ್ಮಭ್ಯೋ ಯ ಏವಂ ವೇದ || ೭

ತಸ್ಯರ್ಕ್ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಸ್ತಸ್ಮಾತ್ತ್ವೇವೋ-
ದ್ಗಾತೈತಸ್ಯ ಹಿ ಗಾತಾ ಸ ಏಷ ಯೇ ಚಾಮುಷ್ಮಾತ್ಪರಾಂಚೋ
ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚೇತ್ಯಧಿದೈವತಮ್ || ೮

|| ಇತಿ ಷಷ್ಠಃ ಖಂಡಃ ||

(೬) ಆದಿತ್ಯನ ಶುಭ್ರರೂಪವೆ 'ಸಾ' ಅವನ ಅತಿಶಯ ಕಪ್ಪು ರೂಪವೆ 'ಅಮ' ಇವೆರಡೂ ಕೂಡಿ ಸಾಮವು. ಇನ್ನು ಆದಿತ್ಯನಲ್ಲಿ ಕಾಣುವ ಹಿರಣ್ಮಯ ಪುರುಷನು ಹೊಂಬಣ್ಣದ ಮೀಸೆ ಮತ್ತು ಹೊಂಬಣ್ಣದ ಕೂದಲುಗಳುಳ್ಳವನೂ ಉಗುರು ತುದಿಯಿಂದ ತಲೆಯ ವರೆಗೆ ಹೊಂಬಣ್ಣವುಳ್ಳವನೂ ಇರುವನು.

(೭) ಅವನ ಕಣ್ಣುಗಳು ಕಮಲಗಳಂತೆ ಇರುವವು. ಅವನ ಹೆಸರು 'ಉತ್' (ಉನ್ನತ) ಎಂದು ಇರುವದು. ಅವನು ಎಲ್ಲ ಪಾಪಗಳನ್ನೂ ದಾಟಿ ಹೋಗಿರುವನು. ಇದನ್ನರಿತವನು ಸಕಲ ಪಾಪಾತೀತನಾಗುವನು.

(೮) ಋಕ್ಕುಗಳು ಮತ್ತು ಸಾಮಗಳು ಆ ಪುರುಷನ ಹಾಡುಗಳು. ಆದುದರಿಂದ ಉದ್ಗಾತೃವು 'ಉತ್' ಹಾಡುವವನು, ಎಂದೆನಿಸುವನು. ಯಾಕೆಂದರೆ, ಅವನು 'ಉತ್' ಎಂಬವನ ಬಗ್ಗೆ ಹಾಡುವನು. ಆ ದೇವನು (ಸೂರ್ಯನು) ಈ ಲೋಕಗಳಾಚೆಗಿರುವ ಲೋಕಗಳನ್ನು ಆಳುವನು. ಮತ್ತು ದೇವತೆಗಳ ಕಾಮನೆಗಳನ್ನು ಪೂರೈಸುವನು. ಇದು ಆಧಿದೈವಿಕ ಸ್ವರೂಪವು.

೬ ನೆಯ ಖಂಡವು ಸಮಾಪ್ತವು

ತಥಾಧ್ಯಾತ್ಮಂ ವಾಗೇವರ್ಕ್ ಪ್ರಾಣಃ ಸಾಮ ತದೇತದೇತಸ್ಯಾಮೃಚ್ಯ-
ಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ವಾಗೇವ
ಸಾ ಪ್ರಾಣೋಽಮಸ್ತತ್ಸಾಮ ॥ ೧ ॥

ಚಕ್ಷುರೇವರ್ಗಾತ್ಮಾ ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ
ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ಚಕ್ಷುರೇವ ಸಾತ್ಮಾಽಮ-
ಸ್ತತ್ಸಾಮ ॥ ೨ ॥

ಶ್ರೋತ್ರಮೇವರ್ಙ್ಮನಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ
ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ಶ್ರೋತ್ರಮೇವ ಸಾಮನೋಽ-
ಮಸ್ತತ್ಸಾಮ ॥ ೩ ॥

ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ
ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ
ಸಾಮ ಗೀಯತೇ ॥ ಅಥ ಯದೇವೈತದಕ್ಷ್ಣಃ ಶುಕ್ಲಂ ಭಾಃ ಸೈವ
ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮ ॥ ೪ ॥

(೧) ಇನ್ನು ಉದ್ಗೀಥದ ಆಧ್ಯಾತ್ಮಿಕ ಉಪಾಸನೆ. ವಾಣಿಯೆ ಋಕ್ಕು, ಪ್ರಾಣವೆ ಸಾಮವು. ಈ ಸಾಮವು ಋಕ್ಕಿನಲ್ಲಿ ನೆಲೆಯಾಗಿರುವದು. ಆದುದರಿಂದ ಈ ಸಾಮದ ಗಾಯನ ಮಾಡುವರು. ವಾಣಿಯೆ 'ಸಾ', ಪ್ರಾಣವೆ 'ಅಮ' ಇವೆರಡೂ ಕೂಡಿ ಆ ಸಾಮವು.

(೨) ಕಣ್ಣುಗಳೆ ಋಕ್ಕು. ಆತ್ಮವೆ ಸಾಮವು. ಈ ಸಾಮವು ಋಕ್ಕುಗಳಲ್ಲಿ ನೆಲೆಯಾಗಿರುವದು. ಆದುದರಿಂದ ಈ ಸಾಮಗಾಯನ ಮಾಡುವರು. ಕಣ್ಣುಗಳೆ 'ಸಾ' ಆತ್ಮವೆ 'ಅಮ', ಇವೆರಡೂ ಕೂಡಿ ಆ ಸಾಮವು.

(೩) ಕಿವಿಗಳೆ ಋಕ್ಕು, ಮನಸೆ ಸಾಮವು. ಈ ಸಾಮವು ಋಕ್ಕಿನಲ್ಲಿ ನೆಲೆಯಾಗಿರುವದು. ಆದುದರಿಂದ ಈ ಸಾಮದ ಗಾಯನ ಮಾಡುವರು. ಕಿವಿಗಳೆ 'ಸಾ' ಮನಸೆ 'ಅಮ', ಇವೆರಡೂ ಕೂಡಿ ಆ ಸಾಮವು.

(೪) ಇನ್ನು ಈ ಕಣ್ಣಿನ ಶುಭ್ರಪ್ರಭೆಯೆ ಋಕ್ಕು, ಅದರ ನೀಲವಾದ ಅತಿಶಯ ಕಪ್ಪುರೂಪವೇ ಸಾಮವು. ಈ ಸಾಮವು ಋಕ್ಕಿನಲ್ಲಿ ಸ್ಥಿತವಿರುವದು. ಆದುದರಿಂದ ಈ ಸಾಮಗಾಯನ ಮಾಡುವರು. ಕಣ್ಣಿನ ಶುಭ್ರಪ್ರಭೆಯೆ 'ಸಾ' ನೀಲವಾದ ಅತಿಶಯ ಕಪ್ಪು ರೂಪವೆ 'ಅಮ' ಇವೆರಡೂ ಕೂಡಿ ಸಾಮವು.

ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ತತ್ಸಾಮ
ತದುಕ್ಥಂ ತದ್ಯಜುಸ್ತದ್ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದ-
ಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯನ್ನಾಮ
ತನ್ನಾಮ ‖ ೫ ‖

ಸ ಏಷ ಯೇ ಚೈತಸ್ಮಾದರ್ವಾಞ್ಚೋ ಲೋಕಾಸ್ತೇಷಾಂ ಚೇಷ್ಟೇ
ಮನುಷ್ಯಕಾಮಾನಾಂ ಚೇತಿ ತದ್ಯ ಇಮೇ ವೀಣಾಯಾಂ
ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ ‖ ೬ ‖

ಅಥ ಯ ಏತದೇವಂವಿದ್ವಾನ್ಸಾಮ ಗಾಯತ್ಯುಭೌ ಸ ಗಾಯತಿ
ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ಪರಾಞ್ಚೋ ಲೋಕಾ-
ಸ್ತಾꣳಶ್ಚಾಪ್ನೋತಿ ದೇವಕಾಮಾಸ್ತಾꣳಶ್ಚ ‖ ೭ ‖

ಅಥಾನೇನೈವ ಯೇ ಚೈತಸ್ಮಾದರ್ವಾಞ್ಚೋ ಲೋಕಾಸ್ತಾꣳಶ್ಚಾಪ್ನೋತಿ
ಮನುಷ್ಯಕಾಮಾꣳಶ್ಚ ತಸ್ಮಾದುಹೈವಂವಿದುದ್ಗಾತಾ ಬ್ರೂಯಾತ್ ‖ ೮ ‖

(೫) ಈ ಕಣ್ಣಿನ ಒಳಗೆ ಕಾಣುವ ಪುರುಷನೇ ಋಕ್ಕು, ಅವನೆ ಸಾಮ ಅವನೆ ಉಕ್ಥ (ಸ್ತುತಿ); ಅವನೆ ಯಜು, ಅವನೆ ಬ್ರಹ್ಮ. ಆ ಆದಿತ್ಯ-ಪುರುಷನ ರೂಪವೆ ಈ ಚಾಕ್ಷುಷ ಪುರುಷನ ರೂಪವು, ಅವನ ಹಾಡುಗಳೆ ಇವನ ಹಾಡುಗಳು. ಅವನ ಹೆಸರೆ ಇವನ ಹೆಸರು.

(೬) ಇವನು ಈಚೆಗಿನ (ಆತ್ಮನ ಈಚೆಗಿನ) ಲೋಕಗಳನ್ನು ಆಳುವನು. ಮತ್ತು ಮನುಷ್ಯಕಾಮನೆಗಳನ್ನು ಪೂರೈಸುವನು. ವೀಣೆಯೊಡನೆ ಹಾಡುವವರು ಇವನನ್ನು ಕುರಿತೇ ಹಾಡುವರು. ಆದುದರಿಂದ ಅವರು ಸಮೃದ್ಧರಾಗುವರು.

(೭) ಹೀಗೆ ಅರಿತು ಸಾಮಗಾಯನ ಮಾಡುವವನು ಇಬ್ಬರನ್ನೂ (ಆದಿತ್ಯ ಮತ್ತು ಚಾಕ್ಷುಷ ಪುರುಷ) ಕುರಿತು ಹಾಡುವನು. ಅವನು ಇದರಿಂದ (ಆದಿತ್ಯ ಪುರುಷನ ಉಪಾಸನೆಯಿಂದ) ಆಚೆಗಿನ ಲೋಕಗಳನ್ನು ಪಡೆಯುವನು ಹಾಗೂ ದೇವಕಾಮನೆಗಳನ್ನು ದೊರಕಿಸುವನು.

(೮) ಅವನು ಇದರಿಂದ (ಚಾಕ್ಷುಷ ಪುರುಷನ ಉಪಾಸನೆ) ಈಚೆಗಿನ ಲೋಕಗಳನ್ನು ಪಡೆಯುವನು. ಮತ್ತು ಮನುಷ್ಯನ ಕಾಮನೆಗಳನ್ನು ದೊರಕಿಸುವನು. ಆದುದರಿಂದ ಉದ್ಗಾತೃವು (ಯಜಮಾನನಿಗೆ) ಹೀಗೆ ಅನ್ನಬೇಕು.

ಕಂ ತೇ ಕಾಮಮಾಗಾಯಾನೀತ್ಯೇಷ ಹ್ಯೇವ ಕಾಮಗಾನಸ್ಯೇಷ್ಟೇ ಯ ಏವಂ ವಿದ್ವಾನ್ಸಾಮ ಗಾಯತಿ ಸಾಮ ಗಾಯತಿ ॥ ೯ ॥

॥ ಇತಿ ಸಪ್ತಮಃ ಖಂಡಃ ॥

(೯) 'ನಾನು ನಿನ್ನ ಯಾವ ಕಾಮನೆಗಳ ಪೂರ್ತಿಯ ಬಗ್ಗೆ ಉದ್ಗಾನ ಮಾಡಬೇಕು?' ಯಾಕೆಂದರೆ ಇವನು ಇಂಥ ಉದ್ಗಾನ ಮಾಡಲು ಸಮರ್ಥನು. ಇದನ್ನರಿತವನೆ ನಿಜವಾದ ಸಾಮಗಾನ ಮಾಡುವನು. ಸಾಮ ಗಾನ ಮಾಡುವನು.

೭ ನೆಯ ಖಂಡವು ಸಮಾಪ್ತವು

ತ್ರಯೋ ಹೋದ್ಗೀಥೇ ಕುಶಲಾ ಬಭೂವುಃ ಶಿಲಕಃ ಶಾಲಾವತ್ಯ-ಶ್ಚೈಕಿತಾಯನೋ ದಾಲ್ಭ್ಯಃ ಪ್ರವಾಹಣೋ ಜೈವಲಿರಿತಿ ತೇ ಹೋಚುರುದ್ಗೀಥೇ ವೈ ಕುಶಲಾಃ ಸ್ಮೋ ಹಂತೋದ್ಗೀಥೇ ಕಥಾಂ ವದಾಮ ಇತಿ ॥ ೧ ॥

ತಥೇತಿ ಹ ಸಮುಪವಿವಿಶುಃ ಸ ಹ ಪ್ರವಾಹಣೋ ಜೈವಲಿರುವಾಚ ಭಗವಂತಾವಗ್ರೇ ವದತಾಂ ಬ್ರಾಹ್ಮಣಯೋರ್ವದತೋರ್ವಾಚಶ್ಶ್ರೋಷ್ಯಾಮೀತಿ ॥ ೨ ॥

ಸ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚ ಹನ್ತ ತ್ವಾ ಪೃಚ್ಛಾನೀತಿ ಪೃಚ್ಛೇತಿ ಹೋವಾಚ ॥ ೩ ॥

(೧) ಶಿಲಕ ಶಾಲಾವತ್ಯ, ದಾಲ್ಭ್ಯ ಚೈಕಿತಾಯನ ಮತ್ತು ಪ್ರವಾಹಣ ಜೈವಲಿ ಈ ಮೂವರು ಉದ್ಗೀಥವನ್ನು ಚೆನ್ನಾಗಿ ಅರಿತವರಾದರು. 'ನಾವು ಉದ್ಗೀಥದಲ್ಲಿ ಕುಶಲರಾಗಿರುವೆವು, ಬನ್ನಿ, ನಾವು ಉದ್ಗೀಥವನ್ನು ಕುರಿತು ಮಾತನಾಡುವಾ' ಎಂದು ನುಡಿದರು.

(೨) ಇದಕ್ಕೆ ಒಪ್ಪಿ ಮೂವರೂ ಕುಳಿತುಕೊಂಡರು. ಆಗ ಪ್ರವಾಹಣ ಜೈವಲಿಯು ಅಂದದ್ದು, 'ಭಗವನ್ ನೀವಿಬ್ಬರೂ ಮಾತನಾಡಿರಿ. ನಾನು ಬ್ರಾಹ್ಮಣರ ಸಂಭಾಷಣವನ್ನು ಕೇಳುವೆನು.'

(೩) ಇದನ್ನು ಕೇಳಿ ಶಿಲಕನು ದಾಲ್ಭ್ಯನನ್ನು ಕುರಿತು ಅಂದದ್ದು, 'ನಿನ್ನ ಒಪ್ಪಿಗೆ ಇದ್ದರೆ, ನಾನು ನಿನಗೆ ಪ್ರಶ್ನೆ ಮಾಡುವೆನು'. 'ಒಳ್ಳೇದು,' ಎಂದು ಅವನು ಉತ್ತರಕೊಟ್ಟನು.

ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ ಸ್ವರಸ್ಯ ಕಾ ಗತಿರಿತಿ ಪ್ರಾಣ ಇತಿ ಹೋವಾಚ ಪ್ರಾಣಸ್ಯ ಕಾ ಗತಿರಿತ್ಯನ್ನಮಿತಿ ಹೋವಾಚಾ-ನ್ನಸ್ಯ ಕಾ ಗತಿರಿತ್ಯಾಪ ಇತಿ ಹೋವಾಚ ॥ ೪ ॥

ಅಪಾಂ ಕಾ ಗತಿರಿತ್ಯಸೌ ಲೋಕ ಇತಿ ಹೋವಾಚಾಮುಷ್ಯ ಲೋಕಸ್ಯ ಕಾ ಗತಿರಿತಿ ನ ಸ್ವರ್ಗಂ ಲೋಕಮತಿನಯೇದಿತಿ ಹೋವಾಚ ಸ್ವರ್ಗಂ ವಯಂ ಲೋಕಗ್ಂ ಸಾಮಾಭಿಸಂಸ್ಥಾಪಯಾಮ ಸ್ವರ್ಗಸಗ್ಂಸ್ತಾವಗ್ಂ ಹಿ ಸಾಮೇತಿ ॥ ೫ ॥

ತಗ್ಂ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚಾ-ಪ್ರತಿಷ್ಠಿತಂ ವೈ ಕಿಲ ತೇ ದಾಲ್ಭ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾ-ನ್ಮೂರ್ಧಾ ತೇ ವಿಪತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ॥ ೬ ॥

ಹನ್ತಾಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚಾಮುಷ್ಯ ಲೋಕಸ್ಯ ಕಾ ಗತಿರಿತ್ಯಯಂ ಲೋಕ ಇತಿ ಹೋವಾಚಾಸ್ಯ ಲೋಕಸ್ಯ

(೪) 'ಸಾಮದ ಗತಿ (ಆಶ್ರಯವು, ಪರಾಯಣವು) ಯಾವುದು?' 'ಸ್ವರವು'. 'ಸ್ವರದ ಗತಿ ಯಾವುದು?' 'ಪ್ರಾಣವು'. 'ಪ್ರಾಣದ ಗತಿಯಾವುದು?' 'ಅನ್ನವು'. 'ಅನ್ನದ ಗತಿಯಾವುದು?' 'ನೀರು'.

(೫) 'ನೀರಿನ ಗತಿಯಾವುದು?' 'ಆ (ಸ್ವರ್ಗ) ಲೋಕವು'. 'ಆ ಲೋಕದ ಗತಿ ಯಾವುದು?' 'ಸ್ವರ್ಗಲೋಕದಾಚೆಗೆ ಸಾಮವನ್ನು ಒಯ್ಯಕೂಡದು'. ಸಾಮವು ಸ್ವರ್ಗದಲ್ಲಿ ಪ್ರತಿಷ್ಠಿತವೆಂದು ನಾವು ತಿಳಿಯುವೆವು. ಸ್ವರ್ಗವೆಂದು ಸಾಮದ ಸ್ತುತಿ ಮಾಡುವರು.' ಎಂದು ದಾಲ್ಭ್ಯನು ಹೇಳಿದನು.

(೬) ಇದನ್ನು ಕೇಳಿ 'ನಿನ್ನ ಸಾಮವು ಅಪ್ರತಿಷ್ಠಿತವಿರುವದು. (ನೆಟ್ಟಗೆ ನೆಲೆಯಾಗದೆ ಇದ್ದುದು). ನಿನ್ನ ತಲೆಯು ಭೂಮಿಯ ಮೇಲೆ ಬೀಳಲಿ ಎಂದು ಜ್ಞಾನಿಯು ಶಾಪ ಕೊಟ್ಟರೆ ಆ ಪ್ರಕಾರ ನಿನ್ನ ತಲೆಯು ಬೀಳುವದು,' ಎಂದು ಶಿಲಕನು ಹೇಳಿದನು.

(೭) ದಾಲ್ಭ್ಯನು ಅಂದದ್ದು: 'ನಾನು ತಮ್ಮಿಂದ ಪೂರ್ಣ ಜ್ಞಾನವನ್ನು ಪಡೆಯಲು ಇಚ್ಛಿಸುವೆನು'. 'ಒಳ್ಳೇದು' ಎಂದು ಶಿಲಕನು ಒಪ್ಪಿಗೆಯನ್ನಿತ್ತನು. 'ಆ ಸ್ವರ್ಗಲೋಕದ ಗತಿ ಯಾವುದು?' ಎಂದು ದಾಲ್ಭ್ಯನು

ಕಾ ಗತಿರಿತಿ ನ ಪ್ರತಿಷ್ಠಾಂ ಲೋಕಮತಿನಯೇದಿತಿ ಹೋವಾಚ ಪ್ರತಿಷ್ಠಾಂ ವಯಂ ಲೋಕಸ್ಸಾಮಾಭಿಸಂಸ್ಥಾಪಯಾಮಃ ಪ್ರತಿಷ್ಠಾ-ಸಂಸ್ತಾವಂ ಹಿ ಸಾಮೇತಿ ॥ ೭ ॥

ತಂ ಹ ಪ್ರವಾಹಣೋ ಜೈವಲಿರುವಾಚಾನ್ತವದ್ವೈ ಕಿಲ ತೇ ಶಾಲಾವತ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾ ತೇ ವಿಪತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ಹನ್ತಾಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚ ॥ ೮ ॥

॥ ಇತ್ಯಷ್ಟಮಃ ಖಂಡಃ ॥

ಕೇಳಲು, 'ಈ ಲೋಕವು' ಎಂದು ಶಿಲಕನು ಹೇಳಿದನು. 'ಈ ಲೋಕದ ಗತಿಯಾವುದು?' 'ಈ ಲೋಕದಾಚೆಗೆ ಸಾಮನನ್ನು ಒಯ್ಯಕೂಡದು. ಸಾಮವು ಈ ಲೋಕದಲ್ಲಿ ಪ್ರತಿಷ್ಠಿತವೆಂದು ತಿಳಿಯುವೆವು. ಇಲ್ಲಿ ಪ್ರತಿಷ್ಠಿತವೆಂದು ಸಾಮವು ಸ್ತುತಿಸಲ್ಪಡುವದು' ಎಂದು ಶಿಲಕನು ಹೇಳಿದನು.

(೮) ಪ್ರವಾಹಣನು ಅಂದದ್ದು, 'ಶಿಲಕನೆ, ನಿನ್ನ ಸಾಮವು ಅಪ್ರತಿಷ್ಠಿತವಿರುವದು. ತಲೆ ಬೀಳಲಿ, ಎಂದು ಜ್ಞಾನಿಯು ಅಂದರೆ ನಿನ್ನ ತಲೆಯು ಭೂಮಿಗೆ ಬೀಳುವದು.' 'ಹಾಗಾದರೆ ನಾನು ನಿಮ್ಮಿಂದ ಸಾಮಜ್ಞಾನವನ್ನು ಕೇಳಲಿಚ್ಛಿಸುವೆನು,' ಎಂದು ಶಿಲಕನು ಅಂದನು. 'ಹಾಗೇ ಆಗಲಿ,' ಎಂದು ಪ್ರವಾಹಣನು ಒಡಂಬಟ್ಟನು.

೮ ನೆಯ ಖಂಡವು ಸಮಾಪ್ತವು

ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತ ಆಕಾಶಂ ಪ್ರತ್ಯಸ್ತಂ ಯಂತ್ಯಾಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್ ॥ ೧ ॥

(೧) 'ಈ ಲೋಕದ ಗತಿ ಯಾವುದು?' 'ಆಕಾಶವು. ಆಕಾಶದಿಂದಲೇ ಎಲ್ಲ ಭೂತಗಳು (ಉತ್ಪನ್ನವಾದ ವಸ್ತುಗಳು) ಹುಟ್ಟುವವು, ಆಕಾಶದಲ್ಲಿಯೇ ಅಸ್ತ ಹೊಂದುವವು. ಆಕಾಶವೆ ಈ ಎಲ್ಲ ಭೂತಗಳಿಗಿಂತ ಶ್ರೇಷ್ಠವು, ಅದೇ ಎಲ್ಲರ ಕೊನೆಯ ಆಶ್ರಯವು', (ಎಂದು ಪ್ರವಾಹಣನು ಹೇಳಿದನು).

ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ ಪರೋವರೀ-
ಯೋ ಹಾಸ್ಯ ಭವತಿ ಪರೋವರೀಯಸೊ ಹ ಲೋಕಾಞ್ಜಯತಿ ಚ
ಏತದೇವಂ ವಿದ್ವಾನ್ಪರೋವರೀಯಾಂಸಮುದ್ಗೀಥಮುಪಾಸ್ತೇ || ೨ ||
ತಂಹೈತಮತಿಧನ್ವಾ ಶೌನಕ ಉದರಶಾಂಡಿಲ್ಯಾಯೋಕ್ತ್ವೋವಾಚ
ಯಾವತ್ತ ಏನಂ ಪ್ರಜಾಯಾಮುದ್ಗೀಥಂ ವೇದಿಷ್ಯಂತೇ ಪರೋ-
ವರೀಯೋ ಹೈಭ್ಯಸ್ತಾವದಸ್ಮಿಂಲ್ಲೋಕೇ ಜೀವನಂ ಭವಿಷ್ಯತಿ || ೩ ||
ತಥಾಮುಷ್ಮಿಂಲ್ಲೋಕೆ ಲೋಕ ಇತಿ ಸ ಯ ಏತದೇವಂ ವಿದ್ವಾನು-
ಪಾಸ್ತೇ ಪರೋವರೀಯ ಏವ ಹಾಸ್ಯಾಸ್ಮಿಂಲ್ಲೋಕೆ ಜೀವನಂ
ಭವತಿ ತಥಾಮುಷ್ಮಿಂಲ್ಲೋಕೆ ಲೋಕ ಇತಿ ಲೋಕೇ ಲೋಕ ಇತಿ || ೪ ||

|| ಇತಿ ನವಮಃ ಖಂಡಃ ||

(೨) ಅದೇ ಶ್ರೇಷ್ಠವಾದ ಉದ್ಗೀಥವು. ಅದು ಅನಂತವಿರುವದು. ಇದನ್ನರಿತವನು ಯಾವನು ಈ ಶ್ರೇಷ್ಠವಾದ ಉದ್ಗೀಥದ ಉಪಾಸನೆ ಮಾಡುವನೊ ಅವನು ಶ್ರೇಷ್ಠನಾಗುವನು ಮತ್ತು ಶ್ರೇಷ್ಠ ಲೋಕಗಳನ್ನು ಪಡೆಯುವನು.

(೩) ಇದನ್ನು ಅತಿಧನ್ವನು ಉದರಶಾಂಡಿಲ್ಯ ಶೌನಕನಿಗೆ ಹೇಳಿ ಅಂದದ್ದು, ' ನಿನ್ನ ವಂಶಜರು ಈ ಉದ್ಗೀಥವನ್ನರಿತಿರುವ ವರೆಗೆ ಅವರ ಐಹಿಕ ಜೀವನವು ಸಾಮಾನ್ಯ ಜೀವನಕ್ಕಿಂತ ಶ್ರೇಷ್ಠತರವಾಗುವದು. ಅವರ ಪಾರ-ಲೌಕಿಕ ಜೀವನವು ಅದೇ ರೀತಿಯಾಗುವದು.'

(೪) ಇದನ್ನರಿತವನು ಯಾವನು ಈ ಉದ್ಗೀಥದ ಉಪಾಸನೆ ಮಾಡು-ವನೊ ಅವನ ಐಹಿಕ ಜೀವನವು ಶ್ರೇಷ್ಠತರಹದ್ದಾಗುವದು. ಮತ್ತು ಅದೇ ರೀತಿ ಅವನ ಪಾರಲೌಕಿಕ ಜೀವನವು ಆಗುವದು.

೯ ನೆಯ ಖಂಡವು ಸಮಾಪ್ತವು

ಮಟಚೀಹತೇಷು ಕುರುಷ್ವಾಟಿಕ್ಯಾ ಸಹ ಜಾಯಯೋಷಸ್ತಿರ್ಹ
ಚಾಕ್ರಾಯಣ ಇಭ್ಯಗ್ರಾಮೇ ಪ್ರದ್ರಾಣಕ ಉವಾಸ || ೧ ||

(೧) ಆಣೆಕಲ್ಲಿನ ಮಳೆ ಸುರಿದುದರಿಂದ ಬರ ಬಿದ್ದ ಕುರುದೇಶದಲ್ಲಿ ಇಭ್ಯ ಎಂಬ ಓರ್ವ ಸಿರಿವಂತನ ಗ್ರಾಮದಲ್ಲಿ ಉಷಸ್ತಿ ಚಾಕ್ರಾಯಣನೆಂಬವನು ತನ್ನ ಚಿಕ್ಕ ಹೆಂಡತಿಯೊಡನೆ ಇರುತಿದ್ದನು. ಅವನ ಸ್ಥಿತಿಯು ಅತ್ಯಂತ ನಿಕೃಷ್ಟವಿತ್ತು.

ಸ ಹೇಭ್ಯಂ ಕುಲ್ಮಾಷಾನ್ಖಾದಂತಂ ಬಿಭಿಕ್ಷೇ ತಂ ಹೋವಾಚ ನೇತೋಽ-
ನ್ಯೇ ವಿದ್ಯಂತೇ ಯಚ್ಚ ಯೇಮ ಇಮ ಉಪನಿಹಿತಾ ಇತಿ ॥ ೨ ॥
ಏತೇಷಾಂ ಮೇ ದೇಹೀತಿ ಹೋವಾಚ ತಾನಸ್ಮೈ ಪ್ರದದೌ ಹಂತಾನು-
ಪಾನಮಿತ್ಯುಚ್ಛಿಷ್ಟಂ ವೈ ಮೇ ಪೀತಂ ಸ್ಯಾದಿತಿ ಹೋವಾಚ ॥ ೩ ॥
ನ ಸ್ವಿದೇತೇಽಪ್ಯುಚ್ಛಿಷ್ಟಾ ಇತಿ ನ ವಾ ಅಜೀವಿಷ್ಯಮಿಮಾನ ಖಾದನ್ನಿತಿ
ಹೋವಾಚ ಕಾಮೋ ಮ ಉದಪಾನಮಿತಿ ॥ ೪ ॥
ಸ ಹ ಖಾದಿತ್ವಾತಿಶೇಷಾಞ್ಜಾಯಾಯಾ ಆಜಹಾರ ಸಾಗ್ರ ಏವ
ಸುಭಿಕ್ಷಾ ಬಭೂವ ತಾನ್ಪ್ರತಿಗೃಹ್ಯ ನಿದಧೌ ॥ ೫ ॥
ಸ ಹ ಪ್ರಾತಃ ಸಂಜಿಹಾನ ಉವಾಚ ಯದ್ಬತಾನ್ನಸ್ಯ ಲಭೇಮಹಿ
ಲಭೇಮಹಿ ಧನಮಾತ್ರಾಂ ರಾಜಾಸೌ ಯಕ್ಷ್ಯತೇ ಸ ಮಾ ಸರ್ವೈ-
ರಾರ್ತ್ವಿಜ್ಯೈರ್ವೃಣೀತೇತಿ ॥ ೬ ॥

(೨) ಅರೆ ಬೆರೆದ ಜವೆಗೋದಿಯನ್ನು ತಿನ್ನುತ್ತ ಕುಳಿತ ಇಭ್ಯನ ಕಡೆಗೆ ಅವನು ಭಿಕ್ಷೆ ಬೇಡಿದನು. ಆಗ, 'ನನ್ನ ಕಡೆಗೆ ಇವಿಷ್ಟು ಇರುವವು. ನನ್ನ ಬಳಿಗೆ ಇದ್ದವುಗಳನ್ನೆಲ್ಲ ಇಲ್ಲಿ ಬಡಿಸಿಕೊಂಡಿದ್ದೇನೆ', ಎಂದು ಇಭ್ಯನು ಅಂದನು.

(೩) 'ಅವನ್ನೆ ನನಗೆ ಕೊಡು' ಎಂದು ಉಷಸ್ತಿಯು ಬೇಡಿದನು. ಇಭ್ಯನು ಕೊಟ್ಟನು. ಅವುಗಳನ್ನು ತಿಂದ ಬಳಿಕ, 'ಕುಡಿಯಲಿಕ್ಕೆ ನೀರನ್ನು ಹಿಡಿ' ಎಂದನು. 'ಆ ನೀರು ಕುಡಿದರೆ ನಾನು ಎಂಜಲ ಕುಡಿ-ದಂತಾಗುವದು' ಎಂದು ಉಷಸ್ತಿಯು ಉತ್ತರಕೊಟ್ಟನು.

(೪) 'ಹಾಗೆಂದರೆ ಈ ಜವೆಗೋದಿಯೂ ಎಂಜಲವಲ್ಲವೆ?' ಎಂದು ಇಭ್ಯನು ಕೇಳಿದನು. ಅವುಗಳನ್ನು ತಿನ್ನದಿದ್ದರೆ ನಾನು ಬದುಕುವಂತಿರಲಿಲ್ಲ. ನನಗೆ ಬೇಕಾದಷ್ಟು ಬೇರೆ ನೀರು ಸಿಕ್ಕುವವು'. ಎಂದು ಉಷಸ್ತಿಯು ಹೇಳಿದನು.

(೫) ಉಷಸ್ತಿಯು ತನಗೆ ಬೇಕಾದಷ್ಟು ಜವೆಗೋದಿಗಳನ್ನು ತಿಂದು ಹೆಚ್ಚಾದವುಗಳನ್ನು ಹೆಂಡತಿಗಾಗಿ ಒಯ್ದನು. ಆಕೆಗೆ ಮೊದಲೇ ಬೇರೆ ಆಹಾರವು ದೊರೆತಿತ್ತು. ಅವುಗಳನ್ನು ಇಸುಕೊಂಡು ಆಕೆ ಇಟ್ಟುಬಿಟ್ಟಳು.

(೬) ಬೆಳಿಗ್ಗೆ ಎದ್ದು, 'ಸ್ವಲ್ಪ ಅನ್ನವು ದೊರೆತರೆ ಸ್ವಲ್ಪ ಧನವೂ ದೊರೆಯಬಹುದು (ಅನ್ನ ತಿಂದು ಸಮರ್ಥನಾಗಿ ಯಜ್ಞಕ್ಕೆ ಹೋಗಬಹುದು, ಎಂದು ಅರ್ಥ). ಅರಸನು ಯಜ್ಞಮಾಡುತಿರುವನು. ಅವನು ಋತ್ವಿಕ್ಕರ್ಮ-ಕ್ಕಾಗಿ ನನ್ನನ್ನು ಆರಿಸುವನು' ಎಂದು ಉಷಸ್ತಿಯು ಅಂದನು.

ತಂ ಜಾಯೋವಾಚ ಹನ್ತ ಪತ ಇಮ ಏವ ಕುಲ್ಮಾಷಾ ಇತಿ ತಾನ್ಖಾ-
ದಿತ್ವಾಮುಂ ಯಜ್ಞಂ ವಿತತಮೇಯಾಯ ॥ ೭ ॥

ತತ್ರೋದ್ಗಾತೃನಾಸ್ತಾವೇ ಸ್ತೋಷ್ಯಮಾಣಾನುಪೋಪವಿವೇಶ ಸ ಹ
ಪ್ರಸ್ತೋತಾರಮುವಾಚ ॥ ೮ ॥

ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾ-
ನ್ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ॥ ೯ ॥

ಏವಮೇವೋದ್ಗಾತಾರಮುವಾಚೋದ್ಗಾತರ್ಯಾ ದೇವತೋದ್ಗೀಥಮನ್ವಾ-
ಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ॥ ೧೦ ॥

ಏವಮೇವ ಪ್ರತಿಹರ್ತಾರಮುವಾಚ ಪ್ರತಿಹರ್ತರ್ಯಾ ದೇವತಾ ಪ್ರತಿ-
ಹಾರಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರತಿಹರಿಷ್ಯಸಿ ಮೂರ್ಧಾ ತೇ
ವಿಪತಿಷ್ಯತೀತಿ ತೇ ಹ ಸಮಾರತಾಸ್ತೂಷ್ಣೀಮಾಸಾಂಚಕ್ರಿರೇ ॥ ೧೧ ॥

॥ ಇತಿ ದಶಮಃ ಖಂಡಃ ॥

(೭) ಇದನ್ನು ಕೇಳಿ ಹೆಂಡತಿಯು ಅಂದದ್ದು: 'ಪತಿರಾಜನೇ, ಇಕೋ ಇಲ್ಲಿ ಜವೆಗೋದಿಗಳಿರುವವು,' ಅವುಗಳನ್ನು ತಿಂದು ಆವನು ಅತ್ತ ಕಡೆಗೆ ಯಜ್ಞಕ್ಕೆ ಹೋದನು.

(೮) ಅಲ್ಲಿ ಆಸ್ತಾವದಲ್ಲಿ ಸ್ತುತಿ ಮಾಡುತಿರುವ ಉದ್ಗಾತೃಗಳ ಬಳಿಗೆ ಹೋಗಿ ಕುಳಿತನು. ಅವನು ಪ್ರಸ್ತೋತ್ರನಿಗೆ ಅಂದದ್ದು,

(೯) 'ಹೇ ಪ್ರಸ್ತೋತೃವೆ, ನಿನ್ನ ಪ್ರಸ್ತಾವದ ಅಧಿದೇವತೆಯ ಜ್ಞಾನವಿಲ್ಲದೆ ನೀನು ಸ್ತವನ ಮಾಡುತಿದ್ದರೆ ನಿನ್ನ ತಲೆಯು ಕೆಳಗೆ ಬೀಳುವದು'.

(೧೦) ಇದೇ ರೀತಿ ಉದ್ಗಾತೃನಿಗೆ, 'ಹೇ, ಉದ್ಗಾತೃನೆ, ಉದ್ಗಾನದ ಅಧಿದೇವತೆಯ ಜ್ಞಾನವಿಲ್ಲದೆ ನೀನು ಗಾನ ಮಾಡುತಿದ್ದರೆ ನಿನ್ನ ತಲೆಯು ಕೆಳಗೆ ಬಿದ್ದು ಹೋಗುವದು,' ಎಂದನು.

(೧೧) ಇದೇ ರೀತಿ ಪ್ರತಿಹರ್ತನಿಗೆ ಅಂದದ್ದು, 'ಹೇ, ಪ್ರತಿಹರ್ತನೆ, ಪ್ರತಿಹಾರದ ಅಧಿದೇವತೆಯ ಜ್ಞಾನವಿಲ್ಲದೆ ನೀನು ಪ್ರತಿಹಾರ ಕರ್ಮ ಮಾಡು-ತಿದ್ದರೆ ನಿನ್ನ ತಲೆಯು ಕೆಳಗೆ ಬೀಳುವದು.' ಅವರು ತಮ್ಮ ಕರ್ಮ ನಿಲ್ಲಿಸಿ ಸ್ವಸ್ಥ ಕುಳಿತರು.

೧೦ ನೆಯ ಖಂಡವು ಸಮಾಪ್ತವು

ಅಥ ಹೈನಂ ಯಜಮಾನ ಉವಾಚ ಭಗವಂತಂ ವಾ ಅಹಂ ವಿವಿದಿಷಾ-
ಣೀತ್ಯುಷಸ್ತಿರಸ್ಮಿ ಚಾಕ್ರಾಯಣ ಇತಿ ಹೋವಾಚ ॥ ೧ ॥

ಸ ಹೋವಾಚ ಭಗವಂತಂ ವಾ ಅಹಮೇಭಿಃ ಸರ್ವೈರಾರ್ತ್ವಿಜ್ಯೈಃ
ಪರ್ಯೈಷಿಷಂ ಭಗವತೋ ವಾ ಅಹಮವಿತ್ತ್ಯಾನ್ಯಾನವೃಷಿ ॥ ೨ ॥

ಭಗವಾಂಸ್ತ್ವೇವ ಮೇ ಸರ್ವೈರಾರ್ತ್ವಿಜ್ಯೈರಿತಿ ತಥೇತ್ಯಥ ತರ್ಹ್ಯೇತ ಏವ
ಸಮತಿಸೃಷ್ಟಾಃ ಸ್ತುವತಾಂ ಯಾವತ್ತ್ವೇಭ್ಯೋ ಧನಂ ದದ್ಯಾ-
ಸ್ತಾವನ್ಮಮ ದದ್ಯಾ ಇತಿ ತಥೇತಿ ಹ ಯಜಮಾನ ಉವಾಚ ॥ ೩ ॥

ಅಥ ಹೈನಂ ಪ್ರಸ್ತೋತೋಪಸಸಾದ ಪ್ರಸ್ತೋತರ್ಯಾ ದೇವತಾ
ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರಸ್ತೋಷ್ಯಸಿ ಮೂರ್ಧಾ
ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ ॥ ೪ ॥

ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ
ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ

(೧) ಆಗ 'ನೀವು ಯಾರು ಎಂಬುದನ್ನು ತಿಳಿಯಲಿಚ್ಛಿಸುವೆನು' ಎಂದು ಯಜಮಾನನು (ಉಷಸ್ತಿಗೆ) ಅಂದನು. 'ನಾನು ಉಷಸ್ತಿ ಚಾಕ್ರಾಯಣನು' ಎಂದು ಉಷಸ್ತಿಯು ಹೇಳಿದನು.

(೨) 'ಈ ಎಲ್ಲ ಋತ್ವಿಕ್ಕರ್ಮಗಳಿಗಾಗಿ ತಮ್ಮನ್ನೆ ಹುಡುಕಿದೆನು. ಆದರೆ ತಾವು ಸಿಕ್ಕದೆ ಹೋದುದರಿಂದ ಎರಡನೆಯವರನ್ನು ಬರಮಾಡಿಕೊಂಡೆನು' ಎಂದು ಯಜಮಾನನು ಅಂದನು.

(೩) 'ಇನ್ನು ತಾವೇ ಈ ಕರ್ಮಗಳನ್ನು ನಡೆಸಬೇಕು,' ಎಂದು ಅರಸನು ಅನ್ನಲು 'ಒಳ್ಳೇದು ನನ್ನ ಅನುಜ್ಞೆಯಿಂದ ಇವರೇ ಸ್ತವನ ಮಾಡಲಿ' ಎಂದು ಉಷಸ್ತಿಯು ಹೇಳಿದನು. ಯಜಮಾನನು ಅದಕ್ಕೆ ಒಪ್ಪಿಗೆ ಕೊಟ್ಟನು.

(೪) ಆಗ ಉಷಸ್ತಿಯ ಬಳಿಗೆ ಪ್ರಸ್ತೋತೃವು ಬಂದು ಅಂದದ್ದು, 'ಭಗವನ್, ನೀವು (ಹೇ ಪ್ರಸ್ತೋತೃವೆ,) ಪ್ರಸ್ತಾವದ ಅಧಿದೇವತೆಯನ್ನರಿ-ಯದೆ ಸ್ತುತಿ ಮಾಡಿದರೆ ನಿನ್ನ ತಲೆ ಬೀಳುವದು' ಎಂದು ಅಂದಿರಿ. ಆದುದರಿಂದ ಭಗವನ್, ಆ ದೇವತೆ ಯಾವುದು ? ಇದನ್ನು ಹೇಳಬೇಕು.'

(೫) 'ಪ್ರಾಣವು. ಈ ಎಲ್ಲ ಭೂತಗಳು ಪ್ರಾಣದಲ್ಲಿಯೇ ಲೀನವಾಗುವವು. ಪ್ರಾಣದಿಂದಲೇ ಹುಟ್ಟುವವು, ಈ ಪ್ರಾಣದೇವತೆಯೆ ಪ್ರಸ್ತಾವದಲ್ಲಿ

ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರಸ್ತೋಷ್ಯೋ
ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ॥ ೫ ॥

ಅಥ ಹೈನಮುದ್ಗಾತೋಪಸಸಾದೋದ್ಗಾತರ್ಯಾ ದೇವತೋದ್ಗೀಥ-
ಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ
ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ ॥ ೬ ॥

ಆದಿತ್ಯ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾದಿತ್ಯ-
ಮುಚ್ಚೈಃ ಸನ್ತಂ ಗಾಯನ್ತಿ ಸೈಷಾ ದೇವತೋದ್ಗೀಥಮನ್ವಾಯತ್ತಾ
ತಾಂ ಚೇದವಿದ್ವಾನುದಗಾಸ್ಯೋ ಮೂರ್ಧಾ ತೇ ವ್ಯಪತಿಷ್ಯ-
ತ್ತಥೋಕ್ತಸ್ಯ ಮಯೇತಿ ॥ ೭ ॥

ಅಥ ಹೈನಂ ಪ್ರತಿಹರ್ತೋಪಸಸಾದ ಪ್ರತಿಹರ್ತರ್ಯಾ ದೇವತಾ ಪ್ರತಿ-
ಹಾರಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರತಿಹರಿಷ್ಯಸಿ ಮೂರ್ಧಾ ತೇ
ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ ॥ ೮ ॥

ಅಧಿಷ್ಠಿತವು. ಈ ದೇವತೆಯನ್ನರಿಯದೆ ನೀನು ಸ್ತವನ ಮಾಡಿದ್ದರೆ, ನಿನ್ನ ತಲೆಯು ಬೀಳುವದು, ಎಂದು ನಾನು ಅಂದಿದ್ದರಿಂದ ನಿನ್ನ ತಲೆಯು ಬೀಳುತಿತ್ತು,' ಎಂದು ಉಷಸ್ತಿಯು ನುಡಿದನು.

(೬) ಬಳಿಕ ಉದ್ಗಾತೃವು ಉಷಸ್ತಿಯ ಬಳಿಗೆ ಹೋಗಿ ಅಂದದ್ದು, 'ಭಗವನ್, ನೀವು, ಹೇ ಉದ್ಗಾತೃವೆ, ಉದ್ಗಾನದ ಅಧಿದೇವತೆಯನ್ನರಿಯದೆ ಉದ್ಗಾನ ಮಾಡಿದರೆ ನಿನ್ನ ತಲೆ ಬೀಳುವದು, ಎಂದು ಅಂದಿರಿ. ಆ ದೇವತೆಯು ಯಾವುದು ಅದನ್ನು ನನಗೆ ಹೇಳಿರಿ.'

(೭) 'ಆದಿತ್ಯನು. ಈ ಎಲ್ಲ ಭೂತಗಳು ಉಚ್ಚಸ್ಥಾನದಲ್ಲಿರುವ ಆದಿತ್ಯನನ್ನು ಕುರಿತು ಹಾಡುವವು. ಆ ದೇವತೆಯು ಉದ್ಗೀಥದಲ್ಲಿ ಅಧಿಷ್ಠಿತವು. ಆ ದೇವತೆಯನ್ನರಿಯದೆ ಉದ್ಗಾನ ಮಾಡಿದ್ದರೆ, ನಿನ್ನ ತಲೆ ಬೀಳುವದು ಎಂದು ನಾನು ಅಂದದ್ದರಿಂದ ನಿನ್ನ ತಲೆ ಬೀಳುತಿತ್ತು' ಎಂದು ಉಷಸ್ತಿಯು ಹೇಳಿದನು.

(೮) ಅದೇ ರೀತಿ ಪ್ರತಿಹರ್ತನು ಅವನ ಬಳಿಗೆ ಬಂದು, 'ಭಗವನ್, ನೀವು ಪ್ರತಿಹಾರಿಯೇ, ಪ್ರತಿಹಾರದ ಅಧಿದೇವತೆಯನ್ನರಿಯದೆ ಪ್ರತಿಹರಣ ಮಾಡಿದರೆ ನಿನ್ನ ತಲೆಯು ಬೀಳುವದು, ಎಂದು ಅಂದಿರಿ. ಆ ದೇವತೆ ಯಾವುದು ಇದನ್ನು ನನಗೆ ತಿಳಿಸಿರಿ.' ಎಂದು ಕೇಳಿಕೊಂಡನು.

ಅನ್ನಮಿತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯನ್ನಮೇವ
ಪ್ರತಿಹರಮಾಣಾನಿ ಜೀವನ್ತಿ ಸೈಷಾ ದೇವತಾ ಪ್ರತಿಹಾರಮನ್ವಾ-
ಯತ್ತಾ ತಾಂ ಚೇದವಿದ್ವಾನ್ಪ್ರತ್ಯಹರಿಷ್ಯೋ ಮೂರ್ಧಾ ತೇ ವ್ಯಪತಿಷ್ಯ-
ತ್ತಥೋಕ್ತಸ್ಯ ಮಯೇತಿ ತಥೋಕ್ತಸ್ಯ ಮಯೇತಿ ॥ ೯ ॥

॥ ಇತ್ಯೇಕಾದಶಃ ಖಂಡಃ ॥

(೯) 'ಅನ್ನವು. ಈ ಎಲ್ಲ ಭೂತಗಳು ಅನ್ನದ ಪ್ರತಿಹರಣ (ಸೇವನ) ಮಾಡಿ ಜೀವಿಸುವವು. ಪ್ರತಿಹರಣ ಕರ್ಮದಲ್ಲಿ ಆ ದೇವತೆ ಪ್ರತಿಷ್ಠಿತ ವಿರುವದು. ಅದನ್ನರಿಯದೆ ನೀನು ಪ್ರತಿಹರಣ ಮಾಡಿದ್ದರೆ, ನಿನ್ನ ತಲೆ ಬೀಳುವದು, ಎಂದು ನಾನು ಅಂದದ್ದರಿಂದ ನಿನ್ನ ತಲೆ ಬೀಳುತಿತ್ತು' ಎಂದು ಉಷಸ್ತಿಯು ಹೇಳಿದನು.

೧೧ ನೆಯ ಖಂಡವು ಸಮಾಪ್ತವು

ಅಥಾತಃ ಶೌವ ಉದ್ಗೀಥಸ್ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ
ಮೈತ್ರೇಯಃ ಸ್ವಾಧ್ಯಾಯಮುದ್ವವ್ರಾಜ ॥ ೧ ॥

ತಸ್ಮೈ ಶ್ವಾ ಶ್ವೇತಃ ಪ್ರಾದುರ್ಬಭೂವ ತಮನ್ಯೇ ಶ್ವಾನ ಉಪಸಮೇತ್ಯೋ-
ಚುರನ್ನಂ ನೋ ಭಗವಾನಾಗಾಯತ್ವಶನಾಯಾಮ ವಾ ಇತಿ ॥ ೨ ॥

ತಾನ್ಹೋವಾಚೇಹೈವಮಾ ಪ್ರಾತರುಪಸಮೀಯಾತೇತಿ ತದ್ಧ ಬಕೋ
ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಪ್ರತಿಪಾಲಯಾಂಚಕಾರ ॥ ೩ ॥

(೧) ಇನ್ನು ಶೌವ (ಶ್ವಾನಗಳಿಂದ ತಿಳಿದ) ಉದ್ಗೀಥದ ಆರಂಭವು. ಬಕದಾಲ್ಭ್ಯನು ಅಥವಾ ಗ್ಲಾವ ಮೈತ್ರೇಯನು ಸ್ವಾಧ್ಯಾಯಕ್ಕಾಗಿ ಊರ ಹೊರಗೆ ಹೋದನು.

(೨) ಅವನೆದುರಿಗೆ ಒಂದು ಬಿಳೀ ನಾಯಿಯು ಪ್ರಕಟವಾಯಿತು. ಆದರ ಬಳಿಗೆ ಬೇರೆ ನಾಯಿಗಳು ಬಂದು 'ನಾವು ಹಸಿದಿರುವೆವು, ನೀನು ಗಾನ ಮಾಡಿ ನಮಗಾಗಿ ಅನ್ನವನ್ನು ಸಂಪಾದಿಸುವವನಾಗು,' ಎಂದು ಬೇಡಿಕೊಂಡವು.

(೩) ಬಿಳೀ ನಾಯಿಯು ಅವುಗಳಿಗೆ ಅಂದದ್ದು, 'ಬೆಳಿಗ್ಗೆ ಇಲ್ಲಿಯೆ ನೀವು ನನ್ನ ಬಳಿಗೆ ಬನ್ನಿರಿ,' ನಂತರ ಬಕದಾಲ್ಭ್ಯನು ಅಥವಾ ಗ್ಲಾವ ಮೈತ್ರೇಯನು ಅವುಗಳ ಹಾದೀ ನೋಡುತ್ತ ಕುಳಿತನು.

ತೇ ಹ ಯಥೈವೇದಂ ಬಹಿಷ್ಪವಮಾನೇನ ಸ್ತೋಷ್ಯಮಾಣಾಃ ಸಂ-
ರಬ್ಧಾಃ ಸರ್ಪಂತೀತ್ಯೇವ ಮಾಸಸೃಪುಸ್ತೇ ಹ ಸಮುಪವಿಶ್ಯ
ಹಿಂಚಕ್ರುಃ ॥ ೪ ॥

ಓ೩ ಮದಾ೩ ಮೋ೩ಂ ಪಿಬಾ೩ ಮೋ೩ ದೇವೋವರುಣಃ
ಪ್ರಜಾಪತಿಃ ಸವಿತಾ೨ನ್ನಮಿಹಾ೨ ಹರದನ್ನಪತೇ೨ನ್ನಮಿಹಾಹರಾ
೨ ಹರೋ೩ಮಿತಿ ॥ ೫ ॥

॥ ಇತಿ ದ್ವಾದಶಃ ಖಂಡಃ ॥

( ೪ ) ಬಹಿಷ್ಪವಮಾನ ಸ್ತೋತ್ರವನ್ನು ಅನ್ನುವಾಗ ಒಬ್ಬರ ಬೆನ್ನ ಹಿಂದೆ ಒಬ್ಬರು ( ಅನ್ನುವವರು ) ತಿರುಗುವಂತೆ, ಆ ನಾಯಿಗಳು ತಿರುಗಿದವು. ಬಳಿಕ ಕೆಳಗೆ ಕುಳಿತು ಹಿಂಕಾರ ಮಾಡಿದವು.

( ೫ ) ಓಂ ನಾವು ಅನ್ನುವೆವು, ನಾವು ಕುಡಿಯುವೆವು, ಓಂ, ವರುಣ, ಪ್ರಜಾಪತಿ, ಸವಿತೃ ದೇವತೆಗಳು ಇಲ್ಲಿ ಅನ್ನವನ್ನು ತರುವವರಾಗಲಿ; ಹೇ, ಅನ್ನಪತಿಯೇ ಇಲ್ಲಿ ಅನ್ನವನ್ನು ತಾ, ಅನ್ನವನ್ನು ತಾ.

೧೨ ನೆಯ ಖಂಡವು ಸಮಾಪ್ತವು

ಅಯಂ ವಾವ ಲೋಕೋ ಹಾಉಕಾರೋ ವಾಯುರ್ಹಾಇಕಾರ-
ಶ್ಚಂದ್ರಮಾ ಅಥಕಾರ ಆತ್ಮೇಹಕಾರೋಽಗ್ನಿರೀಕಾರಃ ॥ ೧ ॥

ಆದಿತ್ಯ ಊಕಾರೋ ನಿಹವ ಏಕಾರೋ ವಿಶ್ವೇದೇವಾ ಔಹೋಇಕಾರಃ
ಪ್ರಜಾಪತಿರ್ಹಿಂಕಾರಃ ಪ್ರಾಣಃ ಸ್ವರೋಽನ್ನಂ ಯಾ ವಾಗ್ವಿರಾಟ್ ॥ ೨ ॥

(೧) ಈ ಲೋಕವು ಹಾಉಕಾರವು, ವಾಯುವು ಹಾಇಕಾರವು, ಚಂದ್ರನು ಅಥಕಾರವು, ಆತ್ಮನು ಇಹಕಾರವು, ಅಗ್ನಿಯು ಈಕಾರವು,

( ೨ ) ಆದಿತ್ಯನು ಊಕಾರವು, ಕರೆಯುವದು ಏಕಾರವು, ವಿಶ್ವದೇವತೆಗಳು ಔಹೋಇಕಾರವು, ಪ್ರಜಾಪತಿಯು ಹಿಂಕಾರವು, ಪ್ರಾಣವು ಸ್ವರವು, ಅನ್ನವು ಯಾ, ವಾಣಿಯು ವಿರಾಟ್ ( ಆದಿತ್ಯಾದಿ ದೃಷ್ಟಿಯಿಂದ ಊ-ಕಾರಾದಿ ಸ್ತೋಭಾಕ್ಷರಗಳನ್ನು ಉಪಾಸಿಸಬೇಕು ಎಂದು ಅರ್ಥ ). ಸ್ತೋಭವೆಂದರೆ ಅರ್ಥರಹಿತ ಮಂತ್ರಪೂರಕ ಅಕ್ಷರಗಳು.

ಅನಿರುಕ್ತಸ್ತ್ರಯೋದಶಸ್ತೋಭಃ ಸಂಚರೋ ಹುಂಕಾರಃ ॥ ೩ ॥

ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನ-
ನ್ನಾದೋ ಭವತಿ ಯ ಏತಾಮೇವꣳಸಾಮ್ನಾಮುಪನಿಷದಂ
ವೇದೋಪನಿಷದಂ ವೇದ ಇತಿ ॥ ೪ ॥

॥ ಇತಿ ತ್ರಯೋದಶಃ ಖಂಡಃ ॥

ಇತಿ ಪ್ರಥಮಃ ಪ್ರಪಾಠಕಃ

(೩) ಅವರ್ಣನೀಯನು (ಬ್ರಹ್ಮನು ಕಾರಣಾತ್ಮನು) ಕಾರ್ಯರೂಪದಿಂದ ಹದಿಮೂರನೆಯ ಹುಂಕಾರ ಎಂಬ ಸ್ತೋಭಾಕ್ಷರದ ರೂಪದಿಂದ ಉಪಾಸ್ಯನು.

(೪) ಈ ಉಪಾಸಕನಿಗೆ ವಾಣಿಯು ತನ್ನ ಫಲವನ್ನು (ಋಗ್ವೇದಾದಿಗಳ ಫಲ) ಕೊಡುವದು. ಈ ಸಾಮಗಳ ಜ್ಞಾನವಿದ್ದವನು ಅನ್ನವಂತನೂ ಅನ್ನವನ್ನು ಭೋಗಿಸುವವನೂ ಆಗುವನು.

೧೩ ನೆಯ ಖಂಡವು ಸಮಾಪ್ತವು

೧ನೆಯ ಅಧ್ಯಾಯವು ಸಮಾಪ್ತವು

# ೨ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಮುಖ್ಯವಾಗಿ ಸಾಮೋಪಾಸನೆ, ಓಂಕಾರದ ಮಹತ್ವ ಮತ್ತು ಇಹಲೋಕ, ಅಂತರ್ಲೋಕ, ದ್ಯುಲೋಕ ಇವುಗಳ ಒಡೆತನವನ್ನು ಪಡೆಯುವ ರೀತಿ ಇಷ್ಟು ವಿಷಯಗಳು ಇರುವವು.

ಆರಂಭಕ್ಕೆ ಸಾಮ ಎಂದರೆ ಒಳಿತು, ಅಸಾಮ ಎಂದರೆ ಕೆಡಕು ಎಂದು ಉಪನಿಷತ್ಕಾರರು ಅರ್ಥಹೇಳಿ ಸಾಮೋಪಾಸನೆಯ ಪ್ರಾಶಸ್ತ್ಯವನ್ನು ವರ್ಣಿಸಿರುವರು. ಬಳಿಕ ೨-೭ ಈ ಖಂಡಗಳಲ್ಲಿ ಪಂಚಾವಯವ ಸಾಮದ ಉಪಾಸನೆಯನ್ನು ಹೇಳಿರುವರು. ಆದರೆ ಆ ಉಪಾಸನೆಯು ಕ್ರಮದಿಂದ ಲೋಕ, ವೃಷ್ಟಿ, ನೀರು, ಋತು, ಪಶು, ಪ್ರಾಣ ಇವುಗಳನ್ನು ಕುರಿತು ಹೇಳಲ್ಪಟ್ಟಿರುವದು. ಆ ಉಪಾಸನೆಯ ಫಲ-ಶ್ರುತಿಯೂ ಅಲ್ಲಿಯೇ ಹೇಳಲ್ಪಟ್ಟಿರುವದು.

೮-೯ ಈ ಎರಡೂ ಖಂಡಗಳಲ್ಲಿ ವಾಣಿ ಮತ್ತು ಆದಿತ್ಯ ಇವುಗಳಲ್ಲಿ ಪ್ರತಿಷ್ಠಿತವಿದ್ದ ಸಾಮದ ಸಪ್ತವಿಧ ಉಪಾಸನೆಯು ಉಕ್ತವಿರುವದು. ಇಂಥ ಉಪಾಸನೆಯ ಫಲವೂ ಅಲ್ಲಿ ಉಕ್ತವಿರುವದು. ಮುಂದೆ ೧೦ನೆಯ ಖಂಡದಲ್ಲಿ ಅತಿಮೃತ್ಯು ಸಾಮದ ವಿವರ ಮತ್ತು ಅದರ ಉಪಾಸನೆಯಿಂದ ಉಪಾಸಕನು ಮೃತ್ಯುವನ್ನು ದಾಟಿಹೋಗುವನು ಎಂಬ ವಿಧಾನ ಇವು ಇರುವವು.

೧೧ ರಿಂದ ೨೧ರ ವರೆಗೆ ಗಾಯತ್ರಿ, ರಥಂತರ, ವಾಮದೇವ್ಯ, ಬ್ರಹತ್‌ವೈರೂಪ, ವೈರಾಜ, ಶಕ್ವರ್ಯ, ರೇವತ್ಯ, ಯಜ್ಞಾಯಜ್ಞೀಯ, ರಾಜನ, ಸರ್ವ ಈ ಮುಂತಾದ ಸಾಮುಗಳ ಅವಯುವಗಳು, ಅವುಗಳ ಪ್ರತಿಷ್ಠೆ, ಅವುಗಳ ಉಪಾಸನೆಯಿಂದ ಆಗುವ ಫಲ ಇವು ಉಕ್ತವಾಗಿರುವವು.

೨೨ನೆಯ ಖಂಡದಲ್ಲಿ ವಿನರ್ದಿ ಸಾಮದ (ಒಳ್ಳೇ ಸುಂದರ ಸ್ವರದಲ್ಲಿ ಪ್ರತಿಷ್ಠಿತವಿರುವ ಸಾಮ) ಉಪಾಸನೆ, ಸ್ವರೋಚ್ಚಾರಗಳಲ್ಲಿ ಅಧಿಷ್ಠಿತವಿರುವ ದೇವತೆಗಳ ವಿವರ ಮತ್ತು ಉಪಾಸನೆ, ಇಂಥ ಉಪಾಸನೆಯ ಫಲ ಇವು ಹೇಳಲ್ಪಟ್ಟಿರುವವು.

೨೩ನೆಯ ಖಂಡವು ವಿಶೇಷ ಮಹತ್ವದ್ದಿರುವದು. ಯಾಕಂದರೆ ಇದರಲ್ಲಿ ಧರ್ಮದ ಮುಖ್ಯಾಧಾರಗಳು ಹೇಳಲ್ಪಟ್ಟಿರುವವು. ಇದಲ್ಲದೆ ಬ್ರಹ್ಮಸಂಸ್ಥನಿದ್ದವನು ಮಾತ್ರ ಮೋಕ್ಷವನ್ನು ಪಡೆಯಬಲ್ಲನು. ಮಿಕ್ಕ ಉಪಾಸಕರು ಸ್ವರ್ಗದ ಅಧಿಕಾರಿಗಳು, ಎಂಬ ವಿಧಾನವಿರುವದು. ಬಳಿಕ ಓಂಕಾರದ ಉತ್ಪತ್ತಿಯೂ ಅದರ ಸರ್ವವ್ಯಾಪಕತ್ವವೂ ಹೇಳಲ್ಪಟ್ಟಿರುವದು.

೨೪ನೆಯ ಖಂಡದಲ್ಲಿ ಪ್ರಾತರಾದಿ ಮೂರು ಯಜ್ಞಗಳ ಅಧಿದೇವತೆಗಳ ಉಪಾಸನೆ ಮತ್ತು ತದ್ವಾರಾ ಮೂರು ಲೋಕಗಳ ಒಡೆತನದ ಪ್ರಾಪ್ತಿ ಇವುಗಳ ಉಲ್ಲೇಖವಿರುವದು.

# ಅಥ ದ್ವಿತೀಯೋಽಧ್ಯಾಯಃ

ಓಂ ಸಮಸ್ತಸ್ಯ ಖಲು ಸಾಮ್ನ ಉಪಾಸನಂ ಸಾಧು ಯತ್ಖಲು ಸಾಧು ತತ್ಸಾಮೇತ್ಯಾಚಕ್ಷತೇ ಯದಸಾಧು ತದಸಾಮೇತಿ ॥ ೧ ॥

ತದುತಾಪ್ಯಾಹುಃ ಸಾಮ್ನೈನಮುಪಾಗಾದಿತಿ ಸಾಧುನೈನಮುಪಾಗಾದಿ-ತ್ಯೇವ ತದಾಹುರಸಾಮ್ನೈನಮುಪಾಗಾದಿತ್ಯಸಾಧುನೈನಮುಪಾ-ಗಾದಿತ್ಯೇವ ತದಾಹುಃ ॥ ೨ ॥

ಅಥೋತಾಪ್ಯಾಹುಃ ಸಾಮ ನೋ ಬತೇತಿ ಯತ್ಸಾಧು ಭವತಿ ಸಾಧು ಬತೇತ್ಯೇವ ತದಾಹುರಸಾಮ ನೋ ಬತೇತಿ ಯದಸಾಧು ಭವತ್ಯ-ಸಾಧು ಬತೇತ್ಯೇವ ತದಾಹುಃ ॥ ೩ ॥

ಸ ಯ ಏತದೇವಂ ವಿದ್ವಾನ್ಸಾಧು ಸಾಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ ॥ ೪ ॥

॥ ಇತಿ ಪ್ರಥಮಃ ಖಂಡಃ ॥

(೧) ಪೂರ್ಣ ಸಾಮದ ಉಪಾಸನೆ ಒಳ್ಳೆಯದು. ಯಾವುದು ಒಳ್ಳೆಯದೊ ಅದು ಸಾಮವು. ಯಾವುದು ಕೆಡಕೊ ಅದು ಅಸಾಮವು.

(೨) ಯಾವನೊಬ್ಬನು ಇನ್ನೊಬ್ಬನ ಬಳಿಗೆ ಸಾಮದಿಂದ ಅಂದರೆ ಒಳ್ಳೆಯ ಭಾವದಿಂದ ಹೋದನು ಇಲ್ಲವೆ ಅಸಾಮದಿಂದ ಅಂದರೆ ಕೆಡಕು ಭಾವದಿಂದ ಹೋದನು ಎಂದು ಜನರು ಅನ್ನುವರು.

(೩) ಇದಲ್ಲದೆ, ಒಳಿತು ಆದರೆ 'ಅಹಾ ಸಾಮವಾಯಿತು,' ಕೆಡಕು ಆದರೆ 'ಅಯ್ಯೋ ಅಸಾಮವಾಯಿತು,' ಎಂದು ಜನರು ಹೇಳುವರು.

(೪) ಇದನ್ನರಿತು ಯಾವನು ಸಾಮವು ಒಳಿತು ಎಂದು ಉಪಾಸಿಸುವನೊ ಅವನ ಬಳಿಗೆ ಒಳ್ಳೆ ಧರ್ಮಗಳು ಬರುವವು ಮತ್ತು ಅವನಿಗೆ ನಮನ ಮಾಡುವವು, ಅರ್ಥಾತ್ ವಶವರ್ತಿಯಾಗಿ ನಡೆಯುವವು.

೧ ನೆಯ ಖಂಡವು ಸಮಾಪ್ತವು

ಲೋಕೇಷು ಪಂಚವಿಧꣳಸಾಮೋಪಾಸೀತ ಪೃಥಿವೀ ಹಿಂಕಾರೋಽಗ್ನಿಃ ಪ್ರಸ್ತಾವೋಽನ್ತರಿಕ್ಷಮುದ್ಗೀಥ ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತ್ಯೂರ್ಧ್ವೇಷು ॥ ೧ ॥

ಅಥಾವೃತ್ತೇಷು ದ್ಯೌರ್ಹಿಂಕಾರ ಆದಿತ್ಯಃ ಪ್ರಸ್ತಾವೋಽನ್ತರಿಕ್ಷಮುದ್ಗೀಥೋಽಗ್ನಿಃ ಪ್ರತಿಹಾರಃ ಪೃಥಿವೀ ನಿಧನಮ್ ॥ ೨ ॥

ಕಲ್ಪಂತೇ ಹಾಸ್ಮೈ ಲೋಕಾ ಊರ್ಧ್ವಾಶ್ಚಾವೃತ್ತಾಶ್ಚ ಯ ಏತದೇವಂ ವಿದ್ವಾꣳಲ್ಲೋಕೇಷು ಪಂಚವಿಧꣳಸಾಮೋಪಾಸ್ತೇ ॥ ೩ ॥

॥ ಇತಿ ದ್ವಿತೀಯಃ ಖಂಡಃ ॥

(೧) ಜಗತ್ತಿನಲ್ಲಿ ಪಂಚವಿಧ ಸಾಮವನ್ನು ಉಪಾಸಿಸಬೇಕು. ಪೃಥಿವಿಯು ಹಿಂಕಾರವು (ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ ಇವು ಪಂಚಾವಯವ ಸಾಮದ ಐದು ಅವಯವಗಳು), ಅಗ್ನಿಯು ಪ್ರಸ್ತಾವವು, ಅಂತರಿಕ್ಷವು ಉದ್ಗೀಥವು, ಆದಿತ್ಯನು ಪ್ರತಿಹಾರವು, ದ್ಯುಲೋಕವು ನಿಧನವು. ಹೀಗೆ ಊರ್ಧ್ವಲೋಕದ ದೃಷ್ಟಿಯಿಂದ ಸಾಮೋಪಾಸನೆ ಮಾಡಬೇಕು.

(೨) ಅಧೋಲೋಕಗಳಲ್ಲಿ ದ್ಯುಲೋಕವು ಹಿಂಕಾರವು, ಆದಿತ್ಯವು ಪ್ರಸ್ತಾವವು, ಅಂತರಿಕ್ಷವು ಉದ್ಗೀಥವು, ಅಗ್ನಿಯು ಪ್ರತಿಹಾರವು, ಪೃಥವಿಯು ನಿಧನವು.

(೩) ಇದನ್ನರಿತು ಜಗತ್ತಿನಲ್ಲಿ ಪಂಚವಿಧ ಸಾಮದ ಉಪಾಸನೆ ಮಾಡುವವನಿಗೆ ಊರ್ಧ್ವ ಮತ್ತು ಅಧೋಲೋಕಗಳು ಅನುಕೂಲವಾಗುವವು.

೨ ನೆಯ ಖಂಡವು ಸಮಾಪ್ತವು

ವೃಷ್ಟೌ ಪಂಚವಿಧꣳಸಾಮೋಪಾಸೀತ ಪುರೋ ವಾತೋ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ ॥ ೧ ॥

(೧) ವೃಷ್ಟಿಯನ್ನು ಕುರಿತು ಪಂಚವಿಧ ಸಾಮೋಪಾಸನೆ ಮಾಡಬೇಕು. ಮೊದಲು ಬಿಡುವ ಗಾಳಿಯು ಹಿಂಕಾರವು, ಏಳುವ ಮೋಡವು ಪ್ರಸ್ತಾವವು, ಮಳೆಗರೆಯುವದು ಉದ್ಗೀಥವು, ಮಿಂಚು ಮತ್ತು ಗರ್ಜನೆ ಪ್ರತಿಹಾರವು.

ಉದ್ಗೃಹ್ಣಾತಿ ತನ್ನಿಧನಂ ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತ-
ದೇವಂವಿದ್ವಾನ್ವೃಷ್ಟೌ ಪಂಚವಿಧꣳ ಸಾಮೋಪಾಸ್ತೇ || ೨ ||

|| ಇತಿ ತೃತೀಯಃ ಖಂಡಃ ||

(೨) ಮಳೆ ನಿಲ್ಲುವದು ನಿಧನವು. ಇದನ್ನರಿತು ವೃಷ್ಟಿಯನ್ನು ಕುರಿತು ಪಂಚವಿಧ ಸಾಮವನ್ನು ಉಪಾಸಿಸುವವನ ಇಚ್ಛೆಗನುಸರಿಸಿ ಮಳೆ ಬೀಳುವದು.

೩ ನೆಯ ಖಂಡವು ಸಮಾಪ್ತವು

ಸರ್ವಾಸ್ವಪ್ಸು ಪಂಚವಿಧꣳ ಸಾಮೋಪಾಸೀತ ಮೇಘೋ ಯತ್ಸಂಪ್ಲವತೇ
ಸ ಹಿಂಕಾರೋ ಯದ್ವರ್ಷತಿ ಸ ಪ್ರಸ್ತಾವೋ ಯಾಃ ಪ್ರಾಚ್ಯಃ
ಸ್ಯಂದಂತೇ ಸ ಉದ್ಗೀಥೋ ಯಾಃ ಪ್ರತೀಚ್ಯಃ ಸ ಪ್ರತಿಹಾರಃ
ಸಮುದ್ರೋ ನಿಧನಮ್ || ೧ ||
ನ ಹಾಪ್ಸು ಪ್ರೈತ್ಯಪ್ಸುಮಾನ್ಭವತಿ ಯ ಏತದೇವಂವಿದ್ವಾನ್ಸರ್ವಾಸ್ವಪ್ಸು
ಪಂಚವಿಧꣳ ಸಾಮೋಪಾಸ್ತೇ || ೨ ||

|| ಇತಿ ಚತುರ್ಥಃ ಖಂಡಃ ||

(೧) ಎಲ್ಲ ಅಪ್ಪುಗಳನ್ನು ಕುರಿತು ಪಂಚವಿಧ ಸಾಮದ ಉಪಾಸನೆ ಮಾಡಬೇಕು. ಮೋಡವು ಒಟ್ಟುಗೂಡುವದು ಹಿಂಕಾರವು, ಮಳೆಗರೆಯುವದು ಪ್ರಸ್ತಾವವು, ಪೂರ್ವಕ್ಕೆ ಹರಿಯುವ ಪ್ರವಾಹಗಳು ಉದ್ಗೀಥವು, ಪಶ್ಚಿಮಕ್ಕೆ ಹರಿಯುವ ಪ್ರವಾಹಗಳು ಪ್ರತಿಹಾರವು, ಸಮುದ್ರವು ನಿಧನವು.

(೨) ಇದನ್ನರಿತು ಅಪ್ಪುಗಳನ್ನು ಕುರಿತು ಪಂಚವಿಧ ಸಾಮೋಪಾಸನೆ ಮಾಡುವವನು ನೀರಿನಲ್ಲಿ ಸಾಯನು, ಅವನಿಗೆ ನೀರಿನ ಕೊರತೆಯೆಂಬುದು ಎಂದಿಗೂ ಆಗದು.

೪ ನೆಯ ಖಂಡವು ಸಮಾಪ್ತವು

ಋತುಷು ಪಂಚವಿಧꣳ ಸಾಮೋಪಾಸೀತ ವಸಂತೋ ಹಿಂಕಾರೋ
ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ಪ್ರತಿಹಾರೋ
ಹೇಮಂತೋ ನಿಧನಮ್ || ೧ ||

(೧) ಋತುಗಳನ್ನು ಕುರಿತು ಪಂಚವಿಧ ಸಾಮದ ಉಪಾಸನೆ ಮಾಡಬೇಕು. ವಸಂತವು ಹಿಂಕಾರವು, ಗ್ರೀಷ್ಮವು ಪ್ರಸ್ತಾವವು, ವರ್ಷಾಋತುವು ಉದ್ಗೀಥವು, ಶರತ್ತು ಪ್ರತಿಹಾರವು, ಹೇಮಂತವು ನಿಧನವು.

ಕಲ್ಪಂತೇ ಹಾಸ್ಮಾ ಋತವ ಋತುಮಾನ್ಭವತಿ ಯ ಏತದೇವಂ-
ವಿದ್ವಾನೃತುಷು ಪಂಚವಿಧꣳಸಾಮೋಪಾಸ್ತೇ ॥ ೨ ॥

॥ ಇತಿ ಪಂಚಮಃ ಖಂಡಃ ॥

(೨) ಇದನ್ನರಿತು ಋತುಗಳನ್ನು ಕುರಿತು ಪಂಚವಿಧ ಸಾಮೋಪಾಸನೆ ಮಾಡುವವನಿಗೆ ಋತುಗಳು ಅನುಕೂಲವಾಗುವವು ಮತ್ತು ಯೋಗ್ಯ ಫಲಗಳನ್ನು ಕೊಡುವವು.

೫ ನೆಯ ಖಂಡವು ಸಮಾಪ್ತವು

ಪಶುಷು ಪಂಚವಿಧꣳಸಾಮೋಪಾಸೀತಾಜಾ ಹಿಂಕಾರೋಽವಯಃ
ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ
ನಿಧನಮ್ ॥ ೧ ॥
ಭವಂತಿ ಹಾಸ್ಯ ಪಶವಃ ಪಶುಮಾನ್ಭವತಿ ಯ ಏತದೇವಂವಿದ್ವಾನ್ಪಶುಷು
ಪಂಚವಿಧꣳಸಾಮೋಪಾಸ್ತೇ ॥ ೨ ॥

॥ ಇತಿ ಷಷ್ಠಃ ಖಂಡಃ ॥

(೧) ಪಶುಗಳನ್ನು ಕುರಿತು ಪಂಚವಿಧ ಸಾಮವನ್ನು ಉಪಾಸಿಸಬೇಕು. ಆಡುಗಳು ಹಿಂಕಾರವು, ಕುರಿಗಳು ಪ್ರಸ್ತಾವವು, ಆಕಳು ಉದ್ಗೀಥವು, ಕುದುರೆಗಳು ಪ್ರತಿಹಾರವು, ಪುರುಷನು ನಿಧನವು.

(೨) ಇದನ್ನರಿತು ಪಶುಗಳನ್ನು ಕುರಿತು ಪಂಚವಿಧ ಸಾಮೋಪಾಸನೆ ಮಾಡುವವನು ಪಶುಗಳಿಂದ ಸಮೃದ್ಧನಾಗುವನು. ಪಶುಗಳು ಅವನಿಗೆ ಹೇರಳವಾಗಿ ದೊರೆಯುವವು.

೬ ನೆಯ ಖಂಡವು ಸಮಾಪ್ತವು

ಪ್ರಾಣೇಷು ಪಂಚವಿಧಂ ಪರೋವರೀಯಃ ಸಾಮೋಪಾಸೀತ ಪ್ರಾಣೋ
ಹಿಂಕಾರೋ ವಾಕ್ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರೋ
ಮನೋ ನಿಧನಂ ಪರೋವರೀಯಾꣳಸಿ ವೈತಾನಿ ॥ ೧ ॥

(೧) ಪ್ರಾಣಗಳನ್ನು ಕುರಿತು ಎಲ್ಲಕ್ಕೂ ಶ್ರೇಷ್ಠವಾದ ಪಂಚವಿಧ ಸಾಮದ ಉಪಾಸನೆ ಮಾಡಬೇಕು. ಪ್ರಾಣವು ಹಿಂಕಾರವು, ವಾಣಿಯು ಪ್ರಸ್ತಾವವು, ಚಕ್ಷುವು ಉದ್ಗೀಥವು, ಶ್ರೋತ್ರವು ಪ್ರತಿಹಾರವು, ಮನಸು ನಿಧನವು. ಇವು ಉತ್ತರೋತ್ತರ ಶ್ರೇಷ್ಠವಿರುವವು.

ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾ-
ಞ್ಜಯತಿ ಯ ಏತದೇವಂವಿದ್ವಾನ್ಪ್ರಾಣೇಷು ಪಂಚವಿಧಂ ಪರೋ-
ವರೀಯಃ ಸಾಮೋಪಾಸ್ತ ಇತಿ ತು ಪಂಚವಿಧಸ್ಯ ॥ ೨ ॥

॥ ಇತಿ ಸಪ್ತಮಃ ಖಂಡಃ ॥

( ೨ ) ಇದನ್ನರಿತು ಪ್ರಾಣಗಳನ್ನು ಕುರಿತು ಪಂಚವಿಧ ಸಾಮೋಪಾಸನೆ ಮಾಡುವವನ ಜೀವನವು ಉತ್ತರೋತ್ತರ ಶ್ರೇಷ್ಠವಾಗುವದು ಮತ್ತು ಅವನು ಉತ್ತರೋತ್ತರ ಶ್ರೇಷ್ಠ ಲೋಕಗಳನ್ನು ಗೆಲ್ಲುವನು.

೭ ನೆಯ ಖಂಡವು ಸಮಾಪ್ತವು

ಅಥ ಸಪ್ತವಿಧಸ್ಯ ವಾಚಿ ಸಪ್ತವಿಧꣳಸಾಮೋಪಾಸೀತ ಯತ್ಕಿಂಚ
ವಾಚೋ ಹುಮಿತಿ ಸ ಹಿಂಕಾರೋ ಯತ್ಪ್ರೇತಿ ಸ ಪ್ರಸ್ತಾವೋ
ಯದೇತಿ ಸ ಆದಿಃ ॥ ೧ ॥
ಯದುದಿತಿ ಸ ಉದ್ಗೀಥೋ ಯತ್ಪ್ರತೀತಿ ಸ ಪ್ರತಿಹಾರೋ ಯದುಪೇತಿ
ಸ ಉಪದ್ರವೋ ಯನ್ನೀತಿ ತನ್ನಿಧನಮ್ ॥ ೨ ॥
ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನ-
ನ್ನಾದೋ ಭವತಿ ಯ ಏತದೇವಂ ವಿದ್ವಾನ್ವಾಚಿ ಸಪ್ತವಿಧꣳ-
ಸಾಮೋಪಾಸ್ತೇ ॥ ೩ ॥

॥ ಇತ್ಯಷ್ಟಮಃ ಖಂಡಃ ॥

( ೧ ) ಇನ್ನು ಸಪ್ತವಿಧ ಸಾಮದ ಉಪಾಸನೆಯು. ವಾಣಿಯನ್ನು ಕುರಿತು ಸಪ್ತವಿಧ ಸಾಮದ ಉಪಾಸನೆ ಮಾಡಬೇಕು. ವಾಣಿಯಲ್ಲಿರುವ ಹುಂ ಹಿಂಕಾರವು, ( ಹಿಂಕಾರ, ಪ್ರಸ್ತಾವ, ಆದಿ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನ, ಇವು ಸಪ್ತಾವಯವ ಸಾಮದ ಏಳು ಅವಯವಗಳು ), ಪ್ರ ಪ್ರಸ್ತಾವವು, ಆ ಆದಿಯು.

( ೨ ) ಉತ್ ಉದ್ಗೀಥವು, ಪ್ರತಿ ಪ್ರತಿಹಾರವು, ಉಪ ಉಪದ್ರವವು, ನಿ ನಿಧನವು.

( ೩ ) ಇದನ್ನರಿತು ವಾಣಿಯನ್ನು ಕುರಿತು ಸಪ್ತವಿಧ ಸಾಮದ ಉಪಾಸನೆಯನ್ನು ಮಾಡುವವನು ಅನ್ನವುಳ್ಳವನೂ ಅನ್ನವನ್ನು ಭೋಗಿಸುವವನೂ ಆಗುವನು. ವಾಣಿಯು ತನ್ನ ಉಪಾಸನೆಯ ಫಲವನ್ನು ಅವನಿಗೆ ಕೊಡುವದು.

೮ ನೆಯ ಖಂಡವು ಸಮಾಪ್ತವು

ಅಥ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸೀತ ಸರ್ವದಾ
ಸಮಸ್ತೇನ ಸಾಮ ಮಾಂ ಪ್ರತಿ ಮಾಂ ಪ್ರತೀತಿ ಸರ್ವೇಣ
ಸಮಸ್ತೇನ ಸಾಮ ॥ ೧ ॥

ತಸ್ಮಿನ್ನಿಮಾನಿ ಸರ್ವಾಣಿ ಭೂತಾನ್ಯನ್ವಾಯತ್ತಾನೀತಿ ವಿದ್ಯಾತ್ತಸ್ಯ
ಯತ್ಪುರೋದಯಾತ್ಸ ಹಿಂಕಾರಸ್ತದಸ್ಯ ಪಶವೋಽನ್ವಾಯತ್ತಾಸ್ತ-
ಸ್ಮಾತ್ತೇ ಹಿಂಕುರ್ವಂತಿ ಹಿಂಕಾರಭಾಜಿನೋ ಹ್ಯೇತಸ್ಯ ಸಾಮ್ನಃ ॥ ೨ ॥

ಅಥ ಯತ್ಪ್ರಥಮೋದಿತೇ ಸ ಪ್ರಸ್ತಾವಸ್ತದಸ್ಯ ಮನುಷ್ಯಾ ಅನ್ವಾಯ-
ತ್ತಾಸ್ತಸ್ಮಾತ್ತೇ ಪ್ರಸ್ತುತಿಕಾಮಾಃ ಪ್ರಶಂಸಾಕಾಮಾಃ ಪ್ರಸ್ತಾವ-
ಭಾಜಿನೋ ಹ್ಯೇತಸ್ಯ ಸಾಮ್ನಃ ॥ ೩ ॥

ಅಥ ಯತ್ಸಂಗವವೇಲಾಯಾಂ ಸ ಆದಿಸ್ತದಸ್ಯ ವಯಾಂಸ್ಯನ್ವಾಯತ್ತಾನಿ
ತಸ್ಮಾತ್ತಾನ್ಯಂತರಿಕ್ಷೇಽನಾರಂಭಣಾನ್ಯಾದಾಯಾತ್ಮಾನಂ ಪರಿಪತಂ-
ತ್ಯಾದಿಭಾಜೀನಿ ಹ್ಯೇತಸ್ಯ ಸಾಮ್ನಃ ॥ ೪ ॥

(೧) ಇನ್ನು ಆದಿತ್ಯನನ್ನು ಕುರಿತು ಸಪ್ತವಿಧ ಸಾಮವನ್ನು ಉಪಾಸಿಸಬೇಕು. ಅವನು ಯಾವಾಗಲೂ ಸಮವಿರುವದರಿಂದ ಸಾಮನೆನಿಸುವನು. ಆದಿತ್ಯನು 'ನನ್ನ ಕಡೆಗೆ (ನೋಡುವನು), ನನ್ನ ಕಡೆಗೆ (ನೋಡುವನು)' ಎಂಬ ಸಮಬುದ್ಧಿಯನ್ನು ಎಲ್ಲರಲ್ಲಿ ಹುಟ್ಟಿಸುವನು. ಆದುದರಿಂದ ಅವನು ಸಾಮನು.

(೨) ಆದಿತ್ಯನಲ್ಲಿ ಈ ಎಲ್ಲ ಭೂತಗಳು ಇರುವವು ಎಂದು ತಿಳಿದುಕೊಳ್ಳಬೇಕು. ಉದಯಪೂರ್ವದಲ್ಲಿರುವ ಅವನ ಸ್ವರೂಪವು ಹಿಂಕಾರವು. ಪಶುಗಳು ಆದರಲ್ಲಿ ಅನುಗತವಿರುವವು. ಆದುದರಿಂದ ಅವು ಹಿಂಕಾರ ಮಾಡುವವು. ಅವು ಈ ಸಾಮದ ಉಪಾಸನೆ ಮಾಡುವವು.

(೩) ಆದಿತ್ಯನ ಪ್ರಥಮ ಉದಯರೂಪವು ಪ್ರಸ್ತಾವವು, ಅದರಲ್ಲಿ ಮನುಷ್ಯರು ಅನುಗತರಿರುವರು. ಆದುದರಿಂದ ಪ್ರಶಂಸೆಯನ್ನು ಇಚ್ಛಿಸುವರು. ಅವರು ಈ ಸಾಮವನ್ನು ಭಜಿಸುವರು.

(೪) ಸೂರ್ಯಕಿರಣಗಳು ಪೃಥ್ವಿಗೆ ಮುಟ್ಟುವ ವೇಳೆಗೆ ಕಾಣುವ ಆದಿತ್ಯನ ರೂಪವು ಆದಿಯು. ಆದರಲ್ಲಿ ಪಕ್ಷಿಗಳು ಅನುಗತವಿರುವವು. ಅವು ಈ ಸಾಮವನ್ನು ಉಪಾಸಿಸುವದರಿಂದ ಅಂತರಿಕ್ಷದಲ್ಲಿ ನಿರಾಲಂಬವಾಗಿ ಸಾಗುವವು.

ಅಥ ಯತ್ಸಂಪ್ರತಿ ಮಧ್ಯಂದಿನೇ ಸ ಉದ್ಗೀಥಸ್ತದಸ್ಯ ದೇವಾ ಅನ್ವಾ-
ಯತ್ತಾಸ್ತಸ್ಮಾತ್ತೇ ಸತ್ತಮಾಃ ಪ್ರಾಜಾಪತ್ಯಾನಾಮುದ್ಗೀಥಭಾಜಿನೋ
ಹ್ಯೇತಸ್ಯ ಸಾಮ್ನಃ ॥ ೫ ॥

ಅಥ ಯದೂರ್ಧ್ವಂ ಮಧ್ಯಂದಿನಾತ್ಪ್ರಾಗಪರಾಹ್ಣಾತ್ಸ ಪ್ರತಿಹಾರಸ್ತದಸ್ಯ
ಗರ್ಭಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರತಿಹೃತಾ ನಾವಪದ್ಯಂತೇ
ಪ್ರತಿಹಾರಭಾಜಿನೋ ಹ್ಯೇತಸ್ಯ ಸಾಮ್ನಃ ॥ ೬ ॥

ಅಥ ಯದೂರ್ಧ್ವಮಪರಾಹ್ಣಾತ್ಪ್ರಾಗಸ್ತಮಯಾತ್ಸ ಉಪದ್ರವಸ್ತದಸ್ಯಾ-
ರಣ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪುರುಷಂ ದೃಷ್ಟ್ವಾ ಕಕ್ಷಂ
ಶ್ವಭ್ರಮಿತ್ಯುಪದ್ರವಂತ್ಯುಪದ್ರವಭಾಜಿನೋ ಹ್ಯೇತಸ್ಯ ಸಾಮ್ನಃ ॥ ೭ ॥

ಅಥ ಯತ್ಪ್ರಥಮಾಸ್ತಮಿತೇ ತನ್ನಿಧನಂ ತದಸ್ಯ ಪಿತರೋಽನ್ವಾಯತ್ತಾಸ್ತ-
ಸ್ಮಾತ್ತಾನ್ನಿದಧತಿ ನಿಧನಭಾಜಿನೋ ಹ್ಯೇತಸ್ಯ ಸಾಮ್ನ ಏವಂ ಖಲ್ವ-
ಮುಮಾದಿತ್ಯಂ ಸಪ್ತವಿಧಂ ಸಾಮೋಪಾಸ್ತೇ ॥ ೮ ॥

॥ ಇತಿ ನವಮಃ ಖಂಡಃ ॥

(೫) ಆದಿತ್ಯನ ನಡುಹಗಲ ರೂಪವು ಉದ್ಗೀಥವು. ಆದರಲ್ಲಿ ದೇವತೆಗಳು ಅನುಗತವಿರುವರು. ಅವರು ಈ ಸಾಮದ ಉಪಾಸಕರಿರುವದರಿಂದ ಪ್ರಜೆಗಳಲ್ಲಿ ಉತ್ತಮರಿರುವರು.

(೬) ಮಧ್ಯಾಹ್ನದಾಚೆಗಿನ ಅಪರಾಹ್ಣಪೂರ್ವದ ಸ್ವರೂಪವು ಪ್ರತಿಹಾರವು. ಅದರಲ್ಲಿ ಗರ್ಭಗಳು ಅನುಗತವಿರುವವು. ಗರ್ಭಗಳು ಈ ಸಾಮದ ಉಪಾಸನೆ ಮಾಡುವದರಿಂದ ಕೆಳಗೆ ಬೀಳುವದಿಲ್ಲ.

(೭) ಅಪರಾಹ್ಣದ ನಂತರದ ಹಾಗೂ ಸಂಜೆಯ ಪೂರ್ವದ ರೂಪವು ಉಪದ್ರವವು. ಅರಣ್ಯದ ಪಶುಗಳು ಅದರಲ್ಲಿ ಅನುಗತವಿರುವವು. ಅವು ಈ ಸಾಮದ ಉಪಾಸನೆ ಮಾಡುವದರಿಂದ ಮನುಷ್ಯನನ್ನು ನೋಡಿದೊಡನೆ (ಭಯದಿಂದ) ಗುಹೆಗಳನ್ನು ಸೇರುವವು.

(೮) ಅಸ್ತಕಾಲದ ರೂಪವು ನಿಧನವು. ಆದರಲ್ಲಿ ಪಿತರರು ಅನುಗತರು. ಆದುದರಿಂದ ಅವರನ್ನು (ಪಿಂಡ ಮಾಡಿ ದರ್ಭದ ಮೇಲೆ) ಇಡುವರು. ಪಿತರರು ಈ ಸಾಮದ ಉಪಾಸನೆ ಮಾಡುವರು. ಈ ರೀತಿ ಆದಿತ್ಯನನ್ನು ಕುರಿತು ಸಪ್ತವಿಧ ಸಾಮದ ಉಪಾಸನೆ ಮಾಡುವರು.

೯ ನೆಯ ಖಂಡವು ಸಮಾಪ್ತವು

ಅಥ ಖಲ್ವಾತ್ಮಸಂಮಿತಮತಿಮೃತ್ಯು ಸಪ್ತವಿಧꣳ ಸಾಮೋಪಾಸೀತ
ಹಿಂಕಾರ ಇತಿ ತ್ರ್ಯಕ್ಷರಂ ಪ್ರಸ್ತಾವ ಇತಿ ತ್ರ್ಯಕ್ಷರಂ ತತ್ಸಮಮ್ ॥ ೧ ॥

ಆದಿರಿತಿ ದ್ವ್ಯಕ್ಷರಂ ಪ್ರತಿಹಾರ ಇತಿ ಚತುರಕ್ಷರಂ ತತ ಇಹೈಕಂ
ತತ್ಸಮಮ್ ॥ ೨ ॥

ಉದ್ಗೀಥ ಇತಿ ತ್ರ್ಯಕ್ಷರಮುಪದ್ರವ ಇತಿ ಚತುರಕ್ಷರಂ ತ್ರಿಭಿಸ್ತ್ರಿಭಿಃ
ಸಮಂ ಭವತ್ಯಕ್ಷರಮತಿಶಿಷ್ಯತೇ ತ್ರ್ಯಕ್ಷರಂ ತತ್ಸಮಮ್ ॥ ೩ ॥

ನಿಧನಮಿತಿ ತ್ರ್ಯಕ್ಷರಂ ತತ್ಸಮಮೇವ ಭವತಿ ತಾನಿ ಹ ವಾ ಏತಾನಿ
ದ್ವಾವಿꣳಶತಿರಕ್ಷರಾಣಿ ॥ ೪ ॥

ಏಕವಿಂಶತ್ಯಾದಿತ್ಯಮಾಪ್ನೋತ್ಯೇಕವಿಂಶೋ ವಾ ಇತೋಽಸಾವಾದಿತ್ಯೋ
ದ್ವಾವಿಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಮ್ ॥ ೫ ॥

(೧) ಇನ್ನು ಸಾಮುದಷ್ಟೇ ಮಹತ್ವದ ಅತಿಮೃತ್ಯು ಸಾಮವನ್ನು (ಅಮೃತತತ್ವವನ್ನು) ಕುರಿತು ಸಪ್ತವಿಧವಾಗಿ ಉಪಾಸನೆ ಮಾಡಬೇಕು. ಹಿಂಕಾರವು ಮೂರು ಅಕ್ಷರಗಳುಳ್ಳದ್ದು, ಪ್ರಸ್ತಾವವು ಮೂರು ಅಕ್ಷರಗಳುಳ್ಳದ್ದು, ಇವೆರಡೂ ಸಮವಾದವುಗಳು.

(೨) ಆದಿ ಇದು ಎರಡಕ್ಷರದ್ದು. ಪ್ರತಿಹಾರವು ನಾಲ್ಕಕ್ಷರದ್ದು. ಪ್ರತಿಹಾರದಲ್ಲಿಯ ಒಂದಕ್ಷರವನ್ನು 'ಆದಿ' ಯಲ್ಲಿ ಕೂಡಿಸಿದರೆ ಅವೂ ಮೂರು ಮೂರು ಸಮವಾಗುವವು.

(೩) ಉದ್ಗೀಥ ಇದು ಮೂರಕ್ಷರದ್ದು. ಉಪದ್ರವ ಇದು ನಾಲ್ಕಕ್ಷರದ್ದು. ಇವುಗಳಲ್ಲಿಯ ಮೂರು ಮೂರು ಅಕ್ಷರಗಳನ್ನು ತೆಗೆದುಕೊಂಡರೆ ಸಮವಾಗುವವು. ಒಂದು ಹೆಚ್ಚು ಉಳಿಯುವದು. ಅದೂ ಮೂರಕ್ಷರದ್ದೆ. ಅದೂ ಸಮವು.

(೪) ನಿಧನ ಇದು ಮೂರಕ್ಷರದ್ದು. ಇದು ಮಿಕ್ಕವುಗಳಿಗೆ ಸಮಾನವಿರುವದು. ಹೀಗೆ ಒಟ್ಟಿಗೆ ೨೨ ಅಕ್ಷರಗಳು.

(೫) ಇಪ್ಪತ್ತೊಂದು ಅಕ್ಷರಗಳಿಂದ ಉಪಾಸಕನು ಆದಿತ್ಯಲೋಕವನ್ನು ಜಯಿಸುವನು, ಆದಿತ್ಯನು ಈ ಲೋಕದಿಂದ ಇಪ್ಪತ್ತೊಂದನೆಯವನು (೧೨ ತಿಂಗಳು, ೫ ಋತುಗಳು, ೩ ಲೋಕಗಳು, ಆ ಬಳಿಕ ಆದಿತ್ಯ. ಆದುದರಿಂದ ಅವನು ೨೧ ನೆಯವನು.) ಇಪ್ಪತ್ತೆರಡು ಅಕ್ಷರಗಳಿಂದ ಉಪಾಸಕನು ಅವನಾಚೆಗೆ ಹೋಗುವನು. ಆ ಸ್ಥಾನವು ಸುಖಪೂರ್ಣವು, ಶೋಕರಹಿತವು.

ಆಪ್ನೋತೀಹಾದಿತ್ಯಸ್ಯ ಜಯಂ ಪರೋ ಹಾಸ್ಯಾದಿತ್ಯಜಯಾಜ್ಜಯೋ ಭವತಿ ಯ ಏತದೇವಂವಿದ್ವಾನಾತ್ಮಸಂಮಿತಮತಿಮೃತ್ಯು ಸಪ್ತವಿಧಂ ಸಾಮೋಪಾಸ್ತೇ ಸಾಮೋಪಾಸ್ತೇ ॥ ೬ ॥

॥ ಇತಿ ದಶಮಃ ಖಂಡಃ ॥

(೬) ಅವನಿಗೆ (ಉಪಾಸಕನಿಗೆ) ಆದಿತ್ಯನ ವಿಜಯವು ಪ್ರಾಪ್ತ-ವಾಗುವದು. ಇದನ್ನರಿತು ಅದ್ವಿತೀಯವಾದ ಅತಿಮೃತ್ಯುಸಾಮವನ್ನು ಉಪಾ-ಸಿಸುವವನು ಆದಿತ್ಯನ ಜಯಕ್ಕಿಂತ ಹೆಚ್ಚಿನ ವಿಜಯವನ್ನು ದೊರಕಿಸುವನು.

೧೦ ನೆಯ ಖಂಡವು ಸಮಾಪ್ತವು

ಮನೋ ಹಿಂಕಾರೋ ವಾಕ್ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರಃ ಪ್ರಾಣೋ ನಿಧನಮೇತದ್ಗಾಯತ್ರಂ ಪ್ರಾಣೇಷು ಪ್ರೋತಮ್ ॥ ೧ ॥

ಸ ಯ ಏವಮೇತದ್ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಮಹಾಮನಾಃ ಸ್ಯಾತ್ತದ್ವ್ರತಮ್ ॥ ೨ ॥

॥ ಇತ್ಯೇಕಾದಶಃ ಖಂಡಃ ॥

(೧) ಮನಸು ಹಿಂಕಾರವು, ವಾಣಿಯು ಪ್ರಸ್ತಾವವು, ಕಣ್ಣು ಉದ್ಗೀಥವು, ಕಿವಿಯು ಪ್ರತಿಹಾರವು, ಪ್ರಾಣವು ನಿಧನವು. ಈ ಗಾಯತ್ರ ಸಾಮವು ಪ್ರಾಣದಲ್ಲಿ ಪ್ರತಿಷ್ಠಿತವಿರುವದು.

(೨) ಈ ಗಾಯತ್ರ ಸಾಮವು ಪ್ರಾಣದಲ್ಲಿ ಪ್ರತಿಷ್ಠಿತವಿರುವದನ್ನು ಯಾವನು ಅರಿತಿರುವನೊ ಅವನು ಪ್ರಾಣಂಗತನಾಮುವನು, ಪೂರ್ಣ ಆಯುಷ್ಯವನ್ನು ಪಡೆಯುವನು, ಅವನ ಜೀವನವು ಉಜ್ವಲವಾಗುವದು. ದನಕರುಗಳಿಂದಲೂ ಪ್ರಜೆಗಳಿಂದಲೂ ಅವನು ಸಮೃದ್ಧನಾಗುವನು, ಕೀರ್ತಿವಂತನಾಗುವನು. ಅವನು ದೊಡ್ಡ ಮನಸ್ಸಿನವನಾಗಬೇಕು, ಇದು ವ್ರತವು.

೧೧ ನೆಯ ಖಂಡವು ಸಮಾಪ್ತವು

ಅಭಿಮಂಥತಿ ಸ ಹಿಂಕಾರೋ ಧೂಮೋ ಜಾಯತೇ ಸ ಪ್ರಸ್ತಾವೋ
ಜ್ವಲತಿ ಸ ಉದ್ಗೀಥೋಽಂಗಾರಾ ಭವಂತಿ ಸ ಪ್ರತಿಹಾರ ಉಪಶಾಮ್ಯತಿ
ತನ್ನಿಧನಲ್ಂ ಸಂಶಾಮ್ಯತಿ ತನ್ನಿಧನಮೇತದ್ರಥಂತರಮಗ್ನೌ ಪ್ರೋತಮ್ ॥ ೧ ॥
ಸ ಯ ಏವಮೇತದ್ರಥಂತರಮಗ್ನೌ ಪ್ರೋತಂ ವೇದ ಬ್ರಹ್ಮವರ್ಚಸ್ಯ-
ನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾ-
ನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನ ಪ್ರತ್ಯಙ್ಙಗ್ನಿಮಾಚಾ-
ಮೇನ್ನ ನಿಷ್ಠೀವೇತ್ತದ್ವ್ರತಮ್ ॥ ೨ ॥

॥ ಇತಿ ದ್ವಾದಶಃ ಖಂಡಃ ॥

(೧) ಅಭಿಮಂಥನವು (ಅರಣಿಗಳನ್ನು ತಿಕ್ಕುವದು) ಹಿಂಕಾರವು, ಏಳುವ ಹೊಗೆಯು ಪ್ರಸ್ತಾವವು, ಉರಿಯುವದು ಉದ್ಗೀಥವು; ಕೆಂಡಗಳು ಪ್ರತಿಹಾರವು, ಆರುವದು ನಿಧನವು, ಸಂಪೂರ್ಣ ಶಾಂತವಾಗುವದು ನಿಧನವು. ಈ ರಥಂತರ ಸಾಮವು ಅಗ್ನಿಯಲ್ಲಿ ಪ್ರತಿಷ್ಠಿತವಿರುವದು.

(೨) ಈ ಸಾಮವು ಅಗ್ನಿಯಲ್ಲಿ ಪ್ರತಿಷ್ಠಿತವಿರುವದನ್ನು ಯಾವನು ಅರಿತಿರುವನೊ ಅವನು ಬ್ರಹ್ಮವರ್ಚಸ್ಸುಳ್ಳವನೂ ಅನ್ನಭೋಗಿಯೂ ಆಗುವನು. ಅವನು ಪೂರ್ಣ ಆಯುಷ್ಮಂತನಾಗಿ ಉಜ್ವಲ ಜೀವನವುಳ್ಳವನಾಗುವನು. ಕೀರ್ತಿ, ದನಕರ, ಪ್ರಜೆಗಳು ಇವುಗಳಿಂದ ಅವನು ಯುಕ್ತನಾಗುವನು. ಅಗ್ನಿಯ ಕಡೆಗೆ ನೇರೆ ಮಾಡಿ ಆಚಮನ ಮಾಡಕೂಡದು ಮತ್ತು ಅತ್ತ ಉಗುಳಕೂಡದು. ಇದು ವ್ರತವು.

೧೨ ನೆಯ ಖಂಡವು ಸಮಾಪ್ತವು

ಉಪಮಂತ್ರಯತೇ ಸ ಹಿಂಕಾರೋ ಜ್ಞಪಯತೇ ಸ ಪ್ರಸ್ತಾವಃ ಸ್ತ್ರಿಯಾ
ಸಹ ಶೇತೇ ಸ ಉದ್ಗೀಥಃ ಪ್ರತಿಸ್ತ್ರೀ ಸಹ ಶೇತೇ ಸ ಪ್ರತಿಹಾರಃ
ಕಾಲಂ ಗಚ್ಛತಿ ತನ್ನಿಧನಂ ಪಾರಂ ಗಚ್ಛತಿ ತನ್ನಿಧನಮೇತದ್ವಾಮ-
ದೇವ್ಯಂ ಮಿಥುನೇ ಪ್ರೋತಂ ॥ ೧ ॥

(೧) ಸ್ತ್ರೀಗೆ ಸಂಕೇತ ಮಾಡುವುದು ಹಿಂಕಾರವು, ಆಕೆಗೆ ಇಚ್ಛೆಯನ್ನು ತಿಳಿಸುವದು ಪ್ರಸ್ತಾವವು, ಆಕೆಯೊಡನೆ ಮಲಗುವದು ಉದ್ಗೀಥವು, ಆಕೆಯ ಕಡೆಗೆ ಮುಖಮಾಡಿ ಮಲಗುವದು ಪ್ರತಿಹಾರವು, ಮೈಥುನದಲ್ಲಿ ಹೋದ ವೇಳೆಯು ನಿಧನವು, ಮೈಥುನಪೂರ್ತಿಯು ನಿಧನವು, ಈ ವಾಮದೇವ್ಯ ಸಾಮವು ಮಿಥುನದಲ್ಲಿ ಪ್ರತಿಷ್ಠಿತವು.

ಸ ಯ ಏವಮೇತದ್ವಾಮದೇವ್ಯಂ ಮಿಥುನೇ ಪ್ರೋತಂ ವೇದ ಮಿಥುನೀ-
ಭವತಿ ಮಿಥುನಾನ್ಮಿಥುನಾತ್ಪ್ರಜಾಯತೇ ಸರ್ವಮಾಯುರೇತಿ
ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ
ನ ಕಾಂಚನ ಪರಿಹರೇತ್ತದ್ವ್ರತಂ ॥ ೨ ॥

॥ ಇತಿ ತ್ರಯೋದಶಃ ಖಂಡಃ ॥

(೨) ಈ ವಾಮದೇವ್ಯ ಸಾಮವು ಮಿಥುನದಲ್ಲಿ ಪ್ರತಿಷ್ಠಿತವಿರುವದನ್ನು ಯಾವನು ಬಲ್ಲನೋ ಅವನು ಮಿಥುನವುಳ್ಳವನಾಗುವನು. ಅಮೋಘ ರೇತಸ್ಸುಳ್ಳವನಾಗುವನು. ಅವನು ಪೂರ್ಣಾಯುಷ್ಯವುಳ್ಳವನೂ ಉಜ್ವಲ ಜೀವನ ಉಳ್ಳವನೂ ಆಗುವನು. ಕೀರ್ತಿ, ಪಶು, ಪ್ರಜೆಗಳು ಇವುಗಳಿಂದ ಯುಕ್ತನಾಗಿ ಅವನು ಶ್ರೇಷ್ಠನೆನಿಸುವನು. ಸಮಾಗಮಾಭಿಲಾಷೆಯಿಂದ ಬಂದ ತನ್ನ ಸ್ತ್ರೀಯನ್ನು ಹಾಗೆಯೇ ಕಳಿಸದಿರುವದೇ ವ್ರತವು.

೧೩ ನೆಯ ಖಂಡವು ಸಮಾಪ್ತವು

ಉದ್ಯನ್ಹಿಂಕಾರ ಉದಿತಃ ಪ್ರಸ್ತಾವೋ ಮಧ್ಯಂದಿನ ಉದ್ಗೀಥೋಽಪರಾಹ್ಣಃ
ಪ್ರತಿಹಾರೋಽಸ್ತಂ ಯನ್ನಿಧನಮೇತದ್ಬೃಹದಾದಿತ್ಯೇ ಪ್ರೋತಂ ॥ ೧ ॥
ಸ ಯ ಏವಮೇತದ್ಬೃಹದಾದಿತ್ಯೇ ಪ್ರೋತಂ ವೇದ ತೇಜಸ್ವ್ಯನ್ನಾದೋ
ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶು-
ಭಿರ್ಭವತಿ ಮಹಾನ್ಕೀರ್ತ್ಯಾ ತಪಂತಂ ನ ನಿಂದೇತ್ತದ್ವ್ರತಂ ॥ ೨ ॥

॥ ಇತಿ ಚತುರ್ದಶಃ ಖಂಡಃ ॥

(೧) ಉದಯಿಸುವ ಸೂರ್ಯನು ಹಿಂಕಾರವು, ಉದಿತನಾದವನು ಪ್ರಸ್ತಾವವು, ಮಧ್ಯಾಹ್ನದವನು ಉದ್ಗೀಥವು, ಮೂರುಸಂಜೆಯವನು ಪ್ರತಿ-ಹಾರವು, ಮುಳುಗುವವನು ನಿಧನವು. ಈ ಬೃಹತ್ಸಾಮವು ಆದಿತ್ಯನಲ್ಲಿ ಪ್ರತಿಷ್ಠಿತವು.

(೨) ಈ ಬೃಹತ್ಸಾಮವು ಆದಿತ್ಯನಲ್ಲಿ ಪ್ರತಿಷ್ಠಿತವಿದ್ದುದನ್ನು ಯಾವನು ಬಲ್ಲನೋ ಅವನು ತೇಜಸ್ವಿಯೂ ಅನ್ನಭೋಗಿಯೂ ಆಗುವನು. ಪೂರ್ಣ ಆಯುಷ್ಮಂತನಾಗಿ ಅವನು ಉಜ್ವಲಜೀವಿಯಾಗುವನು. ಕೀರ್ತಿ, ಪಶುಗಳು, ಪ್ರಜೆಗಳು ಇವುಗಳಿಂದ ಯುಕ್ತನಾಗಿ ಅವನು ದೊಡ್ಡಸ್ತಿಕೆಯನ್ನು ಪಡೆಯು-ವನು. ಆದಿತ್ಯನನ್ನು ನಿಂದಿಸದಿರುವದೇ ವ್ರತವು.

೧೪ ನೆಯ ಖಂಡವು ಸಮಾಪ್ತವು

ಅಭ್ರಾಣಿ ಸಂಪ್ಲವಂತೇ ಸ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರ ಉದ್ಗೃಹ್ಣಾತಿ ತನ್ನಿಧನಮೇತದ್ವೈರೂಪಂ ಪರ್ಜನ್ಯೇ ಪ್ರೋತಂ ॥ ೧ ॥

ಸ ಯ ಏವಮೇತದ್ವೈರೂಪಂ ಪರ್ಜನ್ಯೇ ಪ್ರೋತಂ ವೇದ ವಿರೂಪಾಂಶ್ಚ ಸುರೂಪಾಂಶ್ಚ ಪಶೂನವರುಂಧೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ವರ್ಷಂತಂ ನ ನಿಂದೇತ್ತದ್ವ್ರತಂ ॥ ೨ ॥

॥ ಇತಿ ಪಂಚದಶಃ ಖಂಡಃ ॥

(೧) ಮೋಡಗಳು ಒಟ್ಟುಗೂಡುವದು ಹಿಂಕಾರವು, ಒಟ್ಟಾದ ಮೋಡವು ಪ್ರಸ್ತಾವವು, ಮಳೆಗರೆಯುವದು ಉದ್ಗೀಥವು, ಮಿಂಚುಸಿಡಿಲುಗಳು ಪ್ರತಿ-ಹಾರವು, ಮಳೆ ನಿಂತುಹೋಗುವದು ನಿಧನವು. ಈ ವೈರೂಪ ಸಾಮವು ಪರ್ಜನ್ಯದಲ್ಲಿ ಪ್ರತಿಷ್ಠಿತವು.

(೨) ಯಾವನು ಇದನ್ನು ಬಲ್ಲನೋ ಅವನಿಗೆ ವಿವಿಧ ವಿರೂಪ ಸುರೂಪ ಪಶುಗಳೆಲ್ಲ (ಅಜಾವಯಾದಿಗಳು) ಪ್ರಾಪ್ತವಾಗುವವು. ಅವನು ಪೂರ್ಣಾ-ಯುಷಿಯಾಗಿ ಉಜ್ವಲ ಜೀವನವುಳ್ಳವನಾಗುವನು. ಪಶು, ಪ್ರಜೆಗಳು, ಕೀರ್ತಿ ಇವು ಪ್ರಾಪ್ತವಾಗಿ ಅವನು ಶ್ರೇಷ್ಠನಾಗುವನು. ಪರ್ಜನ್ಯವನ್ನು ನಿಂದಿಸಬಾರದೆಂಬುದೆ ವ್ರತವು.

೧೫ ನೆಯ ಖಂಡವು ಸಮಾಪ್ತವು

ವಸಂತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ಪ್ರತಿಹಾರೋ ಹೇಮಂತೋ ನಿಧನಮೇತದ್ವೈರಾಜಮೃತುಷು ಪ್ರೋತಂ ॥ ೧ ॥

(೧) ವಸಂತವು ಹಿಂಕಾರವು, ಗೀಷ್ಮವು ಪ್ರಸ್ತಾವವು, ವರ್ಷಾಋತುವು ಉದ್ಗೀಥವು, ಶರತ್ತು ಪ್ರತಿಹಾರವು, ಹೇಮಂತವು ನಿಧನವು. ಈ ವೈರಾಜ ಸಾಮವು ಋತುಗಳಲ್ಲಿ ಪ್ರತಿಷ್ಠಿತವು.

ಸ ಯ ಏವಮೇತದ್ವೈರಾಜಮೃತುಷು ಪ್ರೋತಂ ವೇದ ವಿರಾಜತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯರ್ತೂನ್ನ ನಿಂದೇತ್ತದ್ವ್ರತಂ ॥ ೨ ॥

॥ ಇತಿ ಷೋಡಶಃ ಖಂಡಃ ॥

(೨) ಈ ವೈರಾಜ ಸಾಮವು ಋತುಗಳಲ್ಲಿ ಪ್ರತಿಷ್ಠಿತವಿದ್ದುದನ್ನು ಯಾವನು ಬಲ್ಲನೋ ಅವನು ಪ್ರಜೆಗಳಿಂದ, ಪಶುಗಳಿಂದ ಮತ್ತು ಬ್ರಹ್ಮ-ವರ್ಚಸ್ಸಿನಿಂದ ಪ್ರಕಾಶಮಾನನಾಗುವನು. ಪೂರ್ಣಾಯುಷಿಯಾದ ಅವನ ಜೀವನವು ಉಜ್ವಲವಾಗುವದು. ಕೀರ್ತಿ, ಪ್ರಜೆಗಳು, ಪಶುಗಳು, ಇವುಗಳಿಂದ ಯುಕ್ತನಾಗಿ ಅವನು ಶ್ರೇಷ್ಠನಾಗುವನು. ಋತುಗಳನ್ನು ನಿಂದಿಸದಿರುವದೇ ವ್ರತವು.

೧೬ ನೆಯ ಖಂಡವು ಸಮಾಪ್ತವು

ಪೃಥಿವೀ ಹಿಂಕಾರೋಽಂತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥೋ ದಿಶಃ ಪ್ರತಿಹಾರಃ ಸಮುದ್ರೋ ನಿಧನಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾಃ ॥ ೧ ॥

ಸ ಯ ಏವಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾ ವೇದ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಲೋಕಾನ್ನ ನಿಂದೇತ್ತದ್ವ್ರತಂ ॥ ೨ ॥

॥ ಇತಿ ಸಪ್ತದಶಃ ಖಂಡಃ ॥

(೧) ಪೃಥಿವಿಯು ಹಿಂಕಾರವು, ಅಂತರಿಕ್ಷವು ಪ್ರಸ್ತಾವವು, ದ್ಯುಲೋಕವು ಉದ್ಗೀಥವು, ದಿಕ್ಕುಗಳು ಪ್ರತಿಹಾರವು, ಸಮುದ್ರವು ನಿಧನವು. ಈ ಶಕ್ವರ್ಯ ಸಾಮವು ಲೋಕಗಳಲ್ಲಿ ಪ್ರತಿಷ್ಠಿತವು.

(೨) ಈ ಶಕ್ವರ್ಯ ಸಾಮವು ಲೋಕಗಳಲ್ಲಿ ಪ್ರತಿಷ್ಠಿತವಿದ್ದುದನ್ನು ಯಾವನು ಬಲ್ಲನೋ ಅವನು ಲೋಕವಂತನಾಗುವನು. ಪೂರ್ಣಾಯುಷಿ-ಯಾಗಿ ಉಜ್ವಲ ಜೀವನವುಳ್ಳವನಾಗುವನು. ಕೀರ್ತಿ, ಪಶು, ಪ್ರಜೆಗಳು ಇವುಗಳಿಂದ ಯುಕ್ತನಾಗಿ ಶ್ರೇಷ್ಠನಾಗುವನು. ಲೋಕಗಳನ್ನು ನಿಂದಿಸ-ದಿರುವದೇ ವ್ರತವು.

೧೭ ನೆಯ ಖಂಡವು ಸಮಾಪ್ತವು

ಅಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ
ಪ್ರತಿಹಾರಃ ಪುರುಷೋ ನಿಧನಮೇತಾ ರೇವತ್ಯಃ ಪಶುಷು ಪ್ರೋತಾಃ ॥ ೧ ॥
ಸ ಯ ಏವಮೇತಾ ರೇವತ್ಯಃ ಪಶುಷು ಪ್ರೋತಾ ವೇದ ಪಶುಮಾನ್ಭವತಿ
ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ
ಮಹಾನ್ಕೀರ್ತ್ಯಾ ನ ಪಶೂನ್ನಿಂದೇತ್ತದ್ವ್ರತಂ ॥ ೨ ॥

॥ ಇತಿ ಅಷ್ಟಾದಶಃ ಖಂಡಃ ॥

( ೧ ) ಆಡುಗಳು ಹಿಂಕಾರವು, ಕುರಿಗಳು ಪ್ರಸ್ತಾವವು, ಆಕಳುಗಳು ಉದ್ಗೀಥವು, ಕುದುರೆಗಳು ಪ್ರತಿಹಾರವು, ಪುರುಷನು ನಿಧನವು. ಈ ರೇವತ್ಯ ಸಾಮವು ಪಶುಗಳಲ್ಲಿ ಪ್ರತಿಷ್ಠಿತವು.

( ೨ ) ಈ ರೇವತ್ಯ ಸಾಮವು ಪಶುಗಳಲ್ಲಿ ಪ್ರತಿಷ್ಠಿತವಿದ್ದುದನ್ನು ಯಾವನು ಬಲ್ಲನೋ ಅವನು ಪಶುಗಳಿಂದ ಸಮೃದ್ಧನಾಗುವನು. ಆಯುಷ್ಮಂತನಾಗಿ ಉಜ್ವಲ ಜೀವನವುಳ್ಳವನಾಗುವನು. ಕೀರ್ತಿ, ಪ್ರಜೆಗಳು, ಪಶುಗಳು ಇವು-ಗಳಿಂದ ಯುಕ್ತನಾಗಿ ಅವನು ಶ್ರೇಷ್ಠನಾಗುವನು. ಪಶುಗಳನ್ನು ನಿಂದಿಸ-ದಿರುವದೇ ವ್ರತವು.

೧೮ ನೆಯ ಖಂಡವು ಸಮಾಪ್ತವು

ಲೋಮ ಹಿಂಕಾರಸ್ತ್ವಕ್ಪ್ರಸ್ತಾವೋ ಮಾಂಸಮುದ್ಗೀಥೋಽಸ್ಥಿ ಪ್ರತಿ-
ಹಾರೋ ಮಜ್ಜಾ ನಿಧನಮೇತದ್ಯಜ್ಞಾಯಜ್ಞೀಯಮಂಗೇಷು ಪ್ರೋತಂ ॥ ೧ ॥
ಸ ಯ ಏವಮೇತದ್ಯಜ್ಞಾಯಜ್ಞೀಯಮಂಗೇಷು ಪ್ರೋತಂ ವೇದಾಽಂಗೀ-
ಭವತಿ ನಾಂಗೇನ ವಿಹೂರ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ

( ೧ ) ಲೋಮವು ಹಿಂಕಾರವು, ಚರ್ಮವು ಪ್ರಸ್ತಾವವು, ಮಾಂಸವು ಉದ್ಗೀಥವು, ಅಸ್ಥಿಗಳು ಪ್ರತಿಹಾರವು, ಮಜ್ಜಾ ನಿಧನವು. ಈ ಯಜ್ಞಾ-ಯಜ್ಞೀಯ ಸಾಮವು ಅಂಗಗಳಲ್ಲಿ ಪ್ರತಿಷ್ಠಿತವು.

( ೨ ) ಈ ಯಜ್ಞಾಯಜ್ಞೀಯ ಸಾಮವು ಅಂಗಗಳಲ್ಲಿ ಪ್ರತಿಷ್ಠಿತವಿರುವು-ದನ್ನು ಯಾವನು ಬಲ್ಲನೋ ಅವನು ಒಳ್ಳೆ ಅಂಗಗಳುಳ್ಳವನಾಗುವನು ( ಅವಯವಾದಿ ). ಅವನ ಅಂಗಗಳು ವಿಕೃತವಾಗುವುದಿಲ್ಲ. ಆಯುಷ್ಮಂತ-

ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಸಂವತ್ಸರಂ
ಮಜ್ಜ್ಞೋ ನಾಶ್ನೀಯಾತ್ತದ್ವ್ರತಂ ಮಜ್ಜ್ಞೋ ನಾಶ್ನೀಯಾದಿತಿ ವಾ ॥ ೨ ॥

॥ ಇತಿ ಏಕೋನವಿಂಶಃ ಖಂಡಃ ॥

ನಾಗಿ ಅವನು ಉಜ್ವಲ ಜೀವನವುಳ್ಳವನಾಗುವನು. ಪಶುಗಳು, ಪ್ರಜೆಗಳು, ಕೀರ್ತಿ ಇವುಗಳಿಂದ ಯುಕ್ತನಾಗಿ ಅವನು ಶ್ರೇಷ್ಠನಾಗುವನು. ಒಂದು ವರ್ಷ ಮಾಂಸ ತಿನ್ನದಿರುವುದೆ ವ್ರತವು, ಇದೇ ವ್ರತವು.

೧೯ ನೆಯ ಖಂಡವು ಸಮಾಪ್ತವು

ಅಗ್ನಿರ್ಹಿಂಕಾರೋ ವಾಯುಃ ಪ್ರಸ್ತಾವ ಆದಿತ್ಯ ಉದ್ಗೀಥೋ ನಕ್ಷತ್ರಾಣಿ
ಪ್ರತಿಹಾರಶ್ಚಂದ್ರಮಾ ನಿಧನಮೇತದ್ರಾಜನಂ ದೇವತಾಸು ಪ್ರೋತಂ ॥ ೧ ॥

ಸ ಯ ಏವಮೇತದ್ರಾಜನಂ ದೇವತಾಸು ಪ್ರೋತಂ ವೇದೈತಾಸಾಮೇವ
ದೇವತಾನಾꣳ ಸಲೋಕತಾꣳ ಸಾರ್ಷ್ಟಿತಾꣳ ಸಾಯುಜ್ಯꣳ ಗಚ್ಛತಿ
ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ
ಮಹಾನ್ಕೀರ್ತ್ಯಾ ಬ್ರಾಹ್ಮಣಾನ್ನ ನಿಂದೇತ್ತದ್ವ್ರತಂ ॥ ೨ ॥

॥ ಇತಿ ವಿಂಶಃ ಖಂಡಃ ॥

(೧) ಅಗ್ನಿಯು ಹಿಂಕಾರವು, ವಾಯುವು ಪ್ರಸ್ತಾವವು, ಆದಿತ್ಯನು ಉದ್ಗೀಥವು, ನಕ್ಷತ್ರಗಳು ಪ್ರತಿಹಾರವು, ಚಂದ್ರನು ನಿಧನವು. ಈ ರಾಜನ ಸಾಮವು ದೇವತೆಗಳಲ್ಲಿ ಪ್ರತಿಷ್ಠಿತವು.

(೨) ಈ ರಾಜನ ಸಾಮವು ದೇವತೆಗಳಲ್ಲಿ ಪ್ರತಿಷ್ಠಿತವಿರುವುದನ್ನು ಯಾವನು ಅರಿತಿರುವನೋ ಅವನು ಈ ದೇವತೆಗಳನ್ನು ಪಡೆಯುವನು. ಅವರಷ್ಟೆ ಸಮೃದ್ಧನಾಗುವನು, ಅವರೊಡನೆ ಸಾಯುಜ್ಯವನ್ನು ಹೊಂದುವನು, ಪೂರ್ಣಾಯುಷಿಯಾಗಿ ಉಜ್ವಲ ಜೀವನವುಳ್ಳವನಾಗುವನು. ಪಶು, ಪ್ರಜೆ-ಗಳು, ಕೀರ್ತಿ ಇವುಗಳಿಂದ ಯುಕ್ತನಾಗಿ ಶ್ರೇಷ್ಠನಾಗುವನು. ಬ್ರಾಹ್ಮಣರನ್ನು ನಿಂದಿಸಕೂಡದು ಎಂಬುದೆ ವ್ರತವು.

೨೦ ನೆಯ ಖಂಡವು ಸಮಾಪ್ತವು

ತ್ರಯೀವಿದ್ಯಾ ಹಿಂಕಾರಸ್ತ್ರಯ ಇಮೇ ಲೋಕಾಃ ಸ ಪ್ರಸ್ತಾವೋಽಗ್ನಿ-
ರ್ವಾಯುರಾದಿತ್ಯಃ ಸ ಉದ್ಗೀಥೋ ನಕ್ಷತ್ರಾಣಿ ವಯಾಂಸಿ ಮರೀ-
ಚಯಃ ಸ ಪ್ರತಿಹಾರಃ ಸರ್ಪಾ ಗಂಧರ್ವಾಃ ಪಿತರಸ್ತನ್ನಿಧನಮೇತ-
ತ್ಸಾಮ ಸರ್ವಸ್ಮಿನ್ಪ್ರೋತಂ ॥ ೧ ॥
ಸ ಯ ಏವಮೇತತ್ಸಾಮ ಸರ್ವಸ್ಮಿನ್ಪ್ರೋತಂ ವೇದ ಸರ್ವಂ ಹ ಭವತಿ ॥ ೨ ॥
ತದೇಷ ಶ್ಲೋಕಃ ॥ ಯಾನಿ ಪಂಚಧಾ ತ್ರೀಣಿ ತ್ರೀಣಿ ತೇಭ್ಯೋ ನ
ಜ್ಯಾಯಃ ಪರಮನ್ಯದಸ್ತಿ ॥ ೩ ॥
ಯಸ್ತದ್ವೇದ ಸ ವೇದ ಸರ್ವಂ ಸರ್ವಾ ದಿಶೋ ಬಲಿಮಸ್ಮೈ ಹರಂತಿ
ಸರ್ವಮಸ್ಮೀತ್ಯುಪಾಸೀತ ತದ್ವ್ರತಂ ತದ್ವ್ರತಂ ॥ ೪ ॥

॥ ಇತಿ ಏಕವಿಂಶಃ ಖಂಡಃ ॥

(೧) ತ್ರಯೀವಿದ್ಯೆಯು ಹಿಂಕಾರವು, ಈ ಲೋಕಗಳು ಪ್ರಸ್ತಾವವು, ಅಗ್ನಿ ವಾಯು ಆದಿತ್ಯ ದೇವತೆಗಳು ಉದ್ಗೀಥವು, ನಕ್ಷತ್ರ ಪಕ್ಷಿ ಕಿರಣಗಳು ಪ್ರತಿಹಾರವು, ಸರ್ಪ ಗಂಧರ್ವ ಪಿತರರು ನಿಧನವು. ಈ ಸಾಮವು ಎಲ್ಲೆಲ್ಲಿಯೂ ಪ್ರತಿಷ್ಠಿತವು.

(೨) ಈ ಸಾಮವು ಎಲ್ಲೆಲ್ಲಿಯೂ ಪ್ರತಿಷ್ಠಿತವಿರುವದನ್ನು ಯಾವನು ಬಲ್ಲನೋ ಅವನು ಎಲ್ಲವೂ ಆಗುವನು.

(೩) ಆ ವಿಷಯವನ್ನು ಕುರಿತು ಈ ಶ್ಲೋಕವು ಇರುವದು. ಈಗ ಐದು ವಿಧವಾಗಿ ಹೇಳಿದ ತ್ರಿಕಗಳಿಂದ (ಮೂರರ ಗುಂಪು) ಹೆಚ್ಚಿನದು ಅಥವಾ ಬೇರೆ ಏನೂ ಇಲ್ಲ. (ಇವುಗಳಲ್ಲಿ ಎಲ್ಲವೂ ಒಳಗೊಂಡಿರುವದು).

(೪) ಇದನ್ನರಿತವನು ಎಲ್ಲವನ್ನೂ ಅರಿಯುವನು. ಎಲ್ಲ ದಿಕ್ಕಿನ ಜನರು ಅವನಿಗೆ ಬಲಿಯನ್ನು ಅರ್ಪಿಸುವರು. ನಾನು ಎಲ್ಲವೂ ಇರುವೆನು, ಎಂದು ಉಪಾಸನೆ ಮಾಡಬೇಕು. ಇದೇ ವ್ರತವು, ಇದೇ ವ್ರತವು.

೨೧ ನೆಯ ಖಂಡವು ಸಮಾಪ್ತವು

ವಿನರ್ದಿಸಾಮ್ನೋ ವೃಣೇ ಪಶವ್ಯಮಿತ್ಯಗ್ನೇರುದ್ಗೀಥೋಽನಿರುಕ್ತಃ
ಪ್ರಜಾಪತೇರ್ನಿರುಕ್ತಃ ಸೋಮಸ್ಯ ಮೃದು ಶ್ಲಕ್ಷ್ಣಂ ವಾಯೋಃ

(೧) ಪಶುಗಳಿಗೆ ಹಿತಕರವಾದ ಅಗ್ನಿಯ ಉದ್ಗೀಥವಾದ ವಿನರ್ದಿ (ಒಳ್ಳೇ ಧ್ವನಿಯುಳ್ಳ) ಸಾಮವನ್ನು ಕುರಿತು ನಾನು ಪ್ರಾರ್ಥಿಸುವೆನು.

ಶ್ಲಕ್ಷ್ಣಂ ಬಲವದಿಂದ್ರಸ್ಯ ಕ್ರೌಂಚಂ ಬೃಹಸ್ಪತೇರಪಧ್ವಾಂತಂ ವರುಣಸ್ಯ ತಾನ್ಸರ್ವಾನೇವೋಪಸೇವೇತ ವಾರುಣಂ ತ್ವೇವ ವರ್ಜಯೇತ್ ॥ ೧ ॥

ಅಮೃತತ್ವಂ ದೇವೇಭ್ಯ ಆಗಾಯಾನೀತ್ಯಾಗಾಯೇತ್ಸ್ವಧಾಂ ಪಿತೃಭ್ಯ ಆಶಾಂ ಮನುಷ್ಯೇಭ್ಯಸ್ತೃಣೋದಕಂ ಪಶುಭ್ಯಃ ಸ್ವರ್ಗಂ ಲೋಕಂ ಯಜಮಾನಾಯಾನ್ನಮಾತ್ಮನ ಆಗಾಯಾನೀತ್ಯೇತಾನಿ ಮನಸಾ ಧ್ಯಾಯನ್ನಪ್ರಮತ್ತಃ ಸ್ತುವೀತ ॥ ೨ ॥

ಸರ್ವೇ ಸ್ವರಾ ಇಂದ್ರಸ್ಯಾತ್ಮಾನಃ ಸರ್ವ ಊಷ್ಮಾಣಃ ಪ್ರಜಾಪತೇ-ರಾತ್ಮಾನಃ ಸರ್ವೇ ಸ್ಪರ್ಶಾ ಮೃತ್ಯೋರಾತ್ಮಾನಸ್ತಂ ಯದಿ ಸ್ವರೇಷೂ-ಪಾಲಭೇತೇಂದ್ರಂ ಶರಣಂ ಪ್ರಪನ್ನೋ ಅಭೂವಂ ಸ ತ್ವಾ ಪ್ರತಿವಕ್ಷ್ಯ-ತೀತ್ಯೇನಂ ಬ್ರೂಯಾತ್ ॥ ೩ ॥

ಪ್ರಜಾಪತಿಯ ಉದ್ಗೀಥವು ಅಸ್ಪಷ್ಟವಿರುವದು, ಸೋಮನದು ಸ್ಪಷ್ಟವು, ವಾಯುವಿನದು ಮೃದು ಮತ್ತು ಸೌಮ್ಯವು, ಇಂದ್ರನದು ಸೌಮ್ಯ ಮತ್ತು ಬಲವುಳ್ಳದ್ದು, ಬೃಹಸ್ಪತಿಯದು ಕ್ರೌಂಚಪಕ್ಷಿಯ ಸ್ವರದಂತೆ, ಮತ್ತು ವರುಣನದು ಅಪಸ್ವರವುಳ್ಳದ್ದು. ವರುಣನ ಉದ್ಗೀಥವನ್ನುಳಿದು ಮಿಕ್ಕ ಎಲ್ಲವುಗಳನ್ನು ಉಪಾಸಿಸಬೇಕು.

( ೨ ) ದೇವತೆಗಳಿಗೆ ಅಮೃತತ್ವವು ಪ್ರಾಪ್ತವಾಗುವದಕ್ಕಾಗಿ ನಾನು ಹಾಡುವೆನೆಂದು ( ಸಾಮ ) ಗಾನ ಮಾಡಬೇಕು. ಪಿತರರಿಗೆ ಪಿಂಡ, ಮನುಷ್ಯರಿಗೆ ಅವರ ಇಷ್ಟವಾದ ವಸ್ತು, ದನಗಳಿಗೆ ಹುಲ್ಲು ನೀರು, ಯಜ-ಮಾನನಿಗೆ ಸ್ವರ್ಗ, ನನಗೆ ಅನ್ನ, ಇವು ದೊರೆಯಬೇಕೆಂದು ಧ್ಯಾನಿಸುತ್ತ ಸಾವಧಾನದಿಂದ ಸ್ತವನ ಮಾಡಬೇಕು.

( ೩ ) ( ಅಕಾರಾದಿ ) ಎಲ್ಲ ಸ್ವರಗಳು ಇಂದ್ರನ ಆತ್ಮಗಳು, ( ಶಷಸ-ಹಾದಿ ) ಎಲ್ಲ ಊಷ್ಮವರ್ಣಗಳು ಪ್ರಜಾಪತಿಯ ಆತ್ಮಗಳು. ( ಕಕಾರಾದಿ ) ಎಲ್ಲ ಸ್ಪರ್ಶವರ್ಣಗಳು ( ವ್ಯಂಜನಗಳು ) ಮೃತ್ಯುವಿನ ಆತ್ಮಗಳು. ಸ್ವರೋ-ಚ್ಚಾರದ ಬಗ್ಗೆ ಯಾರಾದರೂ ಸಾಮಗಾಯಕನ ತಪ್ಪು ತೆಗೆದರೆ ನಾನು ಇಂದ್ರನಿಗೆ ಶರಣುಹೋಗಿರುವೆನು, ಅವನು ನಿನಗೆ ಉತ್ತರ ಕೊಡುವನು, ಎಂದು ಹೇಳಬೇಕು.

ಅಥ ಯದ್ಯೇನಮೂಷ್ಮಸೂಪಾಲಭೇತ ಪ್ರಜಾಪತಿಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಪೇಕ್ಷ್ಯತೀತ್ಯೇನಂ ಬ್ರೂಯಾದಥ ಯದ್ಯೇನꣳ ಸ್ಪರ್ಶೇಷೂಪಾಲಭೇತ ಮೃತ್ಯುꣳ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಧಕ್ಷ್ಯತೀತ್ಯೇನಂ ಬ್ರೂಯಾತ್ ॥ ೪ ॥

ಸರ್ವೇ ಸ್ವರಾ ಘೋಷವಂತೋ ಬಲವಂತೋ ವಕ್ತವ್ಯಾ ಇಂದ್ರೇ ಬಲಂ ದದಾನೀತಿ ಸರ್ವ ಊಷ್ಮಾಣೋಽಗ್ರಸ್ತಾ ಅನಿರಸ್ತಾ ವಿವೃತಾ ವಕ್ತವ್ಯಾಃ ಪ್ರಜಾಪತೇರಾತ್ಮಾನಂ ಪರಿದದಾನೀತಿ ಸರ್ವೇ ಸ್ಪರ್ಶಾ ಲೇಶೇನಾನಭಿನಿಹಿತಾ ವಕ್ತವ್ಯಾ ಮೃತ್ಯೋರಾತ್ಮಾನಂ ಪರಿಹರಾಣೀತಿ ॥ ೫ ॥

॥ ಇತಿ ದ್ವಾವಿಂಶಃ ಖಂಡಃ ॥

(೪) ಊಷ್ಮವರ್ಣಗಳ ಉಚ್ಚಾರವನ್ನು ಕುರಿತು ತಪ್ಪು ತೆಗೆದರೆ, ನಾನು ಪ್ರಜಾಪತಿಗೆ ಶರಣುಹೋಗಿರುವೆನು, ಅವನು ನಿನ್ನನ್ನು ಚೂರು ಚೂರು ಮಾಡುವನು, ಎಂದು ಹೇಳಬೇಕು. ಸ್ಪರ್ಶವರ್ಣಗಳನ್ನು ಉಚ್ಚರಿಸುವಾಗ ತಪ್ಪು ತೆಗೆದರೆ ಮೃತ್ಯುವಿಗೆ ನಾನು ಶರಣಾಗತನಾಗಿರುವೆನು, ಅವನು ನಿನ್ನನ್ನು ಸುಟ್ಟುಬಿಡುವನು, ಎಂದು ಹೇಳಬೇಕು.

(೫) ನಾನು ಇಂದ್ರನಿಗೆ ಬಲವನ್ನು ಕೊಡುವೆನು, ಎನ್ನುತ್ತ ಎಲ್ಲ ಸ್ವರಗಳನ್ನು ಒತ್ತಿ ಮತ್ತು ಗಟ್ಟಿಯಾಗಿ ಅನ್ನಬೇಕು, ಪ್ರಜಾಪತಿಗೆ ನಾನು ಆತ್ಮವನ್ನು ಅರ್ಪಿಸುವೆನು, ಎನ್ನುತ್ತ ಎಲ್ಲ ಊಷ್ಮವರ್ಣಗಳನ್ನು ಸ್ಪಷ್ಟ, ಸಾವಕಾಶ ಮತ್ತು ಪ್ರಯತ್ನಪೂರ್ವಕವಾಗಿ ಉಚ್ಚರಿಸಬೇಕು. ಮೃತ್ಯುವಿಗೆ ನಾನು ಪ್ರಾಣವನ್ನು ಅರ್ಪಿಸುವೆನು, ಎನ್ನುತ್ತ ಎಲ್ಲ ಸ್ಪರ್ಶವರ್ಣಗಳನ್ನು ಪೂರಾ ಬಿಡಿಬಿಡಿಯಾಗಿ ಉಚ್ಚರಿಸಬೇಕು.

೨೨ ನೆಯ ಖಂಡವು ಸಮಾಪ್ತವು

ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯೋಽತ್ಯಂತ-

(೧) ಧರ್ಮದಲ್ಲಿ ಮೂರು ವಿಭಾಗಗಳು. ಯಜ್ಞ, ಅಧ್ಯಯನ, ದಾನ ಇವು ಮೂರು ಕೂಡಿ ಒಂದು; ತಪಸ್ಸೆಂಬುದು ಎರಡನೆಯದು; ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತ ಆಚಾರ್ಯ ಕುಲದಲ್ಲಿ (ಗುರುಕುಲ) ಸೇವೆ

ಮಾತ್ಮಾನಮಾಚಾರ್ಯಕುಲೇಽವಸಾದಯನ್ಸರ್ವ ಏತೇ ಪುಣ್ಯಲೋಕಾ
ಭವಂತಿ ಬ್ರಹ್ಮಸಂಸ್ಥೋಽಮೃತತ್ವಮೇತಿ ॥ ೧ ॥
ಪ್ರಜಾಪತಿರ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೀ ವಿದ್ಯಾ ಸಂ-
ಪ್ರಾಸ್ರವತ್ತಾಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂ-
ಪ್ರಾಸ್ರವಂತ ಭೂರ್ಭುವಃ ಸ್ವರಿತಿ ॥ ೨ ॥
ತಾನ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯ ಓಂಕಾರಃ ಸಂಪ್ರಾಸ್ರವತ್ತದ್ಯಥಾ
ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇವಮೋಂಕಾರೇಣ
ಸರ್ವಾ ವಾಕ್ ಸಂತೃಣ್ಣೋಂಕಾರ ಏವೇದꣳ ಸರ್ವಮೋಂಕಾರ
ಏವೇದꣳ ಸರ್ವಂ ॥ ೩ ॥

॥ ಇತಿ ತ್ರಯೋವಿಂಶಃ ಖಂಡಃ ॥

ಮಾಡುತಿರುವದು ಮೂರನೆಯದು. ಇವುಗಳನ್ನನುಸರಿಸುವವರೆಲ್ಲರೂ ಪುಣ್ಯ ಲೋಕವನ್ನು ಪಡೆಯುವರು. ಬ್ರಹ್ಮನಲ್ಲಿ ಸ್ಥಿತವಿರುವವನು ಅಮೃತತ್ವವನ್ನು ಪಡೆಯುವನು.

(೨) ಪ್ರಜಾಪತಿಯು ಲೋಕಗಳನ್ನು ಕುರಿತು ತಪಸ್ಸು (ಧ್ಯಾನ) ಮಾಡಿದನು. ಆದುದರಿಂದ ಋಕ್, ಯಜುಸ್, ಸಾಮುಗಳು ಹುಟ್ಟಿದವು. ಅವುಗಳನ್ನು ಕುರಿತು ಪುನಃ ತಪಸ್ಸು ಮಾಡಲಾಗಿ ಭೂಃ ಭುವಃ ಸ್ವಃ, ಎಂಬ ಅಕ್ಷರಗಳು ಉತ್ಪನ್ನವಾದವು.

(೩) ಅವುಗಳನ್ನು ಕುರಿತು ಪುನಃ ತಪಸ್ಸು ಮಾಡಲು ಓಂಕಾರವು ಹುಟ್ಟಿತು. ಎಲೆಗಳೆಲ್ಲ ಯಾವ ಪ್ರಕಾರವಾಗಿ ಒಂದು ದೇಟಿಗೆ ಅಂಟಿ-ಕೊಂಡಿರುವವೊ ಆದೇ ಪ್ರಕಾರ ವಾಣಿಯು ಓಂಕಾರವನ್ನು ಅವಲಂಬಿಸಿರುವದು. ಇದೆಲ್ಲವೂ ಓಂಕಾರವೆ, ಇದೆಲ್ಲ ಓಂಕಾರವೆ.

೨೩ ನೆಯ ಖಂಡವು ಸಮಾಪ್ತವು

ಬ್ರಹ್ಮವಾದಿನೋ ವದಂತಿ ಯದ್ವಸೂನಾಂ ಪ್ರಾತಃಸವನꣳ ರುದ್ರಾಣಾಂ
ಮಾಧ್ಯಂದಿನꣳ ಸವನಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ
ತೃತೀಯಸವನಂ ॥ ೧ ॥

(೧) ವಸುದೇವತೆಗಳು ಪ್ರಾತಃ ಸವನದ (ಪ್ರಾತರ್ಯಜ್ಞದ ಫಲವಾದ ಈ ಲೋಕದ) ಒಡೆಯರು, ರುದ್ರದೇವತೆಗಳು ಮಾಧ್ಯಂದಿನ ಸವನದ (ಮಧ್ಯಾನ್ಹ ಯಜ್ಞದ ಫಲವಾದ ಅಂತರಿಕ್ಷದ) ಒಡೆಯರು, ಮತ್ತು

ಕ್ವ ತರ್ಹಿ ಯಜಮಾನಸ್ಯ ಲೋಕ ಇತಿ ಸ ಯಸ್ತಂ ನ ವಿದ್ಯಾತ್ಕಥಂ
ಕುರ್ಯಾದಥ ವಿದ್ವಾನ್ಕುರ್ಯಾತ್ ॥ ೨ ॥
ಪುರಾ ಪ್ರಾತರನುವಾಕಸ್ಯೋಪಾಕರಣಾಜ್ಜಘನೇನ ಗಾರ್ಹಪತ್ಯಸ್ಯೋ-
ದಙ್ಮುಖ ಉಪವಿಶ್ಯ ಸ ವಾಸವꣳ ಸಾಮಾಭಿಗಾಯತಿ ॥ ೩ ॥
ಲೋ ೩ ಕದ್ವಾರಮಪಾವಾ ೩ ರ್ಣೂ ೩೩ ಪಶ್ಯೇಮ ತ್ವಾ ವಯꣳ
ರಾ ೩೩೩೩೩ ಹುಂ ೩ ಆ ೩೩ ಜ್ಯಾ ೩ ಯೋ ೩ ಆ ೩೨೧೧೧ ಇತಿ ॥ ೪ ॥
ಅಥ ಜುಹೋತಿ ನಮೋಽಗ್ನಯೇ ಪೃಥಿವೀಕ್ಷಿತೇ ಲೋಕಕ್ಷಿತೇ ಲೋಕಂ
ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ॥ ೫ ॥
ಅಥ ಯಜಮಾನಃ ಪರಸ್ತಾದಾಯುಷಃ ಸ್ವಾಹಾಽಪಜಹಿ ಪರಿಘ-
ಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ವಸವಃ ಪ್ರಾತಃಸವನꣳ ಸಂಪ್ರಯಚ್ಛಂತಿ ॥ ೬ ॥

ವಿಶ್ವದೇವತೆಗಳು ತೃತೀಯ ಸವನದ (ಸಾಯಂ ಯಜ್ಞದ ಫಲವಾದ ದ್ಯುಲೋಕದ) ಒಡೆಯರು, ಎಂದು ಬ್ರಹ್ಮವಾದಿಗಳು ಹೇಳುವರು.

(೨) ಹಾಗಾದರೆ ಯಜಮಾನನು ಯಾವ ಲೋಕದ ಒಡೆಯನು? ಇದನ್ನರಿಯದೇ ಇರುವವನು ಯಜ್ಞವನ್ನು ಹೇಗೆ ಮಾಡಬಲ್ಲನು? ಆದುದರಿಂದ ಅರಿತವನೆ ಯಜ್ಞ ಮಾಡಬೇಕು.

(೩) ಗೊತ್ತಿದ್ದವನು ಬೆಳಿಗ್ಗೆ ಅನ್ನುವ ಮಂತ್ರದ ಪೂರ್ವದಲ್ಲಿ ಗಾರ್ಹ-ಪತ್ಯ ಅಗ್ನಿಯ ಹಿಂದೆ ಉತ್ತರಕ್ಕೆ ಮುಖಮಾಡಿ ಕುಳಿತು ವಸುದೇವತೆಗಳನ್ನು ಕುರಿತು ಇರುವ ಸಾಮವನ್ನು ಹಾಡುವನು.

(೪) 'ಹೇ ಅಗ್ನೇ, ಪೃಥಿವಿಯ ಭೋಗಗಳು ನಮಗೆ ದೊರೆಯಬೇಕೆಂದು ಈ ಲೋಕದ ಬಾಗಿಲುಗಳನ್ನು ತೆರೆಯುವಂಥವನಾಗು. ನಾವು ನಿನ್ನನ್ನು ನೋಡುತಿರುವೆವು' (ಎಂದು ಯಜಮಾನನು ಅನ್ನುವನು.)

(೫) ಬಳಿಕ, 'ಹೇ ಅಗ್ನಿಯೇ, ಪೃಥಿವಿಯಲ್ಲಿರುವವನೇ, ಲೋಕವಾಸಿಯೇ, ಯಜಮಾನನಾದ ನನಗೆ ಲೋಕವನ್ನು ದೊರಕಿಸಿಕೊಡು. ಇದು ಯಜಮಾನನ ಲೋಕವು: ನಾನು ಇದನ್ನು ದೊರಕಿಸಲಿಚ್ಛಿಸುವೆನು' ಎಂದು ಪ್ರಾರ್ಥಿಸಿ ಆಹುತಿ ಕೊಡುವನು.

(೬) 'ಈ ಲೋಕದಲ್ಲಿ ನಾನು ಯಜಮಾನನು, ಆಯುಷ್ಯದ ಕೊನೆಗೆ ಸ್ವಾಹಾ ಎಂದು ಆಹುತಿ ಕೊಡುವೆನು. ಅಗಳಿಯನ್ನು (ಲೋಕದ ಬಾಗಿಲಿನ) ತೆಗೆ' ಎಂದು ಏಳುವನು. ಅವನಿಗೆ ವಸುದೇವತೆಗಳು ಪ್ರಾತಃಸವನದ ಫಲವನ್ನು (ಈ ಲೋಕವನ್ನು) ಕೊಡುವರು.

ಪುರಾ ಮಾಧ್ಯಂದಿನಸ್ಯ ಸವನಸ್ಯೋಪಾಕರಣಾಜ್ಜಘನೇನಾಗ್ನೀಧ್ರೀ-
ಯಸ್ಯೋದಙ್ಮುಖ ಉಪವಿಶ್ಯ ಸ ರೌದ್ರಂ ಸಾಮಾಭಿಗಾಯತಿ ॥ ೭ ॥

ಲೋ ೩ ಕದ್ವಾರಮಪಾವಾ ೩ ರ್ಣೂ ೩೩ ಪಶ್ಯೇಮ ತ್ವಾ ವಯಂ
ವೈರಾ ೩೩೩೩೩ ಹುಂ ೩ ಆ ೩೩ ಜ್ಯಾ ೩ ಯೋ ೩ ಆ ೩೨೧೧೧ ಇತಿ ॥ ೮ ॥

ಅಥ ಜುಹೋತಿ ನಮೋ ವಾಯವೇಽಂತರಿಕ್ಷಕ್ಷಿತೇ ಲೋಕಕ್ಷಿತೇ
ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ
ಲೋಕ ಏತಾಸ್ಮಿ ॥ ೯ ॥

ಅತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಽಪಜಹಿ ಪರಿಘಮಿ-
ತ್ಯುಕ್ತ್ವೋತ್ತಿಷ್ಠತಿ ತಸ್ಮೈ ರುದ್ರಾ ಮಾಧ್ಯಂದಿನಂ ಸವನಂ
ಸಂಪ್ರಯಚ್ಛಂತಿ ॥ ೧೦ ॥

ಪುರಾ ತೃತೀಯಸವನಸ್ಯೋಪಾಕರಣಾಜ್ಜಘನೇನಾಹವನೀಯಸ್ಯೋ-
ದಙ್ಮುಖ ಉಪವಿಶ್ಯ ಸ ಆದಿತ್ಯಂ ಸ ವೈಶ್ವದೇವಂ ಸಾಮಾಭಿಗಾಯತಿ ॥ ೧೧ ॥

(೭) ಮಾಧ್ಯಂದಿನ ಸವನದ ಮೊದಲು ಯಜಮಾನನು ದಕ್ಷಿಣಾಗ್ನಿಯ ಹಿಂದೆ ಉತ್ತರಕ್ಕೆ ಮುಖಮಾಡಿ ಕುಳಿತು ರುದ್ರದೇವತೆಗಳನ್ನು ಕುರಿತು ಸಾಮಗಾನವನ್ನು ಮಾಡುವನು.

(೮) 'ಹೇ ವಾಯುವೇ, ನಮಗೆ ವೈರಾಜ್ಯವು ಪ್ರಾಪ್ತವಾಗುವುದಕ್ಕಾಗಿ ಅಂತರಿಕ್ಷ ಲೋಕದ ದ್ವಾರವನ್ನು ತೆರೆ. ನಾವು ನಿನ್ನನ್ನು ಸಂದರ್ಶಿಸುವೆವು.

(೯) 'ಹೇ ವಾಯೋ, ಅಂತರಿಕ್ಷದಲ್ಲಿರುವವನೇ, ಲೋಕನಿವಾಸಿಯೇ, ಯಜಮಾನನಾದ ನನಗೆ ಅಂತರಿಕ್ಷ ಲೋಕವನ್ನು ದೊರಕಿಸಿ ಕೊಡು. ಅದು ಯಜಮಾನನ ಲೋಕವು. ಅಲ್ಲಿ ನಾನು ಹೋಗಲಿಚ್ಛಿಸುವೆನು.

(೧೦) 'ಈ ಲೋಕದಲ್ಲಿ ನಾನು ಯಜಮಾನನು, ಆಯುಷ್ಯದ ಕೊನೆಗೆ ಸ್ವಾಹಾ ಎಂದು ಆಹುತಿ ಕೊಡುವೆನು, ಅಗಳಿಯನ್ನು ತೆಗೆ' ಎಂದು ಏಳುವನು. ಆವನಿಗೆ ರುದ್ರದೇವತೆಗಳು ಮಾಧ್ಯಂದಿನ ಸವನದ ಫಲವನ್ನು ದಯಪಾಲಿಸುವರು.

(೧೧) ಸಾಯಂ ಸವನ ಪ್ರಾರಂಭ ಮಾಡುವದಕ್ಕೂ ಮೊದಲು ಯಜಮಾನನು ಆಹವನೀಯ ಅಗ್ನಿಯ ಹಿಂದೆ ಉತ್ತರಾಭಿಮುಖನಾಗಿ ಕುಳಿತು ಆದಿತ್ಯ ಮತ್ತು ವೈಶ್ವದೇವತೆಗಳನ್ನು ಕುರಿತು ಸಾಮಗಾಯನ ಮಾಡುವನು.

ಲೋ೩ ಕದ್ವಾರಮಪಾವಾ೩ ರ್ಣ೩೩ ಪಶ್ಯೇಮ ತ್ವಾ ವಯಙ್ ಸ್ವಾ-
ರಾ ೩೩೩೩೩ ಹುಂ೩ ಆ೩೩ ಜ್ಯಾ೩ ಯೋ೩ ಆ೩೨೧೧೧ ಇತಿ ‖ ೧೨ ‖

ಆದಿತ್ಯಮಥ ವೈಶ್ವದೇವಂ ಲೋ೩ ಕದ್ವಾರಮಪಾವಾ೩ ರ್ಣ೩೩
ಪಶ್ಯೇಮ ತ್ವಾ ವಯಙ್ ಸಾಮ್ರಾ ೩೩೩೩೩ ಹುಂ೩ ಆ೩೩ ಜ್ಯಾ೩
ಯೋ೩ ಆ೩೨೧೧೧ ಇತಿ ‖ ೧೩ ‖

ಅಥ ಜುಹೋತಿ ನಮ ಆದಿತ್ಯೇಭ್ಯಶ್ಚ ವಿಶ್ವೇಭ್ಯಶ್ಚ ದೇವೇಭ್ಯೋ
ದಿವಿಕ್ಷಿದ್ಭ್ಯೋ ಲೋಕಕ್ಷಿದ್ಭ್ಯೋ ಲೋಕಂ ಮೇ ಯಜಮಾನಾಯ
ವಿಂದತ ‖ ೧೪ ‖

ಏಷ ವೈ ಯಜಮಾನಸ್ಯ ಲೋಕ ಏತಾಸ್ಮ್ಯತ್ರ ಯಜಮಾನಃ ಪರಸ್ತಾ-
ದಾಯುಷಃ ಸ್ವಾಹಾಽಪಹತಪರಿಘಮಿತ್ಯುಕ್ತ್ವೋತ್ತಿಷ್ಠತಿ ‖ ೧೫ ‖

ತಸ್ಮಾ ಆದಿತ್ಯಾಶ್ಚ ವಿಶ್ವೇ ಚ ದೇವಾಸ್ತೃತೀಯಂ ಸವನಙ್ ಸಂಪ್ರ-

(೧೨) ಹೇಗಂದರೆ, 'ಹೇ, ಆದಿತ್ಯನೆ, ನಮಗೆ ಸ್ವಾರಾಜ್ಯವು ದೊರಕುವದಕ್ಕಾಗಿ (ದ್ಯು) ಲೋಕದ ದ್ವಾರವನ್ನು ತೆರೆಯುವಂಥವನಾಗು. ನಾವು ನಿನ್ನನ್ನು ಸಂದರ್ಶಿಸುವೆವು.'

(೧೩) 'ಆದಿತ್ಯ ಮತ್ತು ವೈಶ್ವದೇವತೆಗಳ ಲೋಕಗಳ ಬಾಗಿಲುಗಳನ್ನು ತೆರೆ. ನಾವು ಸಾಮ್ರಾಜ್ಯಪ್ರಾಪ್ತಿಗಾಗಿ ನಿನ್ನ ಮುಖವನ್ನು ನೋಡುವೆವು.'

(೧೪) ಬಳಿಕ 'ಆದಿತ್ಯರಿಗೆ, ವಿಶ್ವದೇವತೆಗಳಿಗೆ, ದ್ಯುಲೋಕದಲ್ಲಿರುವ ಮತ್ತು ಈ ಲೋಕದಲ್ಲಿರುವ ದೇವತೆಗಳಿಗೆ ನನ್ನ ನಮಸ್ಕಾರವು. ಯಜಮಾನನಾದ ನನಗಾಗಿ ದ್ಯುಲೋಕವನ್ನು ಪ್ರಾಪ್ತಮಾಡಿ ಕೊಡಿರಿ' ಎಂದು ಆಹುತಿಯನ್ನು ಕೊಡುವನು.

(೧೫) 'ಅದು ಯಜಮಾನನ ಲೋಕವು. ಅದನ್ನು ನಾನು ದೊರಕಿಸಲಿಚ್ಛಿಸುವೆನು. ಮರಣದ ನಂತರದಲ್ಲಿ ಅಲ್ಲಿ ಹೋಗಲಿಚ್ಛಿಸುವೆನು, ಅಗಳಿಯನ್ನು ತೆಗೆ' ಎಂದು ಆಹುತಿಕೊಟ್ಟು ಏಳುವನು.

(೧೬) ಅವನಿಗೆ ತೃತೀಯಸವನದ ಫಲವಾದ ದ್ಯುಲೋಕವನ್ನು ಆದಿತ್ಯರೂ ವಿಶ್ವದೇವತೆಗಳೂ ಕೊಡುವರು. ಯಾವನು ಈ ರೀತಿ ಯಜ್ಞ

ಯಚ್ಛಂತ್ಯೇಷ ಹ ವೈ ಯಜ್ಞಸ್ಯ ಮಾತ್ರಾಂ ವೇದ ಯ ಏವಂ
ವೇದ ಯ ಏವಂ ವೇದ ॥ ೧೬ ॥

॥ ಇತಿ ಚತುರ್ವಿಂಶಃ ಖಂಡಃ ॥

ಇತಿ ದ್ವಿತೀಯಃ ಪ್ರಪಾಠಕಃ

ವಿಷಯಕ ಜ್ಞಾನವನ್ನರಿತಿರುವನೊ ಅವನು ಎಲ್ಲವನ್ನು ಅರಿತಿರುವನು, ಅರಿತಿರುವನು.

೨೪ ನೆಯ ಖಂಡವು ಸಮಾಪ್ತವು

ಎರಡನೆ ಅಧ್ಯಾಯವು ಸಮಾಪ್ತವು

# ೩ ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದ ಮೊದಲಿನ ೧೧ ಖಂಡಗಳಲ್ಲಿ "ಮಧುವಿದ್ಯೆ" ಎಂಬುದು ಹೇಳಲ್ಪಟ್ಟಿರುವದು. ಆದಿತ್ಯನೆ ದೇವತೆಗಳ ಮಧುವು; ದೇವತೆಗಳೆಲ್ಲ ಆದಿತ್ಯನಿಂದಲೇ ಜೀವಿಸುವರು ಎಂದು ಉಪನಿಷತ್ಕಾರರು ಹೇಳುವರು. ಇದಲ್ಲದೆ ಋಕ್ಕು, ಯಜುಸ್ಸು, ಸಾಮ, ಅಥರ್ವಾಂಗಿರಸ ಮುಂತಾದ ಮಂತ್ರಗಳು ಆಯಾ ವಿಹಿತ ಕರ್ಮಗಳ ಕಾಲಕ್ಕೆ ಉಪಯೋಗಿಸಲ್ಪಟ್ಟಿದ್ದರಿಂದ ಯಶಸ್ಸು, ತೇಜ, ವೀರ್ಯ ಮುಂತಾದವುಗಳು ಉತ್ಪನ್ನವಾಗಿ ಅವೆಲ್ಲ ಸೂರ್ಯನ ವಿವಿಧ ದಿಕ್ಕಿನ ಕಿರಣಗಳನ್ನು ಆಶ್ರಯಿಸಿದವು—ಸೂರ್ಯನಲ್ಲಿ ಇವೆಲ್ಲ ಇರುವವು, ಎಂದು ಇದರ ಅರ್ಥವು. ಇದಕ್ಕೂ ಹೆಚ್ಚಿನ ಮಾತೇನೆಂದರೆ ಋಗ್ವೇದಾದಿಗಳಲ್ಲದೆ ಓಂಕಾರಾದಿ ಗೂಢ ಆದೇಶಗಳಿರುವವು. ಅವು ಬ್ರಹ್ಮನಿದರ್ಶಕವೂ ವೇದಗಳ ಸಾರಭೂತವೂ ಇರುವವು. ಅವು ಸಹ ಈ ಆದಿತ್ಯನಲ್ಲಿ ಇರುವವು. ಇಷ್ಟು ಹೇಳಿ ಬಳಿಕ ೬-೧೦ ಈ ಖಂಡಗಳಲ್ಲಿ ಆಯಾ ಮಂತ್ರಗಳ ಮುಖಾಂತರ ಆಯಾ ದೇವತೆಗಳ ಉಪಾಸನೆಯೂ ಅದರ ಫಲವೂ ಹೇಳಲ್ಪಟ್ಟಿರುವದು. ಕೊನೆಗೆ ಪೂರ್ಣ ಆತ್ಮಜ್ಞಾನಿಯು ಈ ಎಲ್ಲ ಉಪಾಸನೆಗಳಾಚೆಗೆ ಹೋಗಿ ಅಖಂಡ ಜ್ಞಾನಜ್ಯೋತಿಯ ಪ್ರಕಾಶದಲ್ಲಿ ನಲಿಯುವನು ಎಂದು ಜ್ಞಾನದ ಮಾಹಾತ್ಮ್ಯವು ಹೇಳಲ್ಪಟ್ಟಿರುವದು.

೧೨-೧೩ ನೆಯ ಖಂಡಗಳಲ್ಲಿ ಹೃದಯ ಮತ್ತು ಹೃದಯದ ಪಂಚದ್ವಾರಗಳು (ಪಂಚಪ್ರಾಣಗಳು), ಅಲ್ಲಿ ಅಧಿಷ್ಠಿತವಿರುವ ದೇವತೆಗಳು ಮುಂತಾದವುಗಳ ವರ್ಣನೆ ಇರುವದು. ಹೃದಯಾಂತರದಲ್ಲಿ ಬೆಳಗುವ ಜ್ಯೋತಿಯೆ ಎಲ್ಲ ಲೋಕಗಳಾಚೆಗೆ ಇರುವ ಉತ್ತಮೋತ್ತಮ ಜ್ಯೋತಿಯು ಎಂದು ಉಪನಿಷತ್ತು ಹೇಳುವದು.

೧೪ ನೆಯ ಖಂಡವು ವಿಶೇಷ ಮಹತ್ವದ್ದಿರುವದು. ಯಾಕೆಂದರೆ ಇದರಲ್ಲಿ ಆತ್ಮಸ್ವರೂಪದ ವರ್ಣನೆಯನ್ನು ಹೇಳಿ ಉಪನಿಷತ್ಕಾರರು ಅದರ ಉಪಾಸನೆಯನ್ನು ಹೇಳಿರುವರು. ಆತ್ಮನ ನಿಃಸಂಶಯ ಜ್ಞಾನವಾದವನು ಅವನನ್ನು ಪಡೆಯುವನು ಎಂದು ಇಲ್ಲಿ ಆಶ್ವಾಸನವಿರುವದು.

೧೫ ನೆಯ ಖಂಡದಲ್ಲಿ ಸರ್ವ ವಸ್ತುಗಳ ಸಂಗ್ರಹಸ್ಥಾನವಾದ ಈ ವಿಶ್ವದ ವರ್ಣನೆ ಮತ್ತು ಉಪಾಸನೆ ಹಾಗೂ ತತ್ಫಲ ಇವು ಹೇಳಲ್ಪಟ್ಟಿವೆ. ಇದಕ್ಕೆ "ಕೋಶ" ಎಂಬ ಹೆಸರು.

೧೬-೧೭ ಈ ಖಂಡಗಳಲ್ಲಿ ಪುರುಷನ ಜೀವನವು ಒಂದು ಯಜ್ಞವು ಮತ್ತು ಪುರುಷನು ಮಾಡುವ ಜೀವನಕಾರ್ಯಗಳು ಹಾಗೂ ಸತ್ಯ ಅಹಿಂಸಾದಿ ಆಚರಣಗಳು ಯಜ್ಞದಲ್ಲಿಯ ವಿವಿಧ ಕಾರ್ಯಗಳು ಎಂದು ಹೇಳಲಾಗಿದೆ. ಇದನ್ನರಿತು ಜಪಾದಿ-ಗಳನ್ನು ಮಾಡುವವನಿಗೆ ಸಿಕ್ಕುವ ಶ್ರೇಷ್ಠಫಲಗಳು ಇಲ್ಲಿ ಹೇಳಲ್ಪಟ್ಟಿವೆ. ಕೊನೆಗೆ

ಅವಿತ್ಯೋಪಾಸಕನು ದಿವ್ಯಜ್ಯೋತಿಯನ್ನು ಪಡೆಯುವನು ಎಂದು ಆಖ್ಯಾನಿಸಿರುವದು. ಈ ವಿದ್ಯೆಯನ್ನು ಘೋರ ಆಂಗಿರಸನು ದೇವಕೀಪುತ್ರ ಕೃಷ್ಣನಿಗೆ ಹೇಳಿದನು, ಎಂದು ಉಲ್ಲೇಖವು ಇದರಲ್ಲಿದೆ.

ತ್ತು ಮನಸ್ಸು ಇವು ಪರಬ್ರಹ್ಮ ಎಂದು ಉಪಾಸನೆಯು ಹೇಳಲ್ಪಟ್ಟಿದೆ. ಕೀರ್ತಿ, ಯಶಸ್ಸು, ಮುಂತಾದವುಗಳು ಈ ಉಪಾಸನೆಯ ಫಲಗಳೆಂದು ಉಲ್ಲೇಖಿಸಿರುವದು.

೧೯ ನೆಯ ಖಂಡವು ಆದಿತ್ಯನೆ ಬ್ರಹ್ಮವು, ಎಂದು ಪ್ರಾರಂಭಿಸುವದು. ಮುಂದೆ 'ಅಸತ್' ಎಂಬುದರಿಂದ ಸೃಷ್ಟಿಯ ಉತ್ಪತ್ತಿಯನ್ನು ಹೇಳಿ ಪುನಃ ಆದಿತ್ಯನು ಹುಟ್ಟುವದನ್ನು ಎಲ್ಲ ಪ್ರಾಣಿಗಳು ನಿರೀಕ್ಷಿಸುವವು ಮತ್ತು ಅವನನ್ನೆ ಅವಲಂಬಿಸುವವು, ಎಂದು ಹೇಳುವರು. ಈ ಜ್ಞಾನವಿದ್ದವನು ಸುಖಿಯಾಗುವನು ಎಂದು ಬೇರೆ ಹೇಳುವ ಅವಶ್ಯಕತೆಯು ಇಲ್ಲ.

## ಅಥ ತೃತೀಯೋಽಧ್ಯಾಯಃ

ಓಂ ಅಸೌ ವಾ ಆದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂ
ಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ ॥ ೧ ॥

ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯ
ಋಚ ಏಷ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ
ಆಪಸ್ತಾ ವಾ ಏತಾ ಋಚಃ ॥ ೨ ॥

(೧) ಆ ಆದಿತ್ಯನೆ ದೇವತೆಗಳ ಜೇನುತುಪ್ಪವು, ದ್ಯುಲೋಕವು (ಜೇನು ಹುಟ್ಟಿಗೆ ಆಧಾರವಾದ) ಅಡ್ಡ ತೊಲೆಯು. ಅಂತರಿಕ್ಷವು ಅದಕ್ಕೆ ಹತ್ತಿದ ಜೇನುಹುಟ್ಟು ಮತ್ತು ಕಿರಣಗಳು ಸೂರ್ಯನ ಮಕ್ಕಳಿದ್ದಂತೆ.

(೨) ಸೂರ್ಯನ ಪೂರ್ವದಿಕ್ಕಿನ ಕಿರಣಗಳು ಪೂರ್ವದ ಮಧುನಾಡಿಗಳು (ಜೇನುತುಪ್ಪವಿರುವ ಛಿದ್ರಗಳು), ಋಕ್ಕುಗಳು ಜೇನು ಹುಳಗಳು, ಋಗ್ವೇದವೇ ಹೂವು, (ಸೋಮಾದಿ) ಅಮೃತಗಳು ಆಪವು. ಅವೇ ಆ ಋಕ್ಕುಗಳು.

ಏತಮೃಗ್ವೇದಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ ॥ ೩ ॥

ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಂ ರೂಪಂ ॥ ೪ ॥

॥ ಇತಿ ಪ್ರಥಮಃ ಖಂಡಃ ॥

(೩) ಋಗ್ವೇದವಿಹಿತ ಕರ್ಮದಲ್ಲಿ ಋಕ್ಮಂತ್ರಗಳು ಉಪಯೋಗಿಸಲ್ಪಟ್ಟವು. (ಅನ್ನಲ್ಪಟ್ಟವು). ಆದರಿಂದ ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನ ಮುಂತಾದ ರಸವು ಉತ್ಪನ್ನವಾಯಿತು.

(೪) ಅದು (ಹೀಗೆ ಉತ್ಪನ್ನವಾದುದೆಲ್ಲ) ಹೋಗಿ ಆದಿತ್ಯನನ್ನು ಆಶ್ರಯಿಸಿತು. ಇದೇ ಆದಿತ್ಯನ ಕೆಂಪು ರೂಪವು.

೧ ನೆಯ ಖಂಡವು ಸಮಾಪ್ತವು

ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯೋ ಯಜೂಂಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ ॥ ೧ ॥

ತಾನಿ ವಾ ಏತಾನಿ ಯಜೂಂಷ್ಯೇತಂ ಯಜುರ್ವೇದಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ ॥ ೨ ॥

(೧) ಆದಿತ್ಯನ ದಕ್ಷಿಣ ಕಿರಣಗಳು ದಕ್ಷಿಣದ ಮಧುನಾಡಿಗಳು, ಯಜುರ್ಮಂತ್ರಗಳೆ ಜೇನು ಹುಳಗಳು, ಯಜುರ್ವೇದವೆ ಹೂವು, (ಸೋಮಾದಿ) ಅಮೃತಗಳು ಆಪವು.

(೨) ಆ ಯಜುರ್ಮಂತ್ರಗಳು ಯಜುರ್ವೇದವಿಹಿತ ಕರ್ಮದಲ್ಲಿ ಉಪಯೋಗಿಸಲ್ಪಟ್ಟವು. ಆದರಿಂದ ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನ ಮುಂತಾದ ರಸವು ಉತ್ಪನ್ನವಾಯಿತು.

ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ
ಶುಕ್ಲꣳ ರೂಪಂ ॥ ೩ ॥

॥ ಇತಿ ದ್ವಿತೀಯಃ ಖಂಡಃ ॥

( ೩ ) ಅದು ( ಹೀಗೆ ಉತ್ಪನ್ನವಾದುದೆಲ್ಲ ) ಹೊರಟು ಹೋಗಿ ಆದಿತ್ಯನನ್ನು ಆಶ್ರಯಿಸಿತು. ಇದೇ ಆದಿತ್ಯನ ಬಿಳೀ ರೂಪವು.

೨ ನೆಯ ಖಂಡವು ಸಮಾಪ್ತವು

ಅಥ ಯೇಽಸ್ಯ ಪ್ರತ್ಯಞ್ಚೋ ರಶ್ಮಯಸ್ತಾ ಏವಾಸ್ಯ ಪ್ರತೀಚ್ಯೋ ಮಧು-
ನಾಡ್ಯಃ ಸಾಮಾನ್ಯೇವ ಮಧುಕೃತಃ ಸಾಮವೇದ ಏವ ಪುಷ್ಪಂ ತಾ
ಅಮೃತಾ ಆಪಃ ॥ ೧ ॥

ತಾನಿ ವಾ ಏತಾನಿ ಸಾಮಾನ್ಯೇತꣳ ಸಾಮವೇದಮಭ್ಯತಪꣳಸ್ತಸ್ಯಾಭಿ-
ತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯꣳ ರಸೋಽ-
ಜಾಯತ ॥ ೨ ॥

ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ
ಪರಂ ಕೃಷ್ಣꣳ ರೂಪಂ ॥ ೩ ॥

॥ ಇತಿ ತೃತೀಯಃ ಖಂಡಃ ॥

( ೧ ) ಆದಿತ್ಯನ ಪಶ್ಚಿಮದ ಕಿರಣಗಳು ಪಶ್ಚಿಮ ದಿಕ್ಕಿನ ಮಧುನಾಡಿಗಳು, ಸಾಮಮಂತ್ರಗಳು ಜೇನು ಹುಳಗಳು, ಸಾಮವೇದವೇ ಹೂವು, (ಸೋಮಾದಿ) ಅಮೃತಗಳು ಆಪವು.

( ೨ ) ಆ ಸಾಮಮಂತ್ರಗಳು ಸಾಮವೇದವಿಹಿತ ಕರ್ಮದಲ್ಲಿ ಉಪಯೋಗಿಸಲ್ಪಟ್ಟವು. ಆದರಿಂದ ಯಶ, ತೇಜ, ಇಂದ್ರಿಯ, ವೀರ್ಯ, ಅನ್ನ ಮುಂತಾದ ರಸವು ಉತ್ಪನ್ನವಾಯಿತು.

( ೩ ) ಅದು ( ಉತ್ಪನ್ನವಾದುದೆಲ್ಲ ) ಹೊರಟು ಹೋಗಿ ಆದಿತ್ಯನನ್ನು ಆಶ್ರಯಿಸಿತು. ಇದೇ ಆದಿತ್ಯನ ಕೃಷ್ಣರೂಪವು.

೩ ನೆಯ ಖಂಡವು ಸಮಾಪ್ತವು

ಅಥ ಯೇಽಸ್ಯೋದಞ್ಚೋ ರಶ್ಮಯಸ್ತಾ ಏವಾಸ್ಯೋದೀಚ್ಯೋ ಮಧುನಾಡ್ಯೋಽಥರ್ವಾಂಗಿರಸ ಏವ ಮಧುಕೃತ ಇತಿಹಾಸಪುರಾಣಂ ಪುಷ್ಪಂ ತಾ ಅಮೃತಾ ಆಪಃ ॥ ೧ ॥

ತೇ ವಾ ಏತೇಽಥರ್ವಾಂಗಿರಸ ಏತದಿತಿಹಾಸಪುರಾಣಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ ॥ ೨ ॥

ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಪರಂ ಕೃಷ್ಣಂ ರೂಪಂ ॥ ೩ ॥

॥ ಇತಿ ಚತುರ್ಥಃ ಖಂಡಃ ॥

(೧) ಆದಿತ್ಯನ ಉತ್ತರದ ಕಿರಣಗಳೆ ಉತ್ತರ ದಿಕ್ಕಿನ ಮಧುನಾಡಿಗಳು, ಅಥರ್ವಾಂಗಿರಸ ಮಂತ್ರಗಳೆ ಜೇನು ಹುಳಗಳು, ಇತಿಹಾಸ ಪುರಾಣಗಳು ಹೂವು, ( ಸೋಮಾದಿ ) ಅಮೃತಗಳು ಆಪವು.

(೨) ಆ ಅಥರ್ವಾಂಗಿರಸ ಮಂತ್ರಗಳೆ ಇತಿಹಾಸಪುರಾಣೋಕ್ತ ಕರ್ಮಗಳ ಸಂಬಂಧದಿಂದ ಉಪಯೋಗಿಸಲ್ಪಟ್ಟವು. ಆದರಿಂದ ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನ ಮುಂತಾದ ರಸವು ಉತ್ಪನ್ನವಾಯಿತು.

(೩) ಅದು ( ಉತ್ಪನ್ನವಾದುದೆಲ್ಲ ) ಆದಿತ್ಯನನ್ನು ಆಶ್ರಯಿಸಿತು. ಇದೇ ಆದಿತ್ಯನ ಅತಿಶಯ ಕೃಷ್ಣರೂಪವು.

೪ ನೆಯ ಖಂಡವು ಸಮಾಪ್ತವು

ಅಥ ಯೇಽಸ್ಯೋರ್ಧ್ವಾ ರಶ್ಮಯಸ್ತಾ ಏವಾಸ್ಯೋರ್ಧ್ವಾ ಮಧುನಾಡ್ಯೋ ಗುಹ್ಯಾ ಏವಾದೇಶಾ ಮಧುಕೃತೋ ಬ್ರಹ್ಮೈವ ಪುಷ್ಪಂ ತಾ ಅಮೃತಾ ಆಪಃ ॥ ೧ ॥

(೧) ಆದಿತ್ಯನ ಉರ್ಧ್ವ ಕಿರಣಗಳೆ ಮೇಲ್ಭದಿಯ ಮಧುನಾಡಿಗಳು, ಗೂಢ ಆದೇಶಗಳು ( ಉಪನಿಷತ್ತು ) ಜೇನ್ನೊಣಗಳು, ಬ್ರಹ್ಮವೇ ಹೂವು, ( ಸೋಮಾದಿ ) ಅಮೃತಗಳೆ ಆಪವು.

ತೇ ವಾ ಏತೇ ಗುಹ್ಯಾ ಆದೇಶಾ ಏತದ್ಬ್ರಹ್ಮಾಭ್ಯತಪಁಸ್ತಸ್ಯಾಭಿ-
ತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಁ ರಸೋಽ-
ಜಾಯತ ॥ ೨ ॥

ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ
ಮಧ್ಯೇ ಕ್ಷೋಭತ ಇವ ॥ ೩ ॥

ತೇ ವಾ ಏತೇ ರಸಾನಾಁ ರಸಾ ವೇದಾ ಹಿ ರಸಾಸ್ತೇಷಾಮೇತೇ
ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾ ಹ್ಯಮೃ-
ತಾಸ್ತೇಷಾಮೇತಾನ್ಯಮೃತಾನಿ ॥ ೪ ॥

॥ ಇತಿ ಪಂಚಮಃ ಖಂಡಃ ॥

( ೨ ) ಆ ಗೂಢವಾದ ಆದೇಶ ಮಂತ್ರಗಳು ಬ್ರಹ್ಮನನ್ನು ಕುರಿತು ಉಪಯೋಗಿಸಲ್ಪಟ್ಟವು. ಆದರಿಂದ ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನ ಮುಂತಾದ ರಸವು ಉತ್ಪನ್ನವಾಯಿತು.

( ೩ ) ಆ ಉತ್ಪನ್ನವಾದುದೆಲ್ಲ ಸೂರ್ಯನನ್ನು ಆಶ್ರಯಿಸಿತು. ಅದೇ ಆದಿತ್ಯನಲ್ಲಿ ಕ್ಷುಬ್ಧವಾದಂತೆ ಇದ್ದ ಭಾಗವು ಗೋಚರವಾಗುವದು.

( ೪ ) ಇದೇ ರಸದ ರಸವು. ವೇದಗಳು ಸಾರವಿರುವವು. ಆ ವೇದಗಳ ಸಾರವಿದು. ಇವು ( ಉಪನಿಷತ್ತು ) ಅಮೃತಗಳ ಅಮೃತವು. ವೇದಗಳು ಅಮೃತವೆನಿಸುವವು. ಇವು ( ಆದೇಶಗಳು ) ಆ ವೇದಗಳ ಸಾರಾಮೃತವು.

೫ ನೆಯ ಖಂಡವು ಸಮಾಪ್ತವು

ತದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ನ ವೈ
ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥ ೧ ॥

( ೧ ) ಆ ಪ್ರಥಮ ಅಮೃತದಿಂದ ( ಪೂರ್ವದಿಕ್ಕಿನ ಆದಿತ್ಯ ಕಿರಣಗಳಲ್ಲಿ-ರುವ ) ವಸುದೇವತೆಗಳು ಜೀವಿಸುವರು ಮತ್ತು ಅದನ್ನು ( ಅಮೃತವನ್ನು ) ಅಗ್ನಿಮುಖದಿಂದ ಸೇವಿಸುವರು. ದೇವತೆಗಳು ( ಸ್ವತಃ ) ತಿನ್ನುವದೂ ಇಲ್ಲ ಕುಡಿಯುವದೂ ಇಲ್ಲ. ಈ ಅಮೃತವನ್ನು ನೋಡಿಯೇ ತೃಪ್ತರಾಗುವರು.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥

ಸ ಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಗ್ನಿ-
ನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಯ ಏತದೇವ
ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥

ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ವಸೂ-
ನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ೪ ॥

॥ ಇತಿ ಷಷ್ಠಃ ಖಂಡಃ ॥

( ೨ ) ದೇವತೆಗಳು ( ಆದಿತ್ಯನ ) ಈ ರೂಪವನ್ನೆ ಪ್ರವೇಶಿಸುವರು. ಈ ರೂಪದೊಳಗಿಂದಲೆ ಹೊರಬೀಳುವರು.

( ೩ ) ಈ ಅಮೃತದ ಜ್ಞಾನವಾದವನು ವಸುದೇವತೆಗಳಲ್ಲಿ ಒಬ್ಬನಾಗಿ ಅಗ್ನಿಯ ಮುಖಾಂತರ ಈ ಅಮೃತವನ್ನು ನೋಡಿ ತೃಪ್ತನಾಗುವನು. ಅವನು ಈ ರೂಪದಲ್ಲಿಯೆ ಪ್ರವೇಶ ಮಾಡುವನು, ಈ ರೂಪದೊಳಗಿಂದಲೆ ಹೊರಬೀಳುವನು.

( ೪ ) ಆದಿತ್ಯನು ಪೂರ್ವಕ್ಕೆ ಹುಟ್ಟಿ ಪಶ್ಚಿಮಕ್ಕೆ ಮುಳುಗುವವರೆಗೆ ಅವನು (ಆ ಜ್ಞಾನಿಯು) ವಸುಗಳ ಸ್ವಾರಾಜ್ಯಾಧಿಪತ್ಯವನ್ನು ಭೋಗಿಸುವನು.

೬ ನೆಯ ಖಂಡವು ಸಮಾಪ್ತವು

ಅಥ ಯದ್ವಿತೀಯಮಮೃತಂ ತದ್ರುದ್ರಾ ಉಪಜೀವಂತೀಂದ್ರೇಣ
ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ
ದೃಷ್ಟ್ವಾ ತೃಪ್ಯಂತಿ ॥ ೧ ॥

( ೧ ) ಆ ದ್ವಿತೀಯ ಅಮೃತದಿಂದ ( ದಕ್ಷಿಣ ಕಿರಣಗಳಲ್ಲಿರುವ ) ರುದ್ರ ದೇವತೆಗಳು ಉಪಜೀವಿಸುವರು. ಅದನ್ನು ಇಂದ್ರಮುಖದಿಂದ ಸೇವಿಸುವರು. ದೇವತೆಗಳು ( ಸ್ವತಃ) ತಿನ್ನುವದೂ ಇಲ್ಲ, ಕುಡಿಯುವದೂ ಇಲ್ಲ. ಈ ಅಮೃತವನ್ನು ನೋಡಿಯೇ ತೃಪ್ತರಾಗುವರು.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥

ಸ ಯ ಏತದೇವಮಮೃತಂ ವೇದ ರುದ್ರಾಣಾಮೇವೈಕೋ ಭೂತ್ವೇಂದ್ರೇಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥

ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ದ್ವಿಸ್ತಾವದ್ದಕ್ಷಿಣತ ಉದೇತೋತ್ತರತೋಽಸ್ತಮೇತಾ ರುದ್ರಾಣಾಮೇತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ೪ ॥

॥ ಇತಿ ಸಪ್ತಮಃ ಖಂಡಃ ॥

( ೨ ) ಅವರು ಈ ರೂಪದಲ್ಲಿಯೆ ಲೀನರಾಗುವರು. ಈ ರೂಪದೊಳಗಿಂದಲೆ ಹೊರಬೀಳುವರು.

( ೩ ) ಈ ಅಮೃತದ ಜ್ಞಾನವಿದ್ದವನು ರುದ್ರದೇವತೆಗಳಲ್ಲಿ ಒಬ್ಬನಾಗಿ ಇಂದ್ರನ ಮುಖಾಂತರ ಈ ಅಮೃತವನ್ನು ನೋಡಿಯೆ ತೃಪ್ತನಾಗುವನು. ಅವನು ಈ ರೂಪದಲ್ಲಿಯೆ ಲೀನನಾಗಿ ಇದರೊಳಗಿಂದಲೆ ಹೊರಬೀಳುವನು.

( ೪ ) ಆದಿತ್ಯನು ಪೂರ್ವಕ್ಕೆ ಹುಟ್ಟಿ ಪಶ್ಚಿಮಕ್ಕೆ ಮುಳುಗುತ್ತ ಇರುವ ಕಾಲದ ಇಮ್ಮಡಿ ಕಾಲದ ವರೆಗೆ (ಜ್ಞಾನಿಯು) ದಕ್ಷಿಣಕ್ಕೆ ಹುಟ್ಟಿ ಉತ್ತರಕ್ಕೆ ಮುಳುಗುವವನಾಗುವನು. ( ಯಾಕಂದರೆ ರುದ್ರಭೋಗ ಕಾಲವು ಅಷ್ಟು ಇರುವದು ). ಆ ಕಾಲದ ವರೆಗೆ ( ಜ್ಞಾನಿಯು ) ರುದ್ರದೇವತೆಗಳ ಸ್ವಾರಾಜ್ಯಾಧಿಪತ್ಯವನ್ನು ಭೋಗಿಸುವನು.

೭ ನೆಯ ಖಂಡವು ಸಮಾಪ್ತವು

ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ವರುಣೇನ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥ ೧ ॥

( ೧ ) ಆ ಮೂರನೆಯ ಅಮೃತದಿಂದ ( ಪಶ್ಚಿಮ ಕಿರಣಗಳಲ್ಲಿರುವ ) ಆದಿತ್ಯ ದೇವತೆಗಳು ಉಪಜೀವಿಸುವರು. ಅದನ್ನು ವರುಣನ ಮುಖದಿಂದ ಸೇವಿಸುವರು. ದೇವತೆಗಳು ( ಸ್ವತಃ ) ತಿನ್ನುವದೂ ಇಲ್ಲ, ಕುಡಿಯುವದೂ ಇಲ್ಲ. ಈ ಅಮೃತವನ್ನು ನೋಡಿಯೆ ತೃಪ್ತರಾಗುವರು.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥

ಸ ಯ ಏತದೇವಾಮೃತಂ ವೇದಾದಿತ್ಯಾನಾಮೇವೈಕೋ ಭೂತ್ವಾ ವರುಣೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯಂತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥

ಸ ಯಾವದಾದಿತ್ಯೋ ದಕ್ಷಿಣತ ಉದೇತೋತ್ತರತೋಽಸ್ತಮೇತಾ ದ್ವಿಸ್ತಾವತ್ಪಶ್ಚಾದುದೇತಾ ಪುರಸ್ತಾದಸ್ತಮೇತಾಽಽದಿತ್ಯಾನಾಮೇವ ತಾವದಾಧಿಪತ್ಯꣳ ಸ್ವಾರಾಜ್ಯಂ ಪರ್ಯೇತಾ ॥ ೪ ॥

॥ ಇತ್ಯಷ್ಟಮಃ ಖಂಡಃ ॥

( ೨ ) ಈ ರೂಪವನ್ನೆ ಅವರು ಪ್ರವೇಶಿಸುವರು. ಮತ್ತು ಇದರಲ್ಲಿಯೇ ಲೀನರಾಗುವರು.

( ೩ ) ಈ ಅಮೃತದ ಜ್ಞಾನವಿದ್ದವನು ಆದಿತ್ಯರಲ್ಲಿ ಒಬ್ಬನಾಗಿ ವರುಣನ ಮುಖಾಂತರ ಈ ಅಮೃತವನ್ನು ನೋಡಿಯೆ ಸಂತುಷ್ಟನಾಗುವನು. ಅವನು ಈ ರೂಪವನ್ನೆ ಪ್ರವೇಶಿಸುವನು ಮತ್ತು ಇದರೊಳಗಿಂದಲೆ ಹೊರಬೀಳುವನು.

( ೪ ) ಆದಿತ್ಯನು ದಕ್ಷಿಣಕ್ಕೆ ಹುಟ್ಟಿ ( ದಕ್ಷಿಣಾಯನದಲ್ಲಿ ? ) ಉತ್ತರಕ್ಕೆ ಮುಳುಗುವ ಕಾಲದ ಎರಡಷ್ಟು ಕಾಲ ( ಅಯನಗಳ ಕಾಲ ) ಪಶ್ಚಿಮಕ್ಕೆ ಹುಟ್ಟಿ ಪೂರ್ವಕ್ಕೆ ಮುಳುಗುವನು. ಅಷ್ಟು ಕಾಲ ಉಪಾಸಕನು ಆದಿತ್ಯ ದೇವತೆಗಳ ಸ್ವಾರಾಜ್ಯಾಧಿಪತ್ಯವನ್ನು ಉಪಭೋಗಿಸುವನು.

೮ ನೆಯ ಖಂಡವು ಸಮಾಪ್ತವು

ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ಸೋಮೇನ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥ ೧ ॥

( ೧ ) ಆ ನಾಲ್ಕನೆಯ ಅಮೃತದಿಂದ ( ಉತ್ತರದ ಕಿರಣಗಳಲ್ಲಿರುವ ) ಮರುದ್ದೇವತೆಗಳು ಜೀವಿಸುವರು ಮತ್ತು ಅದನ್ನು ಸೋಮನ ಮುಖದಿಂದ ಸೇವಿಸುವರು. ದೇವತೆಗಳು ( ಸ್ವತಃ ) ತಿನ್ನುವದೂ ಇಲ್ಲ, ಕುಡಿಯುವದೂ ಇಲ್ಲ. ಈ ಅಮೃತವನ್ನು ನೋಡಿಯೆ ತೃಪ್ತರಾಗುವರು.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥
ಸ ಯ ಏತದೇವಾಮೃತಂ ವೇದ ಮರುತಾಮೇವೈಕೋ ಭೂತ್ವಾ
ಸೋಮೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ
ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥
ಸ ಯಾವದಾದಿತ್ಯಃ ಪಶ್ಚಾದುದೇತಾ ಪುರಸ್ತಾದಸ್ತಮೇತಾ ದ್ವಿಸ್ತಾವ-
ದುತ್ತರತ ಉದೇತಾ ದಕ್ಷಿಣತೋಽಸ್ತಮೇತಾ ಮರುತಾಮೇವ ತಾವ-
ದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ೪ ॥

॥ ಇತಿ ನವಮಃ ಖಂಡಃ ॥

(೨) ಈ ರೂಪವನ್ನೆ ಅವರು ಪ್ರವೇಶಿಸುವರು ಮತ್ತು ಇದರೊಳಗಿನಿಂದಲೆ ಹೊರಬೀಳುವರು.

(೩) ಈ ಅಮೃತವನ್ನರಿತವನು ಮರುದ್ದೇವತೆಗಳಲ್ಲಿ ಒಬ್ಬನಾಗಿ ಸೋಮನ ಮುಖಾಂತರ ಈ ಅಮೃತವನ್ನು ನೋಡಿ ಸಂತುಷ್ಟನಾಗುವನು. ಅವನು ಈ ರೂಪವನ್ನೆ ಸೇರುವನು ಮತ್ತು ಇದರೊಳಗಿಂದಲೆ ಉದಯ ಹೊಂದುವನು.

(೪) ಆದಿತ್ಯನು ಪಶ್ಚಿಮಕ್ಕೆ ಹುಟ್ಟಿ (?) ಪೂರ್ವಕ್ಕೆ ಮುಳುಗುತ್ತ ಇರುವ ಕಾಲದ ಎರಡಷ್ಟು ಕಾಲ ಅವನು ಉತ್ತರದಲ್ಲಿ ಹುಟ್ಟಿ ದಕ್ಷಿಣಕ್ಕೆ ಮುಳುಗುವನು. ಅಷ್ಟುಕಾಲ ಅವನು (ಜ್ಞಾನಿಯು) ಮರುದ್ದೇವತೆಗಳ ಸ್ವಾರಾಜ್ಯಾಧಿಪತ್ಯವನ್ನು ಭೋಗಿಸುವನು.

೯ ನೆಯ ಖಂಡವು ಸಮಾಪ್ತವು

ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ
ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ
ದೃಷ್ಟ್ವಾ ತೃಪ್ಯಂತಿ ॥ ೧ ॥

(೧) ಆ ಐದನೆಯ ಅಮೃತದಿಂದ (ಊರ್ಧ್ವ ಕಿರಣಗಳಲ್ಲಿರುವ) ಸಾಧ್ಯರು (ಶ್ರೇಷ್ಠ ದೇವಯೋನಿ ವಿಶೇಷವು) ಉಪಜೀವಿಸುವರು ಮತ್ತು ಅದನ್ನು ಬ್ರಹ್ಮಮುಖದಿಂದ ಸೇವಿಸುವರು. ದೇವತೆಗಳು (ಸ್ವತಃ) ತಿನ್ನುವದೂ ಇಲ್ಲ ಕುಡಿಯುವದೂ ಇಲ್ಲ. ಈ ಅಮೃತವನ್ನು ನೋಡಿಯೆ ತೃಪ್ತರಾಗುವರು.

ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥

ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯಂತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥

ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವಮುದೇತಾರ್ವಾಙ್ಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯꣳ ಸ್ವಾರಾಜ್ಯಂ ಪರ್ಯೇತಾ ॥ ೪ ॥

॥ ಇತಿ ದಶಮಃ ಖಂಡಃ ॥

( ೨ ) ಈ ರೂಪವನ್ನೆ ಅವರು ಪ್ರವೇಶಿಸುವರು ಮತ್ತು ಇದರೊಳಗಿಂದಲಿ ಹೊರಬೀಳುವರು.

( ೩ ) ಈ ಅಮೃತದ ಜ್ಞಾನವಿದ್ದವನು ಸಾಧ್ಯರಲ್ಲಿ ಒಬ್ಬನಾಗಿ ಬ್ರಹ್ಮನ ಮುಖಾಂತರ ಈ ಅಮೃತವನ್ನು ನೋಡಿಯೆ ತೃಪ್ತನಾಗುವನು. ಅವನು ಈ ರೂಪದಲ್ಲಿಯೆ ಪ್ರವೇಶ ಮಾಡುವನು ಮತ್ತು ಇದರೊಳಗಿಂದಲೇ ಉದಯ ಹೊಂದುವನು.

( ೪ ) ಆದಿತ್ಯನು ಉತ್ತರದಲ್ಲಿ ಹುಟ್ಟಿ ದಕ್ಷಿಣದಲ್ಲಿ ಮುಳುಗುತ್ತ ಇರುವ ಕಾಲದ ಇಮ್ಮಡಿ ಕಾಲ ಆ ಜ್ಞಾನಿಯು ಮೇಲೆ ಉದಯ ಹೊಂದಿ ಕೆಳಗೆ ಅಸ್ತಂಗತನಾಗುವನು. ಅಷ್ಟು ಕಾಲ ಸಾಧ್ಯರ ಸ್ವಾರಾಜ್ಯಾಧಿಪತ್ಯವನ್ನು ಅನುಭೋಗಿಸುವನು.

೧೦ ನೆಯ ಖಂಡವು ಸಮಾಪ್ತವು

ಅಥ ತತ ಊರ್ಧ್ವ ಉದೇತ್ಯನೈವೋದೇತಾ ನಾಸ್ತಮೇತೈಕಲ ಏವ ಮಧ್ಯೇ ಸ್ಥಾತಾ ತದೇಷ ಶ್ಲೋಕಃ ॥ ೧ ॥

( ೧ ) ಇನ್ನು ಆ ಬಳಿಕ ಅವನು ( ಸ್ವರೂಪದಲ್ಲಿಯೆ ) ಉದಯ ಹೊಂದಿ ( ಹೊರಗೆ ) ಉದಯಹೊಂದುವದಿಲ್ಲ ಮತ್ತು ಅಸ್ತಂಗತನಾಗುವದಿಲ್ಲ. ತಾನೊಬ್ಬನೆ ಸ್ವಸ್ವರೂಪದಲ್ಲಿ ಸ್ಥಿತನಾಗುವನು. ಆ ಬಗ್ಗೆ ಈ ಶ್ಲೋಕವು.

ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ । ದೇವಾಸ್ತೇನಾಹಂ
ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೇತಿ ॥ ೨ ॥
ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ
ಯ ಏತಾಮೇವ ಬ್ರಹ್ಮೋಪನಿಷದಂ ವೇದ ॥ ೩ ॥
ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ
ಪ್ರಜಾಭ್ಯಸ್ತದ್ಧೈತದುದ್ದಾಲಕಾಯಾರುಣಯೇ ಜ್ಯೇಷ್ಠಾಯ ಪುತ್ರಾಯ
ಪಿತಾ ಬ್ರಹ್ಮ ಪ್ರೋವಾಚ ॥ ೪ ॥
ಇದಂ ವಾವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾ-
ತ್ಪ್ರಣಾಯ್ಯಾಯ ವಾಂತೇವಾಸಿನೇ ॥ ೫ ॥
ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇಮಾಮದ್ಭಿಃ ಪರಿಗೃಹೀತಾಂ
ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋ ಭೂಯ ಇತ್ಯೇತದೇವ
ತತೋ ಭೂಯ ಇತಿ ॥ ೬ ॥

॥ ಇತ್ಯೇಕಾದಶಃ ಖಂಡಃ ॥

( ೨ ) ಆ ಬ್ರಹ್ಮಲೋಕದಲ್ಲಿ ಇವು ( ಉದಯಾಸ್ತಗಳು ) ಇಲ್ಲ. ಅಲ್ಲಿ ಆದಿತ್ಯನು ಹುಟ್ಟಲಿಲ್ಲ ಮತ್ತು ಎಂದೂ ಮುಳುಗಲಿಲ್ಲ. ಹೇ ದೇವತೆಗಳೆ, ಆ ಸತ್ಯ ಬ್ರಹ್ಮನೊಡನೆ ನನ್ನ ವಿರೋಧವು ಎಂದಿಗೂ ಆಗದಿರಲಿ.

( ೩ ) ಈ ಬ್ರಹ್ಮಜ್ಞಾನವನ್ನು ಅರಿತವನು ಆದಿತ್ಯನ ಉದಯಾಸ್ತಗಳ ಆಚೆಗೆ ಇರುವನು. ಅವನಿಗಾಗಿ ಯಾವಾಗಲೂ ಹಗಲೇ ( ಪ್ರಕಾಶವೇ ) ಇರುವದು.

( ೪ ) ಈ ಜ್ಞಾನವನ್ನು (ಮಧುವಿದ್ಯೆ) ಬ್ರಹ್ಮನು ಪ್ರಜಾಪತಿಗೆ, ಅವನು ಮನುವಿಗೆ, ಮನುವು ಪ್ರಜೆಗಳಿಗೆ ಹೇಳಿದನು. ಇದನ್ನು ತಂದೆಯು ತನ್ನ ಹಿರಿಯ ಮಗನಾದ ಉದ್ದಾಲಕ ಆರುಣಿಗೆ ಹೇಳಿದನು.

( ೫ ) ಇದನ್ನೆ ತಂದೆಯು ತನ್ನ ಹಿರಿಯ ಮಗನಿಗೆ ಇಲ್ಲವೆ ಯೋಗ್ಯ ಶಿಷ್ಯನಿಗೆ ಹೇಳಲಿ.

( ೬ ) ಸಮುದ್ರವಲಯಾಂಕಿತ ಮತ್ತು ಸಂಪತ್ತಿನಿಂದ ತುಂಬಿದ ಈ ಭೂಮಿಯನ್ನು ಕೊಡಮಾಡಿದರೂ ಈ ಜ್ಞಾನವನ್ನು ಎರಡನೆಯವರಿಗೆ ಹೇಳ-ಕೂಡದು. ಯಾಕಂದರೆ ( ಈ ಜ್ಞಾನವು ) ಇದು ಅದಕ್ಕಿಂತ ಹೆಚ್ಚಿನದು, ಅದಕ್ಕಿಂತ ಹೆಚ್ಚಿನದು.

೧೧ ನೆಯ ಖಂಡವು ಸಮಾಪ್ತವು

ಗಾಯತ್ರೀ ವಾ ಇದꣳ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ
ಗಾಯತ್ರೀ ವಾಗ್ವಾ ಇದꣳ ಸರ್ವಂ ಭೂತಂ ಗಾಯತಿ ಚ
ತ್ರಾಯತೇ ಚ ॥ ೧ ॥
ಯಾ ವೈ ಸಾ ಗಾಯತ್ರೀಯಂ ವಾವ ಸಾ ಯೇಯಂ ಪೃಥಿವ್ಯಸ್ಯಾꣳ
ಹೀದꣳ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿಶೀಯತೇ ॥ ೨ ॥
ಯಾ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ಪುರುಷೇ ಶರೀರ-
ಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ ॥ ೩ ॥
ಯದ್ವೈ ತತ್ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನಂತಃ
ಪುರುಷೇ ಹೃದಯಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ
ನಾತಿಶೀಯಂತೇ ॥ ೪ ॥
ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯನೂಕ್ತಂ ॥ ೫ ॥
ತಾವಾನಸ್ಯ ಮಹಿಮಾ ತತೋ ಜ್ಯಾಯಾꣳಶ್ಚ ಪೂರುಷಃ । ಪಾದೋಽಸ್ಯ
ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವೀತಿ ॥ ೬ ॥

(೧) ಇವೆಲ್ಲ, ಈ ಹುಟ್ಟಿದ್ದೆಲ್ಲ ಗಾಯತ್ರಿ ಇರುವದು. ವಾಣಿಯೇ ಗಾಯತ್ರಿಯು, ವಾಣಿಯೆ ಇವೆಲ್ಲ ಇರುವದು. ಗಾಯತ್ರಿಯು ಗಾನ ಮಾಡುವದು ಮತ್ತು ರಕ್ಷಿಸುವದು.

(೨) ಆ ಗಾಯತ್ರಿಯೆಂಬುದು ಇದೇ ಈ ಪೃಥಿವಿಯು. ಈ ಪೃಥಿವಿಯಲ್ಲಿಯೆ ಈ ಭೂತಗಳೆಲ್ಲ ಪ್ರತಿಷ್ಠಿತವಿರುವವು, ಇದನ್ನು ಬಿಟ್ಟು ಅವು ಇರಲಾರವು.

(೩) ಆ ಪೃಥಿವಿಯೆಂಬುದು ಇದೇ, ಈ ಪುರುಷನ ಶರೀರವೆಂಬುದು. ಪ್ರಾಣಗಳು ಇದರಲ್ಲಿ ಪ್ರತಿಷ್ಠಿತವಿರುವವು. ಇದನ್ನು ಬಿಟ್ಟು ಅವು ಇರಲರಿಯವು.

(೪) ಪುರುಷನ ಶರೀರವೆಂಬುದು ಇದೇ. ಅದು ಈ ಪುರುಷನ ಅಂತರದಲ್ಲಿ ಹೃದಯವೆನಿಸುವದು. ಅದರಲ್ಲಿ ಪ್ರಾಣಗಳು ಪ್ರತಿಷ್ಠಿತವಿರುವವು. ಅವು ಹೃದಯವನ್ನು ಉಲ್ಲಂಘಿಸಲರಿಯವು.

(೫) ಆ ಗಾಯತ್ರಿಯು ನಾಲ್ಕು ಪದಗಳುಳ್ಳದ್ದು, ಆರು ವಿಧವಾದದ್ದು, ಅದು ಈ ಋಕ್ಕಿನಿಂದ ಹೇಳಲ್ಪಟ್ಟಿರುವದು.

(೬) ಗಾಯತ್ರಿಯ ಮಾಹಾತ್ಮ್ಯವು ಅಷ್ಟು ಇರುವದು. ಪುರುಷನು ಅದಕ್ಕೂ ಹೆಚ್ಚಿನವನು. ಸರ್ವಭೂತಗಳು ಅವನ ಒಂದು ಪಾದದಲ್ಲಿ ( ಒಂದು ನಾಲ್ಕಾಂಶ ) ಇರುವವು. ಅವನ ಮೂರು ಅಮೃತಪಾದಗಳು ದೇವಲೋಕದಲ್ಲಿ ಇರುವವು.

ಯದ್ವೈ ತದ್ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾ-
ದಾಕಾಶೋ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ೭ ॥
ಅಯಂ ವಾವ ಸ ಯೋಽಯಮಂತಃ ಪುರುಷ ಆಕಾಶೋ ಯೋ ವೈ
ಸೋಽಂತಃ ಪುರುಷ ಆಕಾಶಃ ॥ ೮ ॥
ಅಯಂ ವಾವ ಸ ಯೋಽಯಮಂತರ್ಹೃದಯ ಆಕಾಶಸ್ತದೇತತ್ಪೂರ್ಣ-
ಮಪ್ರವರ್ತಿ ಪೂರ್ಣಮಪ್ರವರ್ತಿನೀಂ ಶ್ರಿಯಂ ಲಭತೇ ಯ ಏವಂ
ವೇದ ॥ ೯ ॥

॥ ಇತಿ ದ್ವಾದಶಃ ಖಂಡಃ ॥

( ೭ ) ಅದೇ ( ಆ ಮೂರು ಅಮೃತ ಪಾದಗಳು ) ಈ ಬ್ರಹ್ಮವೆಂಬುದು, ಅದೇ ಈ ಪುರುಷನ ಹೊರಗೆ ಇರುವ ಆಕಾಶವು, ಪುರುಷನ ಹೊರಗೆ ಇರುವ ಈ ಆಕಾಶವೆ,

( ೮ ) ಪುರುಷನ ಒಳಗೆ ಇರುವ ಆಕಾಶವು ; ಪುರುಷನ ಅಂತರದಲ್ಲಿರುವ ಆಕಾಶವೆ,

( ೯ ) ಪುರುಷನ ಅಂತರ್ಹೃದಯದಲ್ಲಿರುವ ಆಕಾಶವು. ಅದು ಅತ್ಯಂತ ಪೂರ್ಣವು ಮತ್ತು ಎಲ್ಲಿಯೂ ಪ್ರವೃತ್ತವಾಗದಂತಹದು ( ಪ್ರವೃತ್ತಿ ಅಥವಾ ಕರ್ಮದಿಂದ ಮುಕ್ತವು ) ಇರುವದು. ಇದನ್ನರಿತವನು ಎಂದಿಗೂ ನಾಶ-ಹೊಂದದ ಐಶ್ವರ್ಯವನ್ನು ಪಡೆಯುವನು.

೧೨ ನೆಯ ಖಂಡವು ಸಮಾಪ್ತವು

ತಸ್ಯ ಹ ವಾ ಏತಸ್ಯ ಹೃದಯಸ್ಯ ಪಂಚ ದೇವಸುಷಯಃ ಸ ಯೋಽಸ್ಯ
ಪ್ರಾಙ್ಸುಷಿಃ ಸ ಪ್ರಾಣಸ್ತಚ್ಚಕ್ಷುಃ ಸ ಆದಿತ್ಯಸ್ತತ್ತೇಜೋಽನ್ನಾದ್ಯಮಿ-
ತ್ಯುಪಾಸೀತ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ ॥ ೧ ॥

( ೧ ) ಅದೇ ಆ ಹೃದಯಕ್ಕೆ ಐದು ದೇವಸುಷಿಗಳು ( ಪ್ರಾಣಾದಿ ಪಂಚ ದೇವತೆಗಳಿಂದ ಅಧಿಷ್ಠಿತವಾದ ದ್ವಾರಗಳು ) ಇರುವವು. ಅದರ ಪೂರ್ವ-ದ್ವಾರವೆ ಪ್ರಾಣವು, ಅದೇ ಕಣ್ಣು, ಅದೇ ಆದಿತ್ಯವು. ತೇಜ ಮತ್ತು ಅನ್ನಾದ್ಯ ( ಅನ್ನವನ್ನು ತಿನ್ನುವ ಸಾಮರ್ಥ್ಯ ) ಈ ಗುಣಗಳಿಂದ ಯುಕ್ತವು ಎಂದು ಈ ಪ್ರಾಣದ ಉಪಾಸನೆ ಮಾಡಬೇಕು. ಇದನ್ನರಿತವನು ತೇಜಸ್ವಿಯೂ ಅನ್ನವನ್ನರಗಿಸುವವನೂ ಆಗುವನು.

ಅಥ ಯೋಽಸ್ಯ ದಕ್ಷಿಣಃ ಸುಷಿಃ ಸ ವ್ಯಾನಸ್ತಚ್ಚ್ಛ್ರೋತ್ರಂ ಸ ಚಂದ್ರ-
ಮಾಸ್ತದೇತಚ್ಛ್ರೀಶ್ಚ ಯಶಶ್ಚೇತ್ಯುಪಾಸೀತ ಶ್ರೀಮಾನ್ಯಶಸ್ವೀ ಭವತಿ
ಯ ಏವಂ ವೇದ ॥ ೨ ॥

ಅಥ ಯೋಽಸ್ಯ ಪ್ರತ್ಯಙ್ಸುಷಿಃ ಸೋಽಪಾನಃ ಸಾ ವಾಕ್ ಸೋಽಗ್ನಿಸ್ತದೇತ-
ದ್ಬ್ರಹ್ಮವರ್ಚಸಮನ್ನಾದ್ಯಮಿತ್ಯುಪಾಸೀತ ಬ್ರಹ್ಮವರ್ಚಸ್ವ್ಯನ್ನಾದೋ
ಭವತಿ ಯ ಏವಂ ವೇದ ॥ ೩ ॥

ಅಥ ಯೋಽಸ್ಯೋದಙ್ಸುಷಿಃ ಸ ಸಮಾನಸ್ತನ್ಮನಃ ಸ ಪರ್ಜನ್ಯಸ್ತದೇತ-
ತ್ಕೀರ್ತಿಶ್ಚ ವ್ಯುಷ್ಟಿಶ್ಚೇತ್ಯುಪಾಸೀತ ಕೀರ್ತಿಮಾನ್ವ್ಯುಷ್ಟಿಮಾನ್ಭವತಿ
ಯ ಏವಂ ವೇದ ॥ ೪ ॥

ಅಥ ಯೋಽಸ್ಯೋರ್ಧ್ವಃ ಸುಷಿಃ ಸ ಉದಾನಃ ಸ ವಾಯುಃ ಸ ಆಕಾಶಸ್ತ-
ದೇತದೋಜಶ್ಚ ಮಹಶ್ಚೇತ್ಯುಪಾಸೀತೌಜಸ್ವೀ ಮಹಸ್ವಾನ್ಭವತಿ ಯ
ಏವಂ ವೇದ ॥ ೫ ॥

( ೨ ) ಅದರ ( ಹೃದಯದ ) ದಕ್ಷಿಣದ್ವಾರವೆ ವ್ಯಾನವು, ಅದೇ ಕಿವಿಯು, ಅದೇ ಚಂದ್ರವು. ವೈಭವ ಮತ್ತು ಯಶಸ್ಸು ಇವುಗಳಿಂದ ಯುಕ್ತವು, ಎಂದು ವ್ಯಾನದ ಉಪಾಸನೆ ಮಾಡಬೇಕು. ಇದನ್ನರಿತವನು ಸಿರಿವಂತನೂ, ಯಶಸ್ವಿಯೂ ಆಗುವನು.

( ೩ ) ಅದರ ( ಹೃದಯದ ) ಪಶ್ಚಿಮದ್ವಾರವೆ ಅಪಾನವು, ಅದೇ ವಾಣಿಯು, ಅದೇ ಅಗ್ನಿಯು, ಬ್ರಹ್ಮವರ್ಚಸ್ಸು ಮತ್ತು ಅನ್ನಾದ್ಯ ಈ ಗುಣಗಳಿಂದ ಯುಕ್ತವು, ಎಂದು ಈ ಅಪಾನದ ಉಪಾಸನೆ ಮಾಡಬೇಕು. ಇದನ್ನರಿತವನು ಬ್ರಹ್ಮವರ್ಚಸ್ಸುಳ್ಳವನೂ ಅನ್ನಭೋಗಿಯೂ ಆಗುವನು.

( ೪ ) ಅದರ (ಹೃದಯದ) ಉತ್ತರದ್ವಾರವೆ ಸಮಾನವು, ಅದೇ ಮನಸು, ಅದೇ ಪರ್ಜನ್ಯವು. ಕೀರ್ತಿ ಮತ್ತು ಲಾವಣ್ಯ ಈ ಗುಣಗಳಿಂದ ಯುಕ್ತವೆಂದು ಸಮಾನದ ಉಪಾಸನೆ ಮಾಡಬೇಕು. ಇದನ್ನರಿತವನು ಕೀರ್ತಿ ಮತ್ತು ಕಾಂತಿಗಳಿಂದ ಯುಕ್ತನಾಗುವನು.

( ೫ ) ಅದರ ( ಹೃದಯದ ) ಊರ್ಧ್ವದ್ವಾರವೆ ಉದಾನವು, ಅದೇ ವಾಯುವು, ಅದೇ ಆಕಾಶವು. ಓಜ ಮತ್ತು ಮಹತ್ವ ಈ ಗುಣಗಳಿಂದ ಯುಕ್ತವೆಂದು ಉದಾನದ ಉಪಾಸನೆ ಮಾಡಬೇಕು. ಇದನ್ನರಿತವನು ಓಜಸ್ವಿಯೂ ಮಹಿಮೆಯುಳ್ಳವನೂ ಆಗುವನು.

ತೇ ವಾ ಏತೇ ಪಂಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ಸ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದಾಸ್ಯ ಕುಲೇ ವೀರೋ ಜಾಯತೇ ಪ್ರತಿಪ್ರದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದ ॥ ೬ ॥

ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃಪೃಷ್ಠೇಷು ಸರ್ವತಃಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಸ್ತಸ್ಯೈಷಾ ದೃಷ್ಟಿಃ ॥ ೭ ॥

ಯತ್ರೈತದಸ್ಮಿಞ್ಛರೀರೇ ಸꣳಸ್ಪರ್ಶೇನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿರ್ಯತ್ರೈತತ್ಕರ್ಣಾವಪಿಗೃಹ್ಯ ನಿನದಮಿವ ನದಥುರಿವಾಗ್ನೇರಿವ ಜ್ವಲತ ಉಪಶೃಣೋತಿ ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ ॥ ೮ ॥

॥ ಇತಿ ತ್ರಯೋದಶಃ ಖಂಡಃ ॥

( ೬ ) ಸ್ವರ್ಗಲೋಕದ ದ್ವಾರಪಾಲಕರಾದ ಈ ಐದು ಬ್ರಹ್ಮಪುರುಷರ ( ಪ್ರಾಣಾದಿ ) ಜ್ಞಾನವಿದ್ದವನ ಕುಲದಲ್ಲಿ ವೀರರು ಹುಟ್ಟುವರು. ಈ ಜ್ಞಾನವಿದ್ದವನು ಸ್ವರ್ಗಲೋಕವನ್ನು ಪಡೆಯುವನು.

( ೭ ) ಇನ್ನು ಈ ದ್ಯುಲೋಕದಾಚೆಗೆ ಪ್ರಕಾಶಿಸುವ ಜ್ಯೋತಿಯು, ವಿಶ್ವದ ಮೇಲೆಲ್ಲ ಎಲ್ಲೆಲ್ಲಿಯೂ ಅತ್ಯಂತ ಉತ್ತಮ ಲೋಕಗಳಲ್ಲಿಯೂ ಬೆಳಗುವ ಜ್ಯೋತಿಯು ಇದೆ— ಯಾವುದು ಈ ಪುರುಷನ ಅಂತರ್ಯಾಮದಲ್ಲಿ ಬೆಳಗುವದೊ ಅದೇ. ಸ್ಪರ್ಶ ಮಾತ್ರದಿಂದ ತಿಳಿಯುವ ಅದರ ( ಪುರುಷ ಶರೀರದ ) ಕಾವೇ ಆ ಜ್ಯೋತಿಯ ಕಣ್ಣು.

( ೮ ) ಎರಡೂ ಕಿವಿಗಳನ್ನು ಮುಚ್ಚಿದರೂ ಕೇಳಿಬರುವ ರಥವು ನಡೆದ ಸಪ್ಪಳ, ಎತ್ತಿನ ಡುರಕಿಯ ಸಪ್ಪಳ, ಬೆಂಕಿ ಉರಿಯುವ ಸಪ್ಪಳ, ಇದೇ ಆ ಜ್ಯೋತಿಯ ಕಿವಿಯು. ದೃಷ್ಟ ಮತ್ತು ಶ್ರುತ ಈ ಗುಣಗಳಿಂದ ಯುಕ್ತವೆಂದು ಆ ಜ್ಯೋತಿಯ ಉಪಾಸನೆ ಮಾಡಬೇಕು. ಇದನ್ನರಿತವನು ಸುಂದರನೂ ಪ್ರಖ್ಯಾತನೂ ಆಗುವನು.

೧೩ ನೆಯ ಖಂಡವು ಸಮಾಪ್ತವು

ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತಾಥ ಖಲು
ಕ್ರತುಮಯಃ ಪುರುಷೋ ಯಥಾ ಕ್ರತುರಸ್ಮಿಁಲ್ಲೋಕೇ ಪುರುಷೋ
ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥ ೧ ॥
ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪ ಆಕಾಶಾತ್ಮಾ
ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮ-
ಭ್ಯಾತ್ತೋಽವಾಕ್ಯನಾದರಃ ॥ ೨ ॥
ಏಷ ಮ ಆತ್ಮಾಂತರ್ಹೃದಯೇಽಣೀಯಾನ್ವ್ರೀಹೇರ್ವಾಯವಾದ್ವಾ
ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕತಂಡುಲಾದ್ವಾ ಏಷ ಮ
ಆತ್ಮಾಂತರ್ಹೃದಯೇ ಜ್ಯಾಯಾನ್ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾ-
ಯಾನ್ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ॥ ೩ ॥
ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದ-
ಮಭ್ಯಾತ್ತೋಽವಾಕ್ಯನಾದರ ಏಷ ಮ ಆತ್ಮಾಂತರ್ಹೃದಯ ಏತದ್ಬ್ರ-

(೧) ಇದೆಲ್ಲವೂ ಬ್ರಹ್ಮವು. ಇದೆಲ್ಲದರ ಉತ್ಪತ್ತಿಸ್ಥಿತಿಲಯಗಳೆಲ್ಲ ಬ್ರಹ್ಮ-ನಲ್ಲಿಯೇ ಆಗುವವು. (ಜ-ಜನ್ಮ, ಲ-ಲೀನ, ಅನ್–ಉಸುರಾಡಿಸುವದು ಅಥವಾ ಇರುವಿಕೆ). ಚಿತ್ತವನ್ನು ಶಾಂತಗೊಳಿಸಿ (ರಾಗದ್ವೇಷರಹಿತ ಮಾಡಿ ಬ್ರಹ್ಮನನ್ನು ಉಪಾಸಿಸಬೇಕು) ಪುರುಷನು ಕ್ರತುಮಯನು (ನಿಶ್ಚಯ ಮಾಡುವದರಿಂದ ಅವನ ಜೀವನವು), ಪುರುಷನು ತನ್ನ ಕ್ರತುವಿನಂತೆ-(ಸಂಕಲ್ಪದಂತೆ, ನಿಶ್ಚಯದಂತೆ) ಈ ಲೋಕದಲ್ಲಿ ಆಗುವವನು, ಅದೇ ರೀತಿ ಮರಣಪಶ್ಚಾತ್ ಆಗುವವನು. ಆದುದರಿಂದ ದೃಢಸಂಕಲ್ಪ ಮಾಡಬೇಕು.

(೨) ಆತ್ಮನು ಮನೋಮಯನು, ಪ್ರಾಣವೇ ಅವನ ಶರೀರವು, ಅವನು ಚೈತನ್ಯರೂಪನು, ಸತ್ಯಸಂಕಲ್ಪನು. ಆಕಾಶವು ಅವನ ಆತ್ಮವು, ಅವನು ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಅವನು ಸರ್ವವಸ್ತುಗಳಲ್ಲಿ ವ್ಯಾಪ್ತನು. ಅವನು ವಾಗ್ರಹಿತನು (ಪೂರ್ಣಕಾಮ-ನಾದುದರಿಂದ) ಯಾವ ಆತುರತೆಯೂ ಇಲ್ಲದವನು.

(೩) ನನ್ನ ಆತ್ಮನು ಅಂತರ್ಹೃದಯದಲ್ಲಿರುವನು. ಅವನು ಅಕ್ಕಿಯ ಕಾಳು, ಜವೆಗೋದಿಯ ಕಾಳು, ಸಾಸಿವೆಯ ಕಾಳು, ಸಾವಕ್ಕಿ, ಸಾವಕ್ಕಿಯ ಕಾಳು, ಇವುಗಳಿಗಿಂತ ಸೂಕ್ಷ್ಮನು. ಈ ನನ್ನ ಆತ್ಮನು ಹೃದಯಾಂತರದಲ್ಲಿ ಪೃಥಿವಿಗಿಂತ, ಅಂತರಿಕ್ಷಕ್ಕಿಂತ, ದ್ಯುಲೋಕಕ್ಕಿಂತ, ಈ ಲೋಕಗಳಿಗಿಂತ ದೊಡ್ಡವನು.

ಹ್ಯೈತಮಿತಃ ಪ್ರೇತ್ಯಾಭಿಸಂಭವಿತಾಸ್ಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತೀತಿ ಹ ಸ್ಮಾಹ ಶಾಂಡಿಲ್ಯಃ ಶಾಂಡಿಲ್ಯಃ ॥ ೪ ॥

॥ ಇತಿ ಚತುರ್ದಶಃ ಖಂಡಃ ॥

( ೪ ) ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಆದ ಸರ್ವನನ್ನು ವ್ಯಾಪಿಸಿದ, ಸಂಭ್ರಮರಹಿತನಾದ ನನ್ನ ಆತ್ಮನು ಈ ಅಂತರ್ಹೃದಯದಲ್ಲಿರುವನು. ಅವನೇ ಬ್ರಹ್ಮನನ್ನು ಪಡೆಯುವನು. ಯಾವನ ನಿಶ್ಚಿತ ಜ್ಞಾನವು ಈ ಪ್ರಕಾರ ಇರುವದೊ ಯಾವನಿಗೆ ಈ ಬಗ್ಗೆ ಸಂಶಯವಿಲ್ಲವೊ ಅವನು ಬ್ರಹ್ಮನನ್ನು ಪಡೆಯುವನು. ಹೀಗೆ ಶಾಂಡಿಲ್ಯನು ಹೇಳಿದನು.

೧೪ ನೆಯ ಖಂಡವು ಸಮಾಪ್ತವು

ಅಂತರಿಕ್ಷೋದರಃ ಕೋಶೋ ಭೂಮಿಬುರ್ಧ್ನೋ ನ ಜೀರ್ಯತಿ ದಿಶೋ ಹ್ಯಸ್ಯ ಸ್ರಕ್ತಯೋ ದ್ಯೌರಸ್ಯೋತ್ತರಂ ಬಿಲꣳ ಸ ಏಷ ಕೋಶೋ ವಸುಧಾನಸ್ತಸ್ಮಿನ್ವಿಶ್ವಮಿದꣳ ಶ್ರಿತಂ ॥ ೧ ॥

ತಸ್ಯ ಪ್ರಾಚೀ ದಿಗ್ಜುಹೂರ್ನಾಮ ಸಹಮಾನಾ ನಾಮ ದಕ್ಷಿಣಾ ರಾಜ್ಞೀ ನಾಮ ಪ್ರತೀಚೀ ಸುಭೂತಾ ನಾಮೋದೀಚೀ ತಾಸಾಂ ವಾಯು-ರ್ವತ್ಸಃ ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದꣳರೋದಿತಿ ಸೋऽಹಮೇತಮೇವಂ ವಾಯುಂ ದಿಶಾಂ ವತ್ಸಂ ವೇದ ಮಾಪುತ್ರರೋದꣳರುದಮ್ ॥ ೨ ॥

( ೧ ) ಅಂತರಿಕ್ಷವು ಈ ಕೋಶದ ( ಸರ್ವವಸ್ತು ಸಂಗ್ರಹವಿದ್ದುದು ) ಹೊಟ್ಟೆಯು, ಭೂಮಿಯು ಇದರ ಬೇರು. ಇದಕ್ಕೆ ಮುಪ್ಪೆಂಬುದು ಇಲ್ಲ. ದಿಕ್ಕುಗಳು ಇದರ ಮೂಲೆಗಳು. ದ್ಯುಲೋಕವು ಇದರ ಮೇಲಿನ ದ್ವಾರವು. ಈ ಕೋಶವು ಸಂಪತ್ತಿಯ ಸಂಗ್ರಹಸ್ಥಾನವು ( ಕರ್ಮಫಲಗಳ ಸಂಗ್ರಹವು ). ಇದರಲ್ಲಿ ಈ ವಿಶ್ವವು ನಿಂತಿರುವದು.

( ೨ ) ಇದರ ಪೂರ್ವದಿಕ್ಕಿನ ಹೆಸರು ' ಜುಹೂ, ' ದಕ್ಷಿಣದ ಹೆಸರು ' ಸಹಮಾನಾ ', ಪಶ್ಚಿಮದ ಹೆಸರು ' ರಾಜ್ಞಿ ', ಉತ್ತರದ ಹೆಸರು ' ಸುಭೂತಾ '. ವಾಯುವು ದಿಕ್ಕುಗಳ ವತ್ಸವು. ವಾಯುವು ದಿಕ್ಕುಗಳ ವತ್ಸವೆಂಬುದನ್ನು ಅರಿತವನು ಪುತ್ರಶೋಕದಿಂದ ಅಳಬೇಕಾದುದಿಲ್ಲ. ವಾಯುವು ದಿಕ್ಕುಗಳ ವತ್ಸವು ಎಂಬುದನ್ನು ನಾನು ಬಲ್ಲೆನು. ಆದುದರಿಂದ ನನಗೆ ಪುತ್ರಮರಣದ ಶೋಕವು ಆಗದಿರಲಿ.

ಅರಿಷ್ಟಂ ಕೋಶಂ ಪ್ರಪದ್ಯೇಽಮುನಾಽಮುನಾಽಮುನಾ ಪ್ರಾಣಂ
ಪ್ರಪದ್ಯೇಽಮುನಾಽಮುನಾಽಮುನಾ ಭೂಃ ಪ್ರಪದ್ಯೇಽಮುನಾಽ-
ಮುನಾಽಮುನಾ ಭುವಃ ಪ್ರಪದ್ಯೇಽಮುನಾಽಮುನಾಽಮುನಾ ಸ್ವಃ
ಪ್ರಪದ್ಯೇಽಮುನಾಽಮುನಾಽಮುನಾ || ೩ ||
ಸ ಯದವೋಚಂ ಪ್ರಾಣಂ ಪ್ರಪದ್ಯ ಇತಿ ಪ್ರಾಣೋ ವಾ ಇದꣳಸರ್ವಂ
ಭೂತಂ ಯದಿದಂ ಕಿಂಚ ತಮೇವ ತತ್ಪ್ರಾಪತ್ಸಿ || ೪ ||
ಅಥ ಯದವೋಚಂ ಭೂಃ ಪ್ರಪದ್ಯ ಇತಿ ಪೃಥಿವೀಂ ಪ್ರಪದ್ಯೇಽಂತರಿಕ್ಷಂ
ಪ್ರಪದ್ಯೇ ದಿವಂ ಪ್ರಪದ್ಯ ಇತ್ಯೇವ ತದವೋಚಂ || ೫ ||
ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನಿಂ ಪ್ರಪದ್ಯೇ ವಾಯುಂ
ಪ್ರಪದ್ಯ ಆದಿತ್ಯಂ ಪ್ರಪದ್ಯ ಇತ್ಯೇವ ತದವೋಚಂ || ೬ ||
ಅಥ ಯದವೋಚꣳ ಸ್ವಃ ಪ್ರಪದ್ಯ ಇತ್ಯೃಗ್ವೇದಂ ಪ್ರಪದ್ಯೇ
ಯಜುರ್ವೇದಂ ಪ್ರಪದ್ಯೇ ಸಾಮವೇದಂ ಪ್ರಪದ್ಯ ಇತ್ಯೇವ ತದ-
ವೋಚಂ ತದವೋಚಂ || ೭ ||

|| ಇತಿ ಪಂಚದಶಃ ಖಂಡಃ ||

(೩) ಅವಿನಾಶಿಯಾದ ಕೋಶಕ್ಕೆ ನಾನು ಶರಣಾಗತನು. (ಈ ಹೆಸರಿನಿಂದ— ಇಲ್ಲಿ ಮೂರು ಸಾರೆ ಮಗನ ಹೆಸರು ಅನ್ನತಕ್ಕದ್ದು). ಭೂಕ್ಕೆ ಪ್ರಾಣಕ್ಕೆ ನಾನು ಶರಣಾಗತನು (ಮೇಲಿನಂತೆ ಮಗನ ಹೆಸರು). ಭುವಕ್ಕೆ ನಾನು ಶರಣಾಗತನು (ಮೇಲಿನಂತೆ ಮಗನ ಹೆಸರು). ಸ್ವಕ್ಕೆ ನಾನು ಶರಣಾಗತನು (ಮೇಲಿನಂತೆ ಮಗನ ಹೆಸರು).

(೪) ಉಪಾಸಕನು 'ನಾನು ಪ್ರಾಣಕ್ಕೆ ಶರಣು' ಎಂದನು. ಅವನು ಹೀಗೆ ಅನ್ನುವಲ್ಲಿ, ಪ್ರಾಣವೆಂದರೆ ಈ ಭೂತಮಾತ್ರವೆಲ್ಲ, ಅದಕ್ಕೆ ನಾನು ಶರಣಾಗತನು ಎಂದು ಅರ್ಥವು.

(೫) ಅವನು "ನಾನು 'ಭೂ' ಕ್ಕೆ ಶರಣಾಗತನು" ಅನ್ನುವಲ್ಲಿ ಪೃಥಿವಿ, ಅಂತರಿಕ್ಷ, ದ್ಯುಲೋಕ ಇವುಗಳಿಗೆಲ್ಲ ಶರಣಾಗತನು ಎಂದು ಅರ್ಥವು.

(೬) ಅವನು 'ನಾನು ಭುವಕ್ಕೆ ಶರಣಾಗತನು' ಅನ್ನುವಲ್ಲಿ ಅಗ್ನಿ, ವಾಯು, ಆದಿತ್ಯ ಇವುಗಳಿಗೆಲ್ಲ ಶರಣಾಗತನು ಎಂದು ಅರ್ಥವು.

(೭) ಅವನು 'ನಾನು ಸ್ವಕ್ಕೆ ಶರಣಾಗತನು' ಅನ್ನುವಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಇವುಗಳಿಗೆಲ್ಲ ಶರಣಾಗತನು ಎಂದು ಅರ್ಥವು.

೧೫ ನೆಯ ಖಂಡವು ಸಮಾಪ್ತವು

ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿ ವರ್ಷಾಣಿ ತತ್ಪ್ರಾತಃ ಸವನಂ ಚತುರ್ವಿಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವ ಏತೇ ಹೀದಂ ಸರ್ವಂ ವಾಸಯಂತಿ ॥ ೧ ॥

ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಂ ಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಇತ್ಯಗದೋ ಹ ಭವತಿ ॥ ೨ ॥

ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನಂ ಸವನಂ ಚತುಶ್ಚತ್ವಾರಿಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಂ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾ ವಾವ ರುದ್ರಾ ಏತೇ ಹೀದಂ ಸರ್ವಂ ರೋದಯಂತಿ ॥ ೩ ॥

( ೧ ) ಪುರುಷನೆ ಯಜ್ಞವು. ಅವನ ಆಯುಷ್ಯದ ಪ್ರಾರಂಭದ ೨೪ ವರ್ಷಗಳು ಪ್ರಾತಃಸವನವು ( ಪ್ರಾತರ್ಯಜ್ಞ ). ಗಾಯತ್ರಿ ಛಂದವು ೨೪ ಅಕ್ಷರಗಳುಳ್ಳದ್ದು. ಪ್ರಾತಃಸವನವು ಗಾಯತ್ರಿಯು. ವಸುದೇವತೆಗಳು ಅದರಲ್ಲಿ ಅಧಿಷ್ಠಿತರು. ಪ್ರಾಣಗಳೆ ವಸುಗಳು. ಯಾಕಂದರೆ ಅವೇ ಮಿಕ್ಕ ವಸ್ತುಗಳನ್ನು ಇರಲು ಸಮರ್ಥ ಮಾಡುವವು. ( ಪ್ರಾಣವು ಹೋಯಿತೆಂದರೆ ಮಿಕ್ಕ ಶಕ್ತಿಗಳೆಲ್ಲ ನಷ್ಟವಾಗುವವು ).

( ೨ ) ಈ ವಯಸ್ಸಿನಲ್ಲಿ ( ಪ್ರಾರಂಭದ ೨೪ ವರ್ಷ ) ಏನಾದರೂ ವ್ಯಾಧಿಯಾದರೆ ' ಹೇ, ಪ್ರಾಣಗಳೇ, ವಸುಗಳೇ, ಈ ನನ್ನ ಪ್ರಾತಃಸವನವು ಮಧ್ಯಾಹ್ನ ಸವನದೊಡನೆ ಜೋಡಿಸಲ್ಪಡಲಿ ( ನನ್ನ ಆಯುಷ್ಯವು ಬೆಳೆಯಲಿ ), ನನ್ನ ಯಜ್ಞವು ಪ್ರಾಣಗಳಲ್ಲಿ, ವಸುಗಳಲ್ಲಿ, ಲೋಪಹೊಂದದೆ ಇರಲಿ ( ಈ ಅವಧಿಯಲ್ಲಿ ನಾನು ಸಾಯದೇ ಇರಲಿ ) ' ಎಂದು ಜಪಿಸಬೇಕು. ಈ ಮಂತ್ರದ ಮೂಲಕ ಯಾಜಕನು ವ್ಯಾಧಿಮುಕ್ತನಾಗುವನು, ವ್ಯಾಧಿರಹಿತನಾಗುವನು.

( ೩ ) ಮುಂದಿನ ೪೪ ವರ್ಷಗಳು ಪುರುಷನ ಮಧ್ಯಾಹ್ನ ಸವನವು. ತ್ರಿಷ್ಟುಪ್‌ಛಂದವು ೪೪ ಅಕ್ಷರಗಳುಳ್ಳದ್ದು. ಮಧ್ಯಾಹ್ನ ಸವನವು ತ್ರಿಷ್ಟುಭವು. ರುದ್ರದೇವತೆಗಳು ಆ ಸವನದಲ್ಲಿ ಅಧಿಷ್ಠಿತರು. ಪ್ರಾಣಗಳೆ ರುದ್ರರು. ಯಾಕಂದರೆ ಪ್ರಾಣಗಳೆ ( ಹೊರಟು ಹೋಗುವಾಗ ) ಎಲ್ಲ ಅನ್ಯ ಶಕ್ತಿಗಳನ್ನು ಅಳಿಸುವವು.

ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ರುದ್ರಾ
ಇದಂ ಮೇ ಮಾಧ್ಯಂದಿನꣳಸವನಂ ತೃತೀಯಸವನಮನುಸಂತನುತೇತಿ
ಮಾಹಂ ಪ್ರಾಣಾನಾꣳ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋ-
ಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ || ೪ ||

ಅಥ ಯಾನ್ಯಷ್ಟಾಚತ್ವಾರಿꣳಶದ್ವರ್ಷಾಣಿ ತೃತೀಯಸವನಮಷ್ಟಾ-
ಚತ್ವಾರಿꣳಶದಕ್ಷರಾ ಜಗತೀ ಜಾಗತಂ ತೃತೀಯಸವನಂ ತದ-
ಸ್ಯಾದಿತ್ಯಾ ಅನ್ವಾಯತ್ತಾಃ ಪ್ರಾಣಾ ವಾವಾದಿತ್ಯಾ ಏತೇ ಹೀದꣳ-
ಸರ್ವಮಾದದತೇ || ೫ ||

ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ಆದಿತ್ಯಾ
ಇದಂ ಮೇ ತೃತೀಯಸವನಮಾಯುರನುಸಂತನುತೇತಿ ಮಾಹಂ
ಪ್ರಾಣಾನಾಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯು-
ದ್ಧೈವ ತತ ಏತ್ಯಗದೋ ಹೈವ ಭವತಿ || ೬ ||

(೪) ಈ ವಯಸ್ಸಿನಲ್ಲಿ (೨೪ ರಿಂದ ೬೮ ರ ವಯಸ್ಸಿನ ವರೆಗೆ) ಏನಾದರೂ ವ್ಯಾಧಿಯಾದರೆ, 'ಹೇ ಪ್ರಾಣಗಳೇ, ರುದ್ರರೇ, ನನ್ನ ಮಧ್ಯಾಹ್ನ ಸವನವು ತೃತೀಯ ಸವನದೊಡನೆ ಜೋಡಿಸಲ್ಪಡಲಿ (ನನಗೆ ಹೆಚ್ಚು ಆಯುಸ್ಸು ಇರಲಿ). ಈ ಯಜ್ಞವು ಪ್ರಾಣಗಳಲ್ಲಿ, ರುದ್ರರಲ್ಲಿ (ಈ ಅವಧಿಯಲ್ಲಿ) ಮುಗಿಯದಿರಲಿ,' ಎಂದು ಜಪಿಸಬೇಕು. ಈ ಮಂತ್ರದ ಮೂಲಕ ಯಾಜಕನು ವ್ಯಾಧಿಯಿಂದ ಮುಕ್ತನಾಗುವನು ಮತ್ತು ನಿರೋಗಿಯಾಗುವನು.

(೫) ಇನ್ನು ಮುಂದಿನ ೪೮ ವರ್ಷಗಳು ಪುರುಷನ ಮೂರನೆಯ ಸವನವು. ಜಗತೀ ಛಂದವು ೪೮ ಅಕ್ಷರಗಳುಳ್ಳದ್ದು. ಮೂರನೆಯ ಸವನವು ಜಗತೀ. ಆದಿತ್ಯ ದೇವತೆಗಳು ಆ ಸವನದಲ್ಲಿ ಅಧಿಷ್ಠಿತರು. ಪ್ರಾಣಗಳೇ ಎಲ್ಲವನ್ನೂ ಗ್ರಹಿಸುವವು.

(೬) ಈ ವಯಸ್ಸಿನಲ್ಲಿ (೬೮ ರಿಂದ ೧೧೬ ರ ವರೆಗೆ) ಉಪಾಸಕನಿಗೆ ಏನಾದರೂ ವ್ಯಾಧಿಯಾದರೆ, 'ಹೇ ಪ್ರಾಣಗಳೇ, ಆದಿತ್ಯರೇ, ಈ ನನ್ನ ಮೂರನೆಯ ಸವನವನ್ನು ಆಯುಷ್ಯದೊಡನೆ ಜೋಡಿಸಿರಿ (ನಾನು ಪೂರ್ಣಾಯುಷಿಯಾಗಲಿ). ನನ್ನ ಯಜ್ಞವು ಪ್ರಾಣಗಳಲ್ಲಿ, ಆದಿತ್ಯರಲ್ಲಿ, (ಈ ಅವಧಿಯಲ್ಲಿ) ಮುಗಿಯದಿರಲಿ,' ಎಂದು ಜಪಿಸಬೇಕು. ಈ ಮಂತ್ರದ ಮೂಲಕ ಅವನು ವ್ಯಾಧಿಯಿಂದ ಮುಕ್ತನಾಗಿ ನಿರೋಗಿಯಾಗುವನು.

ಏತದ್ಧ ಸ್ಮ ವೈತದ್ವಿದ್ವಾನಾಹ ಮಹಿದಾಸ ಐತರೇಯಃ ಸ ಕಿಂ ಮ
ಏತದುಪತಪಸಿ ಯೋಽಹಮನೇನ ನ ಪ್ರೇಷ್ಯಾಮೀತಿ ಸ ಹ
ಷೋಡಶಂ ವರ್ಷಶತಮಜೀವತ್ಪ್ರ ಹ ಷೋಡಶಂ ವರ್ಷಶತಂ ಜೀವತಿ
ಯ ಏವಂ ವೇದ ॥ ೭ ॥

॥ ಇತಿ ಷೋಡಶಃ ಖಂಡಃ ॥

( ೭ ) ಇದನ್ನು ಆ ವಿದ್ವಾಂಸನಾದ ಮಹಿದಾಸ ಐತರೇಯನು ಹೇಳಿದನು. 'ನನ್ನನ್ನು ಏಕೆ ಪೀಡಿಸುವಿ? ನಾನು ಇದರಿಂದ ಸಾಯುವವನಲ್ಲ' ಎಂದು ಅವನು ವ್ಯಾಧಿಗೆ ಅಂದನು. ಅವನು ೧೧೬ ವರ್ಷ ಬಾಳಿದನು. ಇದನ್ನರಿತವನು ೧೧೬ ವರ್ಷ ಬಾಳುವನು.

೧೬ ನೆಯ ಖಂಡವು ಸಮಾಪ್ತವು

ಸ ಯದಶಿಶಿಷತಿ ಯತ್ಪಿಪಾಸತಿ ಯನ್ನ ರಮತೇ ತಾ ಅಸ್ಯ ದೀಕ್ಷಾಃ ॥ ೧ ॥
ಅಥ ಯದಶ್ನಾತಿ ಯತ್ಪಿಬತಿ ಯದ್ರಮತೇ ತದುಪಸದೈರೇತಿ ॥ ೨ ॥
ಅಥ ಯದ್ಧಸತಿ ಯಜ್ಜಕ್ಷತಿ ಯನ್ಮೈಥುನಂ ಚರತಿ ಸ್ತುತಶಸ್ತ್ರೈರೇವ
ತದೇತಿ ॥ ೩ ॥
ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ
ಅಸ್ಯ ದಕ್ಷಿಣಾಃ ॥ ೪ ॥

( ೧ ) ( ಪುರುಷನೆ ಯಜ್ಞ ಎಂದು ಹೇಳಿದ ಬಳಿಕ ಅವನ ವಿವಿಧ ಕ್ರಿಯೆಗಳೂ ಭಾವಗಳೂ ಇಲ್ಲಿ ಯಜ್ಞಭಾಗಗಳೊಡನೆ ಹೋಲಿಸಲ್ಪಟ್ಟಿವೆ ). ಹಸಿವು, ನೀರಡಿಕೆ, ರಮಿಸದಿರುವಿಕೆ ಇವು ಪುರುಷನ ( ಜೀವನರೂಪ ಯಜ್ಞದಲ್ಲಿಯ ) ದೀಕ್ಷೆಗಳು ( ದುಃಖವೆ ಯಜ್ಞ-ದೀಕ್ಷೆಗಳಿಗೂ ಇವಕ್ಕೂ ಸಾಮಾನ್ಯವು ).

( ೨ ) ಪುರುಷನು ತಿನ್ನುವದು, ಕುಡಿಯುವದು, ರಮಿಸುವದು, ಉಪಸದಗಳೊಡನೆ ( ಯಜ್ಞ, ದೀಕ್ಷೆ ಹೊತ್ತವನು ನಿಯಮಿತ ಆಹಾರಾದಿ ಮಾಡುವದು ) ಸಮಾನವು ( ಉಪಸದಗಳಿಗೂ ಇವಕ್ಕೂ ಸುಖವು ಸಾಮಾನ್ಯವು. )

( ೩ ) ಪುರುಷನು ನಗುವದು, ಭಕ್ಷಿಸುವದು, ಮೈಥುನ ಮಾಡುವದು ಇವು ( ಯಜ್ಞದಲ್ಲಿಯ ) ಸ್ತುತಿಮಂತ್ರ ಪಠಣಕ್ಕೆ ಸಮಾನವು. ( ಇವೆರಡರಲ್ಲಿ ಶಬ್ದವು ಸಾಮಾನ್ಯವು ).

( ೪ ) ಪುರುಷನ ತಪಸ್ಸು, ದಾನ, ಸರಲತೆ, ಅಹಿಂಸೆ, ಸತ್ಯವಚನ, ಇವು ( ಯಜ್ಞದಲ್ಲಿಯ ) ದಕ್ಷಿಣೆಗಳಿಗೆ ಸಮಾನವು. ( ಇವೆರಡರಲ್ಲಿ ಧರ್ಮಪುಷ್ಟಿಯು ಸಾಮಾನ್ಯವು ).

ತಸ್ಮಾದಾಹುಃ ಸೋಷ್ಯತ್ಯಸೋಷ್ಟೇತಿ ಪುನರುತ್ಪಾದನಮೇವಾಸ್ಯ
ತನ್ಮರಣಮೇವಾಸ್ಯಾವಭೃಥಃ ॥ ೫ ॥

ತದ್ಧೈತದ್ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯೋಕ್ತ್ವೋ-
ವಾಚಾಪಿಪಾಸ ಏವ ಸ ಬಭೂವ ಸೋಽಂತವೇಲಾಯಾಮೇತತ್ರಯಂ
ಪ್ರತಿಪದ್ಯೇತಾಕ್ಷಿತಮಸ್ಯಚ್ಯುತಮಸಿ ಪ್ರಾಣಸ್‌ಶಿತಮಸೀತಿ ತತ್ರೈತೇ
ದ್ವೇ ಋಚೌ ಭವತಃ ॥ ೬ ॥

ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಷ್ಪಶ್ಯಂತಿ ವಾಸರಂ । ಪರೋ ಯದಿಧ್ಯತೇ
ದಿವಾ ॥ ೭ ॥

ಉದ್ವಯಂತಮಸಸ್ಪರಿ ಜ್ಯೋತಿಃ ಪಶ್ಯಂತ ಉತ್ತರಂ‌ಸ್ವಃ ಪಶ್ಯಂತ
ಉತ್ತರಂ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮಿತಿ
ಜ್ಯೋತಿರುತ್ತಮಮಿತಿ ॥ ೮ ॥

॥ ಇತಿ ಸಪ್ತದಶಃ ಖಂಡಃ ॥

(೫) ಆದುದರಿಂದ (ತಾಯಿಯು ಪುರುಷನನ್ನು) ಹಡೆಯುವಳು, (ಸೋಷ್ಯತಿ–ಯಜ್ಞದಲ್ಲಿ ಸೋಷ್ಯತಿ ಅಂದರೆ ಸೋಮವನ್ನು ಕುಟ್ಟುವನು ಎಂದರ್ಥ), ಹಡೆದಳು, ಅನ್ನುವರು. ಇದು ಅವನ ಪುನರುತ್ಪಾದವೇ ಸೈ. ಮರಣವು ಅವನ ಅವಭೃಥ ಸ್ನಾನವು. (ಕರ್ಮವೆಲ್ಲ ಮುಗಿದ ಬಳಿಕ ಮಾಡತಕ್ಕ ಸ್ನಾನ).

(೬) ಈ ಜ್ಞಾನವನ್ನು ಘೋರ ಆಂಗಿರಸನು ದೇವಕೀಪುತ್ರನಾದ ಕೃಷ್ಣನಿಗೆ ಹೇಳುವಾಗ ಅಂದದ್ದು,—ಆಂಗಿರಸನು ಸ್ವತಃ ಜ್ಞಾನಪಿಪಾಸಾ-ರಹಿತನಾಗಿದ್ದನು. ಅವನು (ಉಪಾಸಕನು) ಅಂತ್ಯ ಸಮಯಕ್ಕೆ, 'ಅಕ್ಷಿತ (ದೋಷರಹಿತ) ನಿರುವಿ, ಅಚ್ಯುತನಿರುವಿ, ಅತ್ಯಂತ ಸೂಕ್ಷ್ಮಪ್ರಾಣನಿರುವಿ,' ಎಂಬ ಮೂರು ಮಂತ್ರಗಳ ಜಪವನ್ನು (ಸೂರ್ಯನನ್ನು ಕುರಿತು) ಮಾಡ-ಬೇಕು, ಈ ಸಂಬಂಧದಿಂದ ಎರಡು ಋಚೆಗಳಿರುವವು.

(೭, ೮) ನಾವು ತಪಸ್ಸಿನಾಚೆಗಿರುವ (ಅಜ್ಞಾನದಾಚೆ) ವಿಶ್ವಕಾರಣ-ವಾದ (ವಿಶ್ವದ ಬೀಜವಾದ) ಜ್ಯೋತಿಯನ್ನು ಎಲ್ಲೆಲ್ಲಿಯೂ ನೋಡುತ್ತ ಎಲ್ಲ ಪ್ರಕಾಶಮಾನರಲ್ಲಿ ಹೆಚ್ಚು ಪ್ರಕಾಶಮಾನನಾದ ಮತ್ತು ಉತ್ತಮೋತ್ತಮ ಜ್ಯೋತಿಯಾದ ಸೂರ್ಯನ ಕಡೆಗೆ ಹೋದೆವು.

೧೭ ನೆಯ ಖಂಡವು ಸಮಾಪ್ತವು

ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ
ಬ್ರಹ್ಮೇತ್ಯುಭಯಮಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ ॥ ೧ ॥
ತದೇತಚ್ಚತುಷ್ಪಾದ್ಬ್ರಹ್ಮ ವಾಕ್ ಪಾದಃ ಪ್ರಾಣಃ ಪಾದಶ್ಚಕ್ಷುಃ ಪಾದಃ
ಶ್ರೋತ್ರಂ ಪಾದ ಇತ್ಯಧ್ಯಾತ್ಮಮಥಾಧಿದೈವತಮಗ್ನಿಃ ಪಾದೋ
ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದ ಇತ್ಯುಭಯಮೇ-
ವಾದಿಷ್ಟಂ ಭವತ್ಯಧ್ಯಾತ್ಮಂ ಚೈವಾಧಿದೈವತಂ ಚ ॥ ೨ ॥
ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ
ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮ-
ವರ್ಚಸೇನ ಯ ಏವಂ ವೇದ ॥ ೩ ॥
ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ
ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚ-
ಸೇನ ಯ ಏವಂ ವೇದ ॥ ೪ ॥

(೧) ಮನಸು ಪರಬ್ರಹ್ಮವೆಂದು ಉಪಾಸಿಸಬೇಕು. ಇದು ಅಧ್ಯಾತ್ಮವು. (ಶರೀರಸ್ಥ ವಿಷಯವು). ಇನ್ನು ಅಧಿದೈವತವು (ವಿಶ್ವಸ್ಥ ದೇವತೆಗಳ (ವಿಷಯವು). ಆಕಾಶವು ಬ್ರಹ್ಮವೆಂದು ಉಪಾಸಿಸಬೇಕು. ಈ ರೀತಿ ಅಧ್ಯಾತ್ಮ ಮತ್ತು ಅಧಿದೈವ ಈ ಎರಡರ ಉಪದೇಶವಿರುವದು.

(೨) ಆ ಬ್ರಹ್ಮವು (ಮನಸ್ಸು) ನಾಲ್ಕು ಪಾದಗಳುಳ್ಳದ್ದು. ಹೇಗಂದರೆ, ವಾಣಿ, ಪ್ರಾಣ, ಚಕ್ಷು, ಶ್ರೋತ್ರ ಇವು ಅದರ ನಾಲ್ಕು ಪಾದಗಳು. ಇದು ಅಧ್ಯಾತ್ಮವು. ಇನ್ನು ಅಧಿದೈವತವು. ಅಗ್ನಿ, ವಾಯು, ಆದಿತ್ಯ, ದಿಕ್ಕು ಇವು ಆದರ ನಾಲ್ಕು ಪಾದಗಳು. ಈ ರೀತಿ ಅಧ್ಯಾತ್ಮ ಮತ್ತು ಅಧಿದೈವ ಈ ಎರಡರ ಉಪದೇಶವಿರುವದು.

(೩) ವಾಣಿಯೇ ಬ್ರಹ್ಮನ ಚತುರ್ಥ ಪಾದವು. ಅದು ಅಗ್ನಿ ಎಂಬ ಜ್ಯೋತಿಯಿಂದ ಬೆಳಗುವದು ಮತ್ತು ಕಾಯುವದು. ಇದನ್ನರಿತವನು ಕೀರ್ತಿ, ಯಶಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ ಬೆಳಗುವನು ಮತ್ತು ಉತ್ಸಾಹಿತ-ನಾಗುವನು.

(೪) ಪ್ರಾಣವೇ ಬ್ರಹ್ಮನ ಚತುರ್ಥ ಪಾದವು. ಅದು ವಾಯು ಎಂಬ ಜ್ಯೋತಿಯಿಂದ ಪ್ರಕಾಶಿಸುವದು ಮತ್ತು ಕಾಯುವದು. ಇದನ್ನರಿತವನು ಕೀರ್ತಿ, ಯಶಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ ಬೆಳಗುವನು ಮತ್ತು ಉತ್ಸಾಹವುಳ್ಳವನಾಗುವನು.

ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೫ ॥

ಶ್ರೋತ್ರಮೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ದಿಗ್ಭಿರ್ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೬ ॥

॥ ಇತ್ಯಷ್ಟಾದಶಃ ಖಂಡಃ ॥

(೫) ಚಕ್ಷುವೆ ಬ್ರಹ್ಮನ ಚತುರ್ಥ ಪಾದವು. ಅದು ಆದಿತ್ಯವೆಂಬ ಜ್ಯೋತಿಯಿಂದ ಬೆಳಗುವದು ಮತ್ತು ಕಾಯುವದು. ಇದನ್ನರಿತವನು, ಕೀರ್ತಿ, ಯಶಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ ಬೆಳಗುವನು ಮತ್ತು ಉತ್ಸಾಹಿತನಾಗುವನು.

(೬) ಶ್ರೋತ್ರವೆ ಬ್ರಹ್ಮನ ಚತುರ್ಥ ಪಾದವು. ಅದು ದಿಕ್ಕುಗಳೆಂಬ ಜ್ಯೋತಿಯಿಂದ ಪ್ರಕಾಶಿಸುವದು ಮತ್ತು ಕಾಯುವದು. ಇದನ್ನರಿತವನು ಕೀರ್ತಿ, ಯಶಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ ಬೆಳಗುವನು ಮತ್ತು ಉತ್ಸಾಹಗೊಳ್ಳುವನು.

೧೮ ನೆಯ ಖಂಡವು ಸಮಾಪ್ತವು

ಆದಿತ್ಯೋ ಬ್ರಹ್ಮೇತ್ಯಾದೇಶಸ್ತಸ್ಯೋಪವ್ಯಾಖ್ಯಾನಮಸದೇವೇದಮಗ್ರ ಆಸೀತ್ತತ್ಸದಾಸೀತ್ತತ್ಸಮಭವತ್ತದಾಂಡಂ ನಿರವರ್ತತ ತತ್ಸಂವತ್ಸರಸ್ಯ ಮಾತ್ರಾಮಶಯತ ತನ್ನಿರಭಿದ್ಯತ ತೇ ಆಂಡಕಪಾಲೇ ರಜತಂ ಚ ಸುವರ್ಣಂ ಚಾಭವತಾಂ ॥ ೧ ॥

(೧) ಆದಿತ್ಯನು ಬ್ರಹ್ಮನು ಎಂದು ಉಪದೇಶವಿರುವದು. ಅದರ ಬಗ್ಗೆ ಇಲ್ಲಿ ವ್ಯಾಖ್ಯಾನವಿರುವದು. ಮೊಟ್ಟ ಮೊದಲು ಅಸತ್ತೇ ( ಗೋಚರವಾಗುವಂತಹದೇನೂ ಇಲ್ಲದ ಸ್ಥಿತಿ) ಇತ್ತು. ಅದು ಸತ್ ( ಸೃಷ್ಟಿಯ ಅತ್ಯಂತ ಮೂಲ ಸ್ಥಿತಿ) ಆಯಿತು. ಅದಕ್ಕೆ ಅಂಕುರವು ಮೊಳೆಯಿತು. ಅದರಿಂದ ಅಂಡವು ( ತತ್ತಿ ) ಹೊರಬಿದ್ದಿತು. ಅದು ಒಂದು ವರ್ಷ ಹಾಗೆಯೆ ಉಳಿಯಿತು. ಬಳಿಕ ಅದು ಒಡೆದು ಅದರಲ್ಲಿ ಬೆಳ್ಳಿ ಮತ್ತು ಬಂಗಾರದ ಎರಡು ಹೋಳುಗಳಾದವು.

ತದ್ಯದ್ರಜತಂ ಸೇಯಂ ಪೃಥಿವೀ ಯತ್ಸುವರ್ಣಂ ಸಾ ದ್ಯೌರ್ಯಜ್ಜರಾಯು ತೇ ಪರ್ವತಾ ಯದುಲ್ಬಂ ಸ ಮೇಘೋ ನೀಹಾರೋ ಯಾ ಧಮನಯಸ್ತಾ ನದ್ಯೋ ಯದ್ವಾಸ್ತೇಯಮುದಕಂ ಸ ಸಮುದ್ರಃ || ೨ ||

ಅಥ ಯತ್ತದಜಾಯತ ಸೋಽಸಾವಾದಿತ್ಯಸ್ತಂ ಜಾಯಮಾನಂ ಘೋಷಾ ಉಲೂಲವೋಽನೂತ್ತಿಷ್ಠಂತಿ ಸರ್ವಾಣಿ ಚ ಭೂತಾನಿ ಚ ಸರ್ವೇ ಚ ಕಾಮಾಸ್ತಸ್ಮಾತ್ತಸ್ಯೋದಯಂ ಪ್ರತಿ ಪ್ರತ್ಯಾಯನಂ ಪ್ರತಿ ಘೋಷಾ ಉಲೂಲವೋಽನೂದತಿಷ್ಠಂತಿ ಸರ್ವಾಣಿ ಚ ಭೂತಾನಿ ಸರ್ವೇ ಚೈವ ಕಾಮಾಃ || ೩ ||

ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್ || ೪ ||

|| ಇತ್ಯೇಕೋನವಿಂಶಃ ಖಂಡಃ ||

ಇತಿ ತೃತೀಯಃ ಪ್ರಪಾಠಕಃ

( ೨ ) ಅದರಲ್ಲಿಯ ಬೆಳ್ಳಿಯ ಭಾಗವೆ ಪೃಥಿವಿಯು ಮತ್ತು ಬಂಗಾರದ ಭಾಗವೆ ದ್ಯುಲೋಕವು. ಆದರ ಸ್ಥೂಲ ಗರ್ಭವೇಷ್ಟನವು ಪರ್ವತಗಳು, ಸೂಕ್ಷ್ಮ ಗರ್ಭವೇಷ್ಟನವು ಉಗಿಯಿಂದೊಡಗೂಡಿದ ಮೇಘಗಳು, ಆದರ ರಕ್ತವಾಹಿನಿಗಳೇ ನದಿಗಳು ಮತ್ತು ಅದರ ಬಸ್ತಿಯಲ್ಲಿಯ ನೀರೇ ಸಮುದ್ರವು.

( ೩ ) ಇನ್ನು ಅದರಲ್ಲಿ ಉತ್ಪನ್ನವಾದವನು ಆದಿತ್ಯನು. ಅವನು ಹುಟ್ಟು-ವಾಗ ಧೀರ್ಘ ಶಬ್ದಯುಕ್ತ ಘೋಷವಾಗುವದು ಮತ್ತು ಸರ್ವ ಭೂತಗಳು ಕಾಮುಗಳು ಉತ್ಪನ್ನವಾಗುವವು. ಆದುದರಿಂದ ಆದಿತ್ಯನು ಹುಟ್ಟುವ ಕಾಲಕ್ಕೆ ಮತ್ತು ಅಸ್ತಹೊಂದುವ ಕಾಲಕ್ಕೆ ಪ್ರತಿದಿವಸ ದೀರ್ಘಶಬ್ದವಾಗುವದು ಹಾಗೂ ಸರ್ವಭೂತಗಳೂ ಕಾಮುಗಳೂ ಅವನು ಹುಟ್ಟಿದ ಬಳಿಕ ಹುಟ್ಟುವವು.

( ೪ ) ಇದನ್ನರಿತವನು ಯಾವನು ಆದಿತ್ಯನು ಬ್ರಹ್ಮನೆಂಬ ಭಾವನೆಯಿಂದ ಉಪಾಸಿಸುವನೊ ಅವನ ಬಳಿಗೆ ಒಳ್ಳೇ ಶುಭ ಘೋಷಗಳು ಬರುವವು ಮತ್ತು ಅವನಿಗೆ ಸುಖವನ್ನು ಕೊಡುವವು, ಸುಖವನ್ನು ಕೊಡುವವು.

೧೯ ನೆಯ ಖಂಡವು ಸಮಾಪ್ತವು

೩ ನೆಯ ಅಧ್ಯಾಯವು ಸಮಾಪ್ತವು

# ೪ ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ನಾಲ್ಕು ಚಿಕ್ಕ ಕಥೆಗಳಿರುವವು. ಆ ಕಥೆಗಳ ಮುಖಾಂತರ ಉಪನಿಷತ್ಕಾರರು ಜ್ಞಾನವನ್ನು ಉಪದೇಶಿಸುವರು. ಮೊದಲಿನ ಎರಡು ಖಂಡಗಳಲ್ಲಿ ಜಾನಶ್ರುತಿ ಅರಸ ಮತ್ತು "ಭಂಡಿಯ" ರೈಕ್ವ ಇವರ ಕಥೆ ಇರುವದು. ೩ ನೆಯ ಖಂಡದ ಮೊದಲಿನ ನಾಲ್ಕು ಮಂತ್ರಗಳಲ್ಲಿ ರೈಕ್ವನು ಹೇಳಿದ ವಿದ್ಯೆ ಇರುವದು. ಜಾನಶ್ರುತಿ ಅರಸನು ಅನೇಕ ಪುಣ್ಯಕರ್ಮಗಳನ್ನೂ, ದಾನಧರ್ಮಾದಿಗಳನ್ನೂ, ಅನ್ನ-ಸಂತರ್ಪಣೆಯನ್ನೂ ಮಾಡುವವನಾದುದರಿಂದ ಅವನ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತ್ತು. ಆದರೆ "ಭಂಡಿಯ" ರೈಕ್ವನು ಜ್ಞಾನಿಯಿರುವದರಿಂದ ಅವನು ಎಲ್ಲಕ್ಕೂ ಹೆಚ್ಚಿನವನು ಎಂಬ ಮಾತನ್ನು ಕೇಳಿ, ಅವನನ್ನು ಹುಡುಕಿಸಿ, ಅವನಿಗೆ ಆಕಳು, ಚಿನ್ನ, ತನ್ನ ಮಗಳು ಇಷ್ಟು ದಾನವನ್ನು ಮಾಡಿ ಅರಸನು ಅವನಿಂದ ವಿದ್ಯೆಯನ್ನು ಪಡೆದನು. ವಾಯುವೇ ಆಧಿದೈವಿಕ ಸಂವರ್ಗವು (ಪರಾಯಣವು), ಪ್ರಾಣವೆ ಆಧ್ಯಾತ್ಮಿಕ ಸಂವರ್ಗವು. ಹೀಗೆ ಇವೆರಡು ಸಂವರ್ಗಗಳು, ಎಂಬುದೆ ಆ ವಿದ್ಯೆಯು.

ಮುಂದೆ ೩ನೆಯ ಖಂಡದಲ್ಲಿ, ಎಲ್ಲೆಲ್ಲಿಯೂ ಪ್ರಜಾಪತಿಯು ವ್ಯಾಪ್ತನಿರುವದರಿಂದ ಅನ್ನ ಬೇಡಿದವನಿಗೆ ನೀಡದೆ ಕಳಿಸಬಾರದು ಎಂಬ ಬಗ್ಗೆ ಶೌನಕ, ಅಭಿಪ್ರತಾರಿ ಮತ್ತು ಭಿಕ್ಷೆ ಬೇಡಲು ಬಂದ ಒಬ್ಬ ಬ್ರಹ್ಮಚಾರಿ ಇವರ ಕಥೆ ಇರುವದು. ಪ್ರಜಾ-ಪತಿಯು ಅನಂತ ರೂಪದಿಂದ ಎಲ್ಲೆಲ್ಲಿಯೂ ವಾಸಮಾಡುವನು. ಅವನಿಗೆ ಅನ್ನವನ್ನು ಸಲ್ಲಿಸುವದು ಎಲ್ಲರ ಕರ್ತವ್ಯವು ಎಂದು ಆ ಬ್ರಹ್ಮಚಾರಿಯು ಶೌನಕ, ಅಭಿಪ್ರತಾರಿ-ಗಳಿಗೆ ಹೇಳುವನು. ಆಗ ಅಹುದು, ಪ್ರಜಾಪತಿಯು ದೇವತೆಗಳ ಆತ್ಮನು. ಅವನಿಗೆ ಅನ್ನವನ್ನು ನೀಡಲಿಕ್ಕೆಬೇಕು, ಎಂದು ಬ್ರಹ್ಮಚಾರಿಗೆ ಭಿಕ್ಷೆ ನೀಡುವರು.

೪-೮ ಈ ಖಂಡಗಳಲ್ಲಿ ಸತ್ಯಕಾಮ ಜಾಬಾಲನ ಕಥೆ ಇರುವದು. ಅವನು ಓರ್ವ ಪರಿಚಾರಿಕೆಯ ಮಗನಾದುದರಿಂದ ಅವನ ತಾಯಿಗೆ ಸಹ ಅವನ ನಿಜವಾದ ಗೋತ್ರವು ಗೊತ್ತಿರಲಿಲ್ಲ. ಗುರುಗಳಿಗೆ ಅವನು ನಿಜವಾದ ಮಾತನ್ನು ಹೇಳಲು, 'ನೀನು ಸತ್ಯ ನುಡಿದಿರುವದರಿಂದ ಬ್ರಾಹ್ಮಣನೇ ಇರಲಿಕ್ಕೆಬೇಕು' ಎಂದು ಅವನಿಗೆ ದೀಕ್ಷೆ ಕೊಟ್ಟು ಆಕಳುಗಳನ್ನು ಕಾಯಲಿಕ್ಕೆ ಕಳಿಸುವನು. ಆಗ ಅರಣ್ಯದಲ್ಲಿ ಅವನಿಗೆ ವೃಷಭ, ಅಗ್ನಿ, ಹಂಗ, ಮದ್ಗು ಎಂಬ ಪಕ್ಷಿ ಇವು ಬ್ರಹ್ಮನ ಜ್ಞಾನವನ್ನು ಹೇಳುವವು. ನಾಲ್ಕು ದಿಕ್ಕುಗಳು, ಪೃಥಿವಿ, ದ್ಯುಲೋಕ, ಅಂತರಿಕ್ಷ, ಸಮುದ್ರ, ಅಗ್ನಿ, ಸೂರ್ಯ, ಚಂದ್ರ, ವಿದ್ಯುತ್, ಪ್ರಾಣ, ಚಕ್ಷು, ಶ್ರೋತ್ರ, ಮನ ಇವೇ ಬ್ರಹ್ಮನ ಹದಿನಾರು ಕಲೆ-ಗಳು; ಇವುಗಳಲ್ಲಿ ನಾಲ್ಕು ನಾಲ್ಕು ಕೂಡಿ ಕ್ರಮವಾಗಿ ಬ್ರಹ್ಮನ ಒಂದೊಂದು ಪಾದವು; ಆ ಒಂದೊಂದು ಪಾದದ ಹೆಸರು ಪ್ರಕಾಶವಾನ್, ಅನಂತವಾನ್, ಜ್ಯೋತಿಷ್ಮಾನ್, ಆಯತನವಾನ್ ಹೀಗೆ ಇರುವವು, ಎಂದು ಅವರು ಉಪದೇಶಮಾಡುವರು. ಅದನ್ನೆಲ್ಲ ಕೇಳಿಕೊಂಡ ಸತ್ಯಕಾಮನನ್ನು ನೋಡಿ ಗುರುವು, "ನೀನು ಬ್ರಹ್ಮಜ್ಞನಂತೆ ಕಾಣುವಿ"

ಎನ್ನುವನು. “ಇಲ್ಲ, ನಿಮ್ಮ ಬಾಯಿಯಿಂದಲೇ ಜ್ಞಾನವನ್ನು ಕೇಳಬೇಕಾಗಿದೆ” ಎಂದು ಪ್ರಾರ್ಥಿಸಿ ಅದೇ ವಿದ್ಯೆಯನ್ನು ಸಂಕಲಿತವಾಗಿ ಗುರುಮುಖದಿಂದ ಕೇಳಿ ಕೃತಾರ್ಥನಾಗುವನು.

೯–೧೫ ಈ ಖಂಡಗಳಲ್ಲಿ ಉಪಕೋಸಲನ ಕಥೆ ಇರುವದು. ಇದರಲ್ಲಿ ಉಪ-ಕೋಸಲನು ಉಪವಾಸ ವ್ರತವನ್ನು ಸ್ವೀಕರಿಸಿ ಗಾರ್ಹಪತ್ಯಾದಿ ಅಗ್ನಿಗಳಿಂದ ವಿದ್ಯೆಯನ್ನು ಪಡೆಯುವನು. ಎಲ್ಲ ಅಗ್ನಿಗಳು ಕೂಡಿ ಮೊದಲು ಪ್ರಾಣವು, ಆಕಾಶಸ್ಥ (ಅತೀಂದ್ರಿಯ) ಆನಂದವು ಬ್ರಹ್ಮವೆಂದು ಹೇಳುವವು. ಬಳಿಕ ಗಾರ್ಹಪತ್ಯಾದಿ ಅಗ್ನಿಗಳು ಪ್ರತ್ಯೇಕವಾಗಿ ಆದಿತ್ಯ, ಚಂದ್ರ, ವಿದ್ಯುತ್ತು ಇವುಗಳಲ್ಲಿದ್ದ ಪುರುಷರೇ ನಾವು ಎಂದು ಹೇಳುವವು. ಮುಂದೆ ಪ್ರವಾಸಕ್ಕೆ ಹೋದ ಗುರುವು ತಿರುಗಿ ಬಂದು, “ಉಪಕೋಸಲನೇ, ನಿನಗೆ ಬ್ರಹ್ಮಜ್ಞಾನವಾದಂತೆ ತೋರುವದು” ಎನ್ನುವನು. ಆಗ, “ನಿಮ್ಮ ಹೊರತು ನನಗೆ ಜ್ಞಾನವನ್ನು ಯಾರು ಹೇಳಬೇಕು?” ಎನ್ನುವನು. ಆಗ ಅಗ್ನಿಗಳು ಈತನಿಗೆ ಜ್ಞಾನವನ್ನು ಕೊಟ್ಟಿರುವವು. ಅದನ್ನು ಪೂರ್ಣಗೊಳಿಸ-ಬೇಕು, ಎಂದು ಕಣ್ಣುಗಳಲ್ಲಿ ಕಾಣುವ ಪುರುಷನೆ ಆತ್ಮನು, ಎಂದು ಗುರುವು ಉಪದೇಶಮಾಡುವನು.

೧೬–೧೭ ಈ ಖಂಡಗಳಲ್ಲಿ, ಯಜ್ಞದಲ್ಲಿ ಉಂಟಾಗುವ ಕ್ಷತದೋಷಗಳನ್ನು ಹೇಗೆ ನಿರಾಕರಿಸಬೇಕು, ಎಂಬ ಬಗ್ಗೆ ವಿಚಾರವಿದೆ. ಬ್ರಹ್ಮ ಎಂಬ ಋತ್ವಿಜನು ಸರ್ವ ವೇದಗಳನ್ನರಿತವನೂ ಯಜ್ಞಕರ್ಮಗಳಲ್ಲಿ ಉಂಟಾಗುವ ಸಕಲ ದೋಷ ಪರಿಹಾರಕನೂ ಇರತಕ್ಕದ್ದು. ಇಂಥವನನ್ನು ನೋಡಿಯೆ ಆ ಕರ್ಮವನ್ನು ಮಾಡಲು ನೇಮಿಸಬೇಕು. ಅಂದರೆ ಅವನು ಯಜ್ಞಕರ್ಮವನ್ನು ಸುಸೂತ್ರ ಸಾಂಗಗೊಳಿಸಿ ಉತ್ತಮ ಫಲಗಳನ್ನು ಯಜಮಾನನಿಗೆ ಕೊಡಿಸುವನು, ಎಂದು ಉಪನಿಷತ್ಕಾರರು ಹೇಳುವರು. ಇಲ್ಲಿಗೆ ೪ ನೆಯ ಅಧ್ಯಾಯವು ಮುಗಿಯುವದು.

## ಅಥ ಚತುರ್ಥೋಽಧ್ಯಾಯಃ

ಓಂ ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ
ಬಹುಪಾಕ್ಯ ಆಸ ಸ ಹ ಸರ್ವತ ಆವಸಥಾನ್ಮಾಪಯಾಂಚಕ್ರೇ
ಸರ್ವತ ಏವ ಮೇಽನ್ಸ್ಯಂತೀತಿ ॥ ೧ ॥

(೧) ಓಂ, ಜಾನಶ್ರುತಿ (ಅರಸನ ಹೆಸರು) ಪೌತ್ರಾಯಣನು (ಜಾನ-ಶ್ರುತನ ಮೊಮ್ಮಗನು) ಬಹಳ ದಾನಶೂರನೂ ಶ್ರದ್ಧೆಯಿಂದ ಕೊಡುವವನೂ ಅನ್ನದಾನಿಯೂ ಇದ್ದನು. ಎಲ್ಲೆಲ್ಲಿಯೂ ತಾನು ದಾನಮಾಡಿದ ಅನ್ನವನ್ನೆ

ಅಥ ಹ ಹಂಸಾ ನಿಶಾಯಾಮತಿಪೇತುಸ್ತದ್ಧೈವಂ ಹಂಸೋ ಹಂಸಮ-
ಭ್ಯುವಾದ ಹೋ ಹೋಽಯಿ ಭಲ್ಲಾಕ್ಷ ಭಲ್ಲಾಕ್ಷ ಜಾನಶ್ರುತೇಃ
ಪೌತ್ರಾಯಣಸ್ಯ ಸಮಂ ದಿವಾ ಜ್ಯೋತಿರಾತತಂ ತನ್ಮಾಪ್ರಸಾಂಕ್ಷೀ-
ಸ್ತತ್ತ್ವಾ ಮಾ ಪ್ರಧಾಕ್ಷೀದಿತಿ || ೨ ||

ತಮು ಹ ಪರಃ ಪ್ರತ್ಯುವಾಚ ಕಂಬರ ಏನಮೇತತ್ಸಂತಂ ಸಯುಗ್ವಾನ-
ಮಿವ ರೈಕ್ವಮಾತ್ಥೇತಿ ಯೋ ನು ಕಥಂ ಸಯುಗ್ವಾ ರೈಕ್ವ ಇತಿ || ೩ ||

ಯಥಾ ಕೃತಾಯವಿಜಿತಾಯಾಧರೇಯಾಃ ಸಂಯಂತ್ಯೇವಮೇನಂ
ಸರ್ವಂ ತದಭಿಸಮೇತಿ ಯತ್ಕಿಂಚ ಪ್ರಜಾಃ ಸಾಧು ಕುರ್ವಂತಿ ಯಸ್ತ-
ದ್ವೇದ ಯತ್ಸ ವೇದ ಸ ಮಯೈತದುಕ್ತ ಇತಿ || ೪ ||

ಯದು ಹ ಜಾನಶ್ರುತಿಃ ಪೌತ್ರಾಯಣ ಉಪಶುಶ್ರಾವ ಸ ಹ ಸಂಜಿಹಾನ
ಏವ ಕ್ಷತ್ತಾರಮುವಾಚಾಂಗಾರೇ ಹ ಸಯುಗ್ವಾನಮಿವ ರೈಕ್ವಮಾ-
ತ್ಥೇತಿ ಯೋ ನು ಕಥಂ ಸಯುಗ್ವಾ ರೈಕ್ವ ಇತಿ || ೫ ||

ಜನರು ಉಣ್ಣಬೇಕು ಎಂಬ ಭಾವನೆಯಿಂದ ಅವನು ಎಲ್ಲಕಡೆಗೂ ಧರ್ಮಶಾಲೆ ಮತ್ತು ಅನ್ನ ಸತ್ರಗಳನ್ನು ಕಟ್ಟಿಸಿದನು.

(೨) ಒಂದು ದಿನ ರಾತ್ರಿ ಎರಡು ಹಂಸ ಪಕ್ಷಿಗಳು ಅವನೆದುರಿನಿಂದ ಹಾರಿ ಹೋಗುತ್ತಿದ್ದವು. ಆಗ ಒಂದು ಎರಡನೆಯದಕ್ಕೆ ಅಂದುದ್ದು, 'ಹೇ ಭಲ್ಲಾಕ್ಷನೇ (ಮಂದ ದೃಷ್ಟಿಯುಳ್ಳವನೇ), ದ್ಯುಲೋಕದ ಜ್ಯೋತಿಯಂತೆ ಜಾನಶ್ರುತಿ ಪೌತ್ರಾಯಣನ ತೇಜಸ್ಸು ಹಬ್ಬಿರುವದು. ಅದನ್ನು ಮುಟ್ಟ ಬೇಡ. ಅದು ನಿನ್ನನ್ನು ಸುಟ್ಟುಬಿಡುವದು (ಎಚ್ಚರಿಕೆ)'.

(೩) ಇನ್ನೊಂದು ಹಂಸವು ಕೇಳಿದ್ದು, 'ಹುಚ್ಚಾ, ಇವನಲ್ಲಿ ಅದಾವ ದೊಡ್ಡಸ್ತಿಕೆ ಇರುವದು, ಭಂಡಿಯ ರೈಕ್ವನಂತಹದು, ಎಂದು ನೀನು ಹೀಗೆ ಅನ್ನುವಿ?' ಇದನ್ನು ಕೇಳಿ, 'ಆ ಭಂಡಿಯ ರೈಕ್ವನು ಯಾರು?' ಎಂದು ಮತ್ತೊಂದು ಹಂಸವು ಕೇಳಿತು,

(೪) "ಜೂಜಿನಲ್ಲಿ 'ಕೃತ' ಎಂಬುದನ್ನು ಗೆದ್ದವನು ಮಿಕ್ಕವರು ಗೆದ್ದುದ ನ್ನೆಲ್ಲ ಗೆಲ್ಲುವಂತೆ ಪ್ರಜೆಗಳು ಮಾಡುವ ಪುಣ್ಯವನ್ನೆಲ್ಲ ರೈಕ್ವನು ಸೆಳೆದುಕೊಳ್ಳು ವನು. ಅವನಿಗಿದ್ದ ಜ್ಞಾನವು ಯಾವನಿಗೆ ಇರುವದೊ ಅವನು ಜ್ಞಾನಿಯೆನಿಸು ವನು. ನಾನು ಹೀಗೆ ಹೇಳುವೆನು," ಎಂದು ಮೊದಲಿನ ಹಂಸವು ಅಂದಿತು.

ಯಥಾ ಕೃತಾಯವಿಜಿತಾಯಾಧರೇಯಾಃ ಸಂಯಂತ್ಯೇವಮೇನಂ
ಸರ್ವಂ ತದಭಿಸಮೇತಿ ಯತ್ಕಿಂಚ ಪ್ರಜಾಃ ಸಾಧು ಕುರ್ವಂತಿ
ಯಸ್ತದ್ವೇದ ಯತ್ಸ ವೇದ ಸ ಮಯೈತದುಕ್ತ ಇತಿ ॥ ೬ ॥

ಸ ಹ ಕ್ಷತ್ತಾನ್ವಿಷ್ಯ ನಾವಿದಮಿತಿ ಪ್ರತ್ಯೇಯಾಯ ತಂ ಹೋವಾಚ
ಯತ್ರಾರೇ ಬ್ರಾಹ್ಮಣಸ್ಯಾನ್ವೇಷಣಾ ತದೇನಮರ್ಚ್ಛೇತಿ ॥ ೭ ॥

ಸೋಽಧಸ್ತಾಚ್ಛಕಟಸ್ಯ ಪಾಮಾನಂ ಕಷಮಾಣಮುಪೋಪವಿವೇಶ ತಂ
ಹಾಭ್ಯುವಾದ ತ್ವಂ ನು ಭಗವಃ ಸಯುಗ್ವಾ ರೈಕ್ವ ಇತ್ಯಹಂ-
ಹ್ಯರಾ೩ ಇತಿ ಹ ಪ್ರತಿಜಜ್ಞೇ ಸ ಹ ಕ್ಷತ್ತಾಽವಿದಮಿತಿ ಪ್ರತ್ಯೇಯಾಯ ॥ ೮ ॥

॥ ಇತಿ ಪ್ರಥಮಃ ಖಂಡಃ ॥

(೫) ಈ ಸಂಭಾಷಣವನ್ನು ಜಾನಶ್ರುತಿಯು ಕೇಳಿದನು. ಮಲಗಿ ಎದ್ದೊಡನೆ ಅವನು ತನ್ನ ಬಂದಿಗೆ ಅಂದದ್ದು, 'ಹೇ ವತ್ಸನೇ, ನನ್ನನ್ನು ನೀನು ಸಯುಗ್ವ (ಭಂಡಿಯ ಸಹಿತ ಇರುವ) ರೈಕ್ವನಂತೆ ಏಕೆ ಹೊಗಳುವಿ ?' ಇದನ್ನು ಕೇಳಿ ಬಂದಿಯು ಅಂದದ್ದು, 'ಆ ರೈಕ್ವನೆಂಬವನು ಎಂಥವನಿರುವನು ?'

(೬) ಅರಸನು ಅಂದದ್ದು, "ಜೂಜಿನಲ್ಲಿ 'ಕೃತ' ಎಂಬುದನ್ನು ಗೆದ್ದವನು ಮಿಕ್ಕವರು ಗೆದ್ದುದನ್ನೆಲ್ಲ ಗೆಲ್ಲುವಂತೆ ಪ್ರಜೆಗಳು ಮಾಡುವ ಪುಣ್ಯ-ವನ್ನೆಲ್ಲ ರೈಕ್ವನು ಸೆಳೆದು ಕೊಳ್ಳುವನು. ಅವನಿಗಿದ್ದ ಜ್ಞಾನವು ಯಾವನಿಗಿರುವದೊ ಅವನು ಜ್ಞಾನಿಯೆನಿಸುವನು, ಎಂದು ನಾನು ಹೇಳುವೆನು."

(೭) (ಅರಸನ ಅಪ್ಪಣೆಯ ಮೇರೆಗೆ) ಆ ಬಂದಿಯು ರೈಕ್ವನನ್ನು ಹುಡುಕಿ 'ಅವನು ನನಗೆ ಎಲ್ಲಿಯೂ ದೊರೆಯಲೊಲ್ಲನು', ಎನ್ನುತ್ತ ತಿರುಗಿ ಬಂದನು. ಆರಸನು ಆ ಬಂದಿಗೆ ಅಂದದ್ದು, 'ಬ್ರಹ್ಮಜ್ಞಾನಿಗಳು ದೊರೆಯುವ ಸ್ಥಾನದಲ್ಲಿ ಹೋಗಿ ಅವನನ್ನು ಹುಡುಕು.'

(೮) ಭಂಡಿಯ ಕೆಳಗೆ ಹುರುಕು ಕೆರೆಯುತ್ತ ಕುಳಿತಿರುವವನ (ರೈಕ್ವನ) ಬಳಿಗೆ ಹೋಗಿ ಆ ಬಂದಿಯು ಕೇಳಿದ್ದೇನಂದರೆ, 'ಭಗವನ್, ಸಯುಗ್ವ ರೈಕ್ವರೆಂಬುವರು ನೀವೆ ಅಲ್ಲವೇ ?' 'ಅಹುದು, ನಾನೇ ಅವನು. ಯಾಕೆ ?' ಎಂದು ಕೇಳಿದನು. 'ತಿಳಿಯಿತು', ಎಂದು ಆ ಬಂದಿಯು ತಿರುಗಿ ಅರಸನ ಬಳಿಗೆ ಬಂದನು.

೧ ನೆಯ ಖಂಡವು ಸಮಾಪ್ತವು

ತದು ಹ ಜಾನಶ್ರುತಿಃ ಪೌತ್ರಾಯಣಃ ಷಟ್ ಶತಾನಿ ಗವಾಂ ನಿಷ್ಕಮ-
ಶ್ವತರೀರಥಂ ತದಾದಾಯ ಪ್ರತಿಚಕ್ರಮೇ ತಁ ಹಾಭ್ಯುವಾದ ॥ ೧ ॥

ರೈಕ್ವೇಮಾನಿ ಷಟ್ ಶತಾನಿ ಗವಾಮಯಂ ನಿಷ್ಕೋಽಯಮಶ್ವತರೀರ-
ಥೋ ನು ಮ ಏತಾಂ ಭಗವೋ ದೇವತಾಁ ಶಾಧಿ ಯಾಂ ದೇವತಾ-
ಮುಪಾಸ್ಸ ಇತಿ ॥ ೨ ॥

ತಮು ಹ ಪರಃ ಪ್ರತ್ಯುವಾಚಾಹ ಹಾರೇ ತ್ವಾ ಶೂದ್ರ ತವೈವ ಸಹ
ಗೋಭಿರಸ್ತ್ವಿತಿ ತದು ಹ ಪುನರೇವ ಜಾನಶ್ರುತಿಃ ಪೌತ್ರಾಯಣಃ
ಸಹಸ್ರಂ ಗವಾಂ ನಿಷ್ಕಮಶ್ವತರೀರಥಂ ದುಹಿತರಂ ತದಾದಾಯ
ಪ್ರತಿಚಕ್ರಮೇ ॥ ೩ ॥

ತಁ ಹಾಭ್ಯುವಾದ ರೈಕ್ವೇದಁ ಸಹಸ್ರಂ ಗವಾಮಯಂ ನಿಷ್ಕೋಽಯಮ-
ಶ್ವತರೀರಥ ಇಯಂ ಜಾಯಾಽಯಂ ಗ್ರಾಮೋ ಯಸ್ಮಿನ್ನಾಸ್ಸೇಽನ್ವೇವ
ಮಾ ಭಗವಃ ಶಾಧೀತಿ ॥ ೪ ॥

(೧) (ಬಂದಿಯು ಹೇಳಿದ್ದನ್ನು ಕೇಳಿಕೊಂಡು ಜಾನಶ್ರುತಿಯು ೬೦೦ ಆಕಳು, ಕಂಠಾಭರಣ ಹೇಸರಕತ್ತೆಯ ರಥ ಇಷ್ಟು ಸಂಪತ್ತಿನೊಡನೆ ರೈಕ್ವನೆಡೆಗೆ ಹೋಗಿ ಅವನಿಗೆ ಅಂದದ್ದು,

(೨) 'ಹೇ ರೈಕ್ವನೇ, ಇವು ೬೦೦ ಆಕಳುಗಳು, ಇದು ಕಂಠಾಭರಣವು, ಇದು ರಥವು (ಇವುಗಳನ್ನು ಸ್ವೀಕರಿಸಿ) ನೀನು ಯಾವ ದೇವತೆಯನ್ನು ಉಪಾಸಿಸುವಿಯೋ ಆ ದೇವತೆಯ ಜ್ಞಾನವನ್ನು ನನಗೆ ಹೇಳು.'

(೩) ರೈಕ್ವನು ಅರಸನಿಗೆ ಉತ್ತರ ಕೊಟ್ಟದ್ದೇನಂದರೆ, 'ಎಲೈ ಶೂದ್ರನೇ, ಈ ಆಕಳು ಮುಂತಾದವು ನಿನ್ನೆಡೆಗೆಯೆ ಇರಲಿ.' ಇದನ್ನು ಕೇಳಿ ಜಾನಶ್ರುತಿಯು ಪುನಃ ಸಾವಿರ ಆಕಳು, ಕಂಠಾಭರಣ, ಕುದುರೆಯ ರಥ, ತನ್ನ ಮಗಳು ಇಷ್ಟು ಸಾಮಗ್ರಿಯನ್ನು ತೆಗೆದುಕೊಂಡು ಅವನೆಡೆಗೆ ಹೋದನು.

(೪) ಅರಸನು ಅವನಿಗೆ ಅಂದದ್ದು, 'ರೈಕ್ವನೇ ಈ ಸಾವಿರ ಆಕಳು, ಕಂಠಾಭರಣ, ಈ ರಥ ಈ ಹೆಂಡತಿ, ನೀನು ಇರುವ ಈ ಗ್ರಾಮ ಇವೆಲ್ಲ ನಿನ್ನವು. ಇವುಗಳನ್ನು ಸ್ವೀಕರಿಸಿ ನನಗೆ ಜ್ಞಾನವನ್ನುಪದೇಶಿಸು.'

ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚಾಜಹಾರೇಮಾಃ ಶೂದ್ರಾ-
ನೇನೈವ ಮುಖೇನಾಲಾಪಯಿಷ್ಯಥಾ ಇತಿ ತೇ ಹೈತೇ ರೈಕ್ವಪರ್ಣಾ-
ನಾಮ ಮಹಾವೃಷೇಷು ಯತ್ರಾಸ್ಮಾ ಉವಾಸ ತಸ್ಮೈ ಹೋವಾಚ ॥ ೫ ॥

॥ ಇತಿ ದ್ವಿತೀಯಃ ಖಂಡಃ ॥

( ೫ ) ಅರಸು ಮಗಳ ಮುಖವನ್ನೆತ್ತಿ ಆಕೆಯೆ ವಿದ್ಯೆಯ ಮುಖವೆಂದು ತಿಳಿದು, ( ಆಕೆಯನ್ನು ಕೊಟ್ಟದ್ದಕ್ಕಾಗಿ ವಿದ್ಯಾದಾನ ಮಾಡುವೆನು ಎಂದು ಅರ್ಥ ) ರೈಕ್ವನು ಅಂದದ್ದು, ' ಶೂದ್ರನೇ, ಈ ಧನವೆಲ್ಲವೂ ಇರಲಿ! ನೀನು ನಿಜವಾಗಿ ಈ ಮಗಳ ಮುಖಾಂತರವೇ ಜ್ಞಾನವನ್ನು ಬೇಡುವಿ. ' ಮಹಾವೃಷ ದೇಶದಲ್ಲಿ ಆ ಗ್ರಾಮಕ್ಕೆ ರೈಕ್ವಪರ್ಣಾ ಎಂಬ ಹೆಸರಾಯ್ತು. ಅಲ್ಲಿಯೆ ರೈಕ್ವನು ಇರುತಿದ್ದನು. ಅವನು ಅರಸನಿಗೆ ಕೆಳಗಿನಂತೆ ಅಂದನು.

೨ ನೆಯ ಖಂಡವು ಸಮಾಪ್ತವು

ವಾಯುರ್ವಾವ ಸಂವರ್ಗೋ ಯದಾ ವಾ ಅಗ್ನಿರುದ್ವಾಯತಿ ವಾಯುಮೇ-
ವಾಪ್ಯೇತಿ ಯದಾ ಸೂರ್ಯೋಽಸ್ತಮೇತಿ ವಾಯುಮೇವಾಪ್ಯೇತಿ
ಯದಾ ಚಂದ್ರೋಽಸ್ತಮೇತಿ ವಾಯುಮೇವಾಪ್ಯೇತಿ ॥ ೧ ॥

ಯದಾಪ ಉಚ್ಛುಷ್ಯಂತಿ ವಾಯುಮೇವಾಪಿಯಂತಿ ವಾಯುರ್ಹ್ಯೇವೈತಾ-
ನ್ಸರ್ವಾನ್ಸಂವೃಙ್ಕ್ತ ಇತ್ಯಧಿದೈವತಂ ॥ ೨ ॥

ಅಥಾಧ್ಯಾತ್ಮಂ ಪ್ರಾಣೋ ವಾವ ಸಂವರ್ಗಃ ಸ ಯದಾ ಸ್ವಪಿತಿ ಪ್ರಾಣ-
ಮೇವ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಂ ಶ್ರೋತ್ರಂ ಪ್ರಾಣಂ
ಮನಃ ಪ್ರಾಣೋ ಹ್ಯೇವೈತಾನ್ಸರ್ವಾನ್ಸಂವೃಙ್ಕ್ತ ಇತಿ ॥ ೩ ॥

( ೧ ) ವಾಯುವೇ ಸಂವರ್ಗವು ( ಕೊನೆಯ ಆಶ್ರಯವು ). ಅಗ್ನಿಯು ಆರಿತೆಂದರೆ ವಾಯುವನ್ನೆ ಆಶ್ರಯಿಸುವದು. ಸೂರ್ಯನು ಅಸ್ತಂಗತನಾದ ನೆಂದರೆ ವಾಯುವನ್ನೆ ಸೇರುವನು. ಚಂದ್ರನು ಅಸ್ತಹೊಂದಿದನೆಂದರೆ ವಾಯುವಿನಲ್ಲಿಯೆ ಲೀನನಾಗುವನು.

( ೨ ) ನೀರು ಆರಿತೆಂದರೆ ವಾಯುವನ್ನಾಶ್ರಯಿಸುವದು. ವಾಯುವೆ ಇವೆಲ್ಲವುಗಳನ್ನು ನುಂಗುವದು. ಇದು ಅಧಿದೈವತವು. ( ವಿಶ್ವಸ್ಥ ಶಕ್ತಿ-ಗಳನ್ನು ಕುರಿತು ).

( ೩ ) ಇನ್ನು ಅಧ್ಯಾತ್ಮವು (ಶರೀರಸ್ಥ ಶಕ್ತಿಗಳ ಆಶ್ರಯವನ್ನು ಕುರಿತು).

ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು ॥ ೪ ॥

ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಪರಿ-ವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ ತಸ್ಮಾ ಉ ಹ ನ ದದತುಃ ॥ ೫ ॥

ಸ ಹೋವಾಚ ಮಹಾತ್ಮನಶ್ಚತುರೋ ದೇವ ಏಕಃ ಕಃ ಸ ಜಗಾರ ಭುವನಸ್ಯ ಗೋಪಾಸ್ತಂ ಕಾಪೇಯ ನಾಭಿಪಶ್ಯಂತಿ ಮರ್ತ್ಯಾ ಅಭಿಪ್ರತಾರಿನ್ಬಹುಧಾ ವಸಂತಂ ಯಸ್ಮೈ ವಾ ಏತದನ್ನಂ ತಸ್ಮಾ ಏತನ್ನ ದತ್ತಮಿತಿ ॥ ೬ ॥

ತದು ಹ ಶೌನಕಃ ಕಾಪೇಯಃ ಪ್ರತಿಮನ್ವಾನಃ ಪ್ರತ್ಯೇಯಾಯಾತ್ಮಾ ದೇವಾನಾಂ ಜನಿತಾ ಪ್ರಜಾನಾꣳಹಿರಣ್ಯದꣳಷ್ಟ್ರೋ ಬಭಸೋಽನಸೂರಿ-ರ್ಮಹಾಂತಮಸ್ಯ ಮಹಿಮಾನಮಾಹುರನದ್ಯಮಾನೋ ಯದನನ್ನ-ಮತ್ತೀತಿ ವೈ ವಯಂ ಬ್ರಹ್ಮಚಾರಿನ್ನೇದಮುಪಾಸ್ಮಹೇ ದತ್ತಾಸ್ಮೈ ಭಿಕ್ಷಾಮಿತಿ ॥ ೭ ॥

ಪ್ರಾಣವೇ ಸಂವರ್ಗವು. ಮನುಷ್ಯನು ಮಲಗಿದನೆಂದರೆ ವಾಣಿ, ಕಣ್ಣು, ಕಿವಿ, ಮನ ಇವು ಪ್ರಾಣದಲ್ಲಿ ಸೇರುವವು. ಪ್ರಾಣವೆ ಇವೆಲ್ಲವುಗಳನ್ನು ನುಂಗುವದು.

(೪) ದೇವತೆಗಳಲ್ಲಿ (ವಿಶ್ವ ಶಕ್ತಿಗಳಲ್ಲಿ) ವಾಯು ಜೀವ ಶಕ್ತಿಗಳಲ್ಲಿ ಪ್ರಾಣ, ಹೀಗೆ ಇವೆರಡು ಸಂವರ್ಗಗಳು.

(೫) ಒಮ್ಮೆ ಕಪಿಗೋತ್ರದ ಶೌನಕನಿಗೆ ರಕ್ಷಸೇನಪುತ್ರನಾದ ಅಭಿ-ಪ್ರತಾರಿಗೆ (ಊಟಕ್ಕೆ ಕುಳಿತಾಗ ಅಡಿಗೆಯವನು) ಬಡಿಸುತಿದ್ದನು. ಆಗ ಬ್ರಹ್ಮಚಾರಿಯೊಬ್ಬನು ಭಿಕ್ಷೆ ಬೇಡಿದನು, ಅವರು ಅವನಿಗೆ ಭಿಕ್ಷೆ ಹಾಕಲಿಲ್ಲ.

(೬) ಬ್ರಹ್ಮಚಾರಿಯು ಅಂದದ್ದು, 'ಹೇ ಶೌನಕನೇ, (ಅಗ್ನ್ಯಾದಿ) ನಾಲ್ಕು ಮಹಾತ್ಮರನ್ನು ಯಾವನು ನುಂಗಿಬಿಟ್ಟನೊ ಆ ಭುವನಗಳ ರಕ್ಷಕ-ನನ್ನು (ಪ್ರಜಾಪತಿಯನ್ನು) ಮರ್ತ್ಯರು (ನೀವು) ಅರಿತಿರುವದಿಲ್ಲ. ಹೇ ಅಭಿಪ್ರತಾರಿನ್, ಅನಂತರೂಪದಿಂದ ವಾಸಿಸುವ ಯಾವನಿಗೆ (ಪ್ರಜಾಪತಿಗೆ) ಅನ್ನವು ಯಾವಾಗಲೂ (ಯಜ್ಞಾದಿಗಳಲ್ಲಿ) ಕೊಡಲ್ಪಡುತಿರುವದೊ ಅವನಿಗೆ ಈಗ ನೀವು ಅನ್ನವನ್ನು ಕೊಡಲಿಲ್ಲ. (ನನ್ನಲ್ಲಿರುವ ಪ್ರಜಾಪತಿಗೆ ನೀವು ಅನ್ನವನ್ನು ಕೊಡಲಿಲ್ಲ, ಎಂದು ಅರ್ಥವು)'

(೭) ಬಳಿಕ ಶೌನಕನು ವಿಚಾರಮಾಡಿ ಆ ಬ್ರಹ್ಮಚಾರಿಯ ಬಳಿಗೆ ಹೋಗಿ ಅಂದದ್ದು, 'ಅವನು (ಪ್ರಜಾಪತಿಯು) ದೇವತೆಗಳ ಆತ್ಮನು,

ತಸ್ಮಾ ಉ ಹ ದದುಸ್ತೇ ವಾ ಏತೇ ಪಂಚಾನ್ಯೇ ಪಂಚಾನ್ಯೇ ದಶ ಸಂತಸ್ತತ್ಕೃತಂ ತಸ್ಮಾತ್ಸರ್ವಾಸು ದಿಕ್ಷ್ವನ್ನಮೇವ ದಶಕೃತಙ್ ಸೈಷಾ ವಿರಾಡನ್ನಾದೀ ತಯೇದಙ್ ಸರ್ವಂ ದೃಷ್ಟಙ್ ಸರ್ವಮಸ್ಯೇದಂ ದೃಷ್ಟಂ ಭವತ್ಯನ್ನಾದೋ ಭವತಿ ಯ ಏವಂ ವೇದ ಯ ಏವಂ ವೇದ ॥ ೮ ॥

॥ ಇತಿ ತೃತೀಯಃ ಖಂಡಃ ॥

ಪ್ರಜೆಗಳನ್ನು ಹುಟ್ಟಿಸುವವನು, ಚಿನ್ನದ ಹಲ್ಲುಗಳುಳ್ಳವನು, ಎಲ್ಲವನ್ನು ತಿನ್ನುವ ಸಾಮರ್ಥ್ಯವುಳ್ಳವನು, ಮಹಾಮೇಧಾವಿಯು, ಎಂದು ಅವನ ಮಾಹಾತ್ಮ್ಯ-ವನ್ನು ಹೇಳುವರು. ಅವನನ್ನು ಯಾರೂ ಭಕ್ಷಿಸಲಾರರು. ಅವನು ಮಾತ್ರ (ಅನ್ನವನ್ನಷ್ಟೇ ಅಲ್ಲ) ಅನ್ನವಲ್ಲದ್ದನ್ನು ಸಹ ತಿಂದು ಬಿಡಬಲ್ಲನು. ಹೇ ಬ್ರಹ್ಮಚಾರಿಯೆ, ನಾವು ಅವನನ್ನು ಉಪಾಸಿಸುವೆವು. (ಹೇ ಸೇವಕನೇ) ಬ್ರಹ್ಮಚಾರಿಗೆ ಭಿಕ್ಷೆ ನೀಡು ? '

(೮) ಆಗ ಅವನಿಗೆ ಭಿಕ್ಷೆ ನೀಡಿದರು. ಆ ಐದು (ವಾಯು ಆದಿ) ಬೇರೆ, ಈ ಐದು (ಪ್ರಾಣ ಆದಿ) ಬೇರೆ, ಒಟ್ಟಿಗೆ ಹತ್ತು. ಅವು 'ಕೃತ' (ಜೂಜಿನಲ್ಲಿಯ ಕೃತ) ಇರುವವು. (ಹಿಂದಿನ ಖಂಡ ೧, ಖಂಡ ೪ ರಲ್ಲಿಯ ರೂಪಕ). ಆದುದರಿಂದ ಹತ್ತು ದಿಕ್ಕುಗಳಲ್ಲಿ ಈ ಅನ್ನವು ಇರುವದು. (ಇದು ಎಲ್ಲವು ಪ್ರಜಾಪತಿಯ ಅನ್ನವು ಎಂದು ಅರ್ಥವು). ಈ ಅನ್ನವೆ 'ಕೃತ' ಇರುವದು. ಈ ವಿರಾಟವು (ಪ್ರಜಾಪತಿಯು) ಅನ್ನ ಭಕ್ಷಕವಿರುವದು. ಸರ್ವವಸ್ತುಗಳನ್ನು ಅದು ನೋಡಬಲ್ಲದು. ಇದನ್ನರಿತವನು ಎಲ್ಲವನ್ನು ನೋಡಬಲ್ಲನು ಮತ್ತು ಚನ್ನಾಗಿ ಅನ್ನವನ್ನು ಅರಗಿಸ ಬಲ್ಲನು.

೩ ನೆಯ ಖಂಡವು ಸಮಾಪ್ತವು

ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರಮಾಮಂತ್ರಯಾಂ ಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂಗೋತ್ರೋಽಹಮಸ್ಮೀತಿ ॥ ೧ ॥

(೧) ಜಾಬಾಲ ಸತ್ಯಕಾಮನು ಗುರುವಿನೆಡೆಗೆ ಹೋಗುವದಕ್ಕಾಗಿ ತನ್ನ ತಾಯಿ ಜಬಾಲೆಯ ಅಪ್ಪಣೆಯನ್ನು ಬೇಡಿದನು. 'ತಾಯೀ, ಬ್ರಹ್ಮಚರ್ಯ ವ್ರತದಿಂದ (ಗುರುಕುಲದಲ್ಲಿ) ಇರಬೇಕೆಂದು ಇಚ್ಛಿಸುವೆನು. ನನ್ನ ಗೋತ್ರವು ಯಾವುದು ?' ಎಂದು ಕೇಳಿದನು.

ಸಾ ಹೈನಮುವಾಚ ನಾಹಮೇತದ್ವೇದ ತಾತ ಯದ್ಗೋತ್ರಸ್ತ್ವಮಸಿ ಬಹ್ವಹಂ ಚರಂತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇ-ತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸಿ ಸ ಸತ್ಯಕಾಮ ಏವ ಜಾಬಾಲೋ ಬ್ರುವೀಥಾ ಇತಿ || ೨ ||

ಸಹ ಹಾರಿದ್ರುಮತಂ ಗೌತಮಮೇತ್ಯೋವಾಚ ಬ್ರಹ್ಮಚರ್ಯಂ ಭಗವತಿ ವತ್ಸ್ಯಾಮ್ಯುಪೇಯಾಂ ಭಗವಂತಮಿತಿ || ೩ ||

ತಂ ಹೋವಾಚ ಕಿಂಗೋತ್ರೋ ನು ಸೋಮ್ಯಾಸೀತಿ ಸ ಹೋವಾಚ ನಾಹಮೇತದ್ವೇದ ಭೋ ಯದ್ಗೋತ್ರೋಽಹಮಸ್ಮ್ಯಪೃಚ್ಛಂ ಮಾತರಂ ಸಾ ಮಾ ಪ್ರತ್ಯಬ್ರವೀದ್ಬಹ್ವಹಂ ಚರಂತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸೀತಿ ಸೋಽಹಂ ಸತ್ಯಕಾಮೋ ಜಾಬಾಲೋಽಸ್ಮಿ ಭೋ ಇತಿ || ೪ ||

(೨) ಆಕೆ ಅವನಿಗೆ ಅಂದದ್ದು, 'ಮಗುವೇ, ನೀನು ಯಾವ ಗೋತ್ರದವನು ಇದನ್ನು ನಾನರಿಯೆನು. ಹರೆಯದಲ್ಲಿ ಅನೇಕ ಕಡೆಗೆ ಪರಿಚಾರಿಕೆಯ ಕೆಲಸವನ್ನು ಮಾಡುತ್ತ ತಿರುಗುವಾಗ ನಾನು ನಿನ್ನನ್ನು ಪಡೆದೆನು. ಆದುದರಿಂದ ನೀನು ಯಾವ ಗೋತ್ರದವನೆಂಬದನ್ನು ನಾನರಿಯೆನು. ನನ್ನ ಹೆಸರು ಜಬಾಲಾ ಮತ್ತು ನಿನ್ನ ಹೆಸರು ಸತ್ಯಕಾಮ ನಿನ್ನ ಹೆಸರು ಸತ್ಯಕಾಮ ಜಾಬಾಲ ಎಂದು ಹೇಳು.'

(೩) ಅವನು ಹಾರಿದ್ರುಮತ ಗೌತಮನ ಬಳಿಗೆ ಹೋಗಿ, 'ಭಗವನ್, ನಾನು ಬ್ರಹ್ಮಚರ್ಯವ್ರತದಿಂದ ಇರಬೇಕೆನ್ನುವೆನು. ತಮ್ಮಲ್ಲಿಗೆ ಶಿಷ್ಯನಾಗಿ ಬಂದಿರುವೆನು,' ಎಂದು ಅರಿಕೆ ಮಾಡಿಕೊಂಡನು.

(೪) 'ಚನ್ನನೇ, ನಿನ್ನ ಗೋತ್ರವು ಯಾವುದು ?' ಎಂದು ಗೌತಮನು ಅವನನ್ನು ಕೇಳಿದನು. ಅದಕ್ಕೆ 'ನನ್ನ ಗೋತ್ರವು ಯಾವುದು ಎಂಬದನ್ನು ನಾನರಿಯೆನು. ನಾನು ತಾಯಿಯನ್ನು ಈ ಬಗ್ಗೆ ಕೇಳಿದೆನು. ಯೌವನದಲ್ಲಿ ಅನೇಕ ಕಡೆಗೆ ಪರಿಚಾರಿಕೆಯ ಕೆಲಸವನ್ನು ಮಾಡುತ್ತ ತಿರುಗುವಾಗ ನಿನ್ನನ್ನು ಪಡೆದೆನು, ನಿನ್ನ ಗೋತ್ರವು ಯಾವುದು, ಇದನ್ನು ನಾನರಿಯೆನು. ನನ್ನ ಹೆಸರು ಜಬಾಲಾ, ನಿನ್ನ ಹೆಸರು ಸತ್ಯಕಾಮ, ಎಂದು ಆಕೆ ಉತ್ತರ

ತಂ ಹೋವಾಚ ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾ ಇತಿ ತಮುಪನೀಯ ಕೃಶಾನಾಮಬಲಾನಾಂ ಚತುಃಶತಾನಾಂ ನಿರಾಕೃತ್ಯೋವಾಚೇಮಾಃ ಸೋಮ್ಯಾನುಸಂವ್ರಜೇತಿ ತಾ ಅಭಿಪ್ರಸ್ಥಾಪಯನ್ನುವಾಚ ನಾಸಹ-ಸ್ರೇಣಾವರ್ತಯೇತಿ ಸ ಹ ವರ್ಷಗಣಂ ಪ್ರೋವಾಸ ತಾ ಯದಾ ಸಹಸ್ರಂ ಸಂಪೇದುಃ ॥ ೫ ॥

॥ ಇತಿ ಚತುರ್ಥಃ ಖಂಡಃ ॥

ಕೊಟ್ಟಳು. ಆದುದರಿಂದ ಭಗವನ್ ನಾನು ಸತ್ಯಕಾಮ ಜಾಬಾಲನು,' ಎಂದು ಹೇಳಿದನು.

(೫) ಗೌತಮನು ಅಂದದ್ದು, 'ಈ ಮಾತನ್ನು ಬ್ರಾಹ್ಮಣನಿರದವನು ಹೇಳಲಾರನು. (ಈ ಸತ್ಯವನ್ನು ಹೇಳುವುದರಿಂದ ಅವನು ಬ್ರಾಹ್ಮಣನೇ ಇರಲಿಕ್ಕೆ ಬೇಕು, ಎಂದು ಗೌತಮನ ಊಹೆ) ಚನ್ನನೇ, ಸಮಿಧೆಗಳನ್ನು ತಾ, ನಾನು ನಿನ್ನ ಉಪನಯನ ಮಾಡುವೆನು. ನೀನು ಸತ್ಯದಿಂದ ಚ್ಯುತನಾಗಲಿಲ್ಲ.' ಬಳಿಕ ಅವನ ಉಪನಯನ ಮಾಡಿ ೪೦೦ ಬಡಕ ಮತ್ತು ದುರ್ಬಲ ಆಕಳುಗಳನ್ನು ಆರಿಸಿ, 'ಚನ್ನ, ಇವುಗಳನ್ನು ಕಾಯು,' ಎಂದು ಆಜ್ಞಾಪಿಸಿದನು. ಅವುಗಳನ್ನು (ಅರಣ್ಯಕ್ಕೆ) ಹೊಡಕೊಂಡು ಹೋಗುವಾಗ ಸತ್ಯ-ಕಾಮನು ಅಂದದ್ದು, 'ಇವು ಸಾವಿರ ಆಗುವವರೆಗೆ ನಾನು ತಿರುಗಿ ಬರುವದಿಲ್ಲ.' ಅವನು ಎಷ್ಟೋ ವರ್ಷ (ಅರಣ್ಯದಲ್ಲಿ) ಇದ್ದನು, ಅವು ಒಂದು ಸಾವಿರ ಆದವು.

೪ ನೆಯ ಖಂಡವು ಸಮಾಪ್ತವು

ಅಥ ಹೈನಮೃಷಭೋಽಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿ-ಶುಶ್ರಾವ ಪ್ರಾಪ್ತಾಃ ಸೋಮ್ಯ ಸಹಸ್ರಂ ಸ್ಮಃ ಪ್ರಾಪಯ ನ ಆಚಾರ್ಯ-ಕುಲಂ

(೧) ಆಗ ಆ ಹಿಂಡಿನಲ್ಲಿಯ ವೃಷಭನು ಅವನಿಗೆ, 'ಹೇ ಸತ್ಯಕಾಮನೇ,' ಎಂದು ಸಂಬೋಧಿಸಿದನು. 'ಏನು ಭಗವನ್,' ಎಂದು ಸತ್ಯಕಾಮನು ಕೇಳಿದನು. 'ಚನ್ನನೇ, ನಾವು ಒಂದು ಸಾವಿರ ಆಗಿರುವೆವು. ನಮ್ಮನ್ನು ಆಚಾರ್ಯಕುಲಕ್ಕೆ ಸಾಗಿಸು,' ಎಂದನು.

ಬ್ರಹ್ಮಣಶ್ಚ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಚೀ ದಿಕ್ಕಲಾ ಪ್ರತೀಚೀ ದಿಕ್ಕಲಾ ದಕ್ಷಿಣಾ ದಿಕ್ಕಲೋದೀಚೀ ದಿಕ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ನಾಮ || ೨ ||

ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ ಪ್ರಕಾಶವಾನಸ್ಮಿಂಲ್ಲೋಕೇ ಭವತಿ ಪ್ರಕಾಶವತೋ ಹ ಲೋಕಾನ್ ಜಯತಿ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ || ೩ ||

|| ಇತಿ ಪಂಚಮಃ ಖಂಡಃ ||

( ೨ ) 'ನಾನು ಬ್ರಹ್ಮನ ಪಾದವನ್ನು ನಿನಗೆ ಹೇಳುವೆನು. ( ಬ್ರಹ್ಮಜ್ಞಾನದ ಭಾಗವನ್ನು ಹೇಳುವೆನು, ಎಂದು ಅರ್ಥ ),' ಎಂದು ವೃಷಭನು ಅಂದನು. 'ಭಗವನ್, ಹೇಳಬೇಕು,' ಎಂದು ಸತ್ಯಕಾಮನು ಪ್ರಾರ್ಥಿಸಿದನು. 'ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಈ ದಿಕ್ಕುಗಳು ನಾಲ್ಕು ಕಲೆಗಳು ( ಭಾಗಗಳು ) ಚನ್ನನೇ, ಇದು ನಾಲ್ಕು ಭಾಗಗಳುಳ್ಳದ್ದು, ಇದರ ಹೆಸರು ಪ್ರಕಾಶವಾನ್,' ಎಂದು ವೃಷಭನು ಹೇಳಿದನು.

( ೩ ) ಇದನ್ನರಿತವನು, ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಪ್ರಕಾಶವಾನ್ ಎಂದು ಉಪಾಸಿಸುವನು ಅವನು ಈ ಲೋಕದಲ್ಲಿ ಪ್ರಕಾಶವಂತನಾಗುವನು. ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಪ್ರಕಾಶವಾನ್ ಎಂದು ಉಪಾಸಿಸುವನೊ ಅವನು ಪ್ರಕಾಶಪೂರ್ಣ ಲೋಕಗಳನ್ನು ಗೆಲ್ಲುವನು.

೫ ನೆಯ ಖಂಡವು ಸಮಾಪ್ತವು

ಅಗ್ನಿಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ || ೧ ||

( ೧ ) 'ಅಗ್ನಿಯು ನಿನಗೆ ಬ್ರಹ್ಮಪಾದವನ್ನು ಹೆಳುವನು,' ಎಂದು ವೃಷಭನು ಹೇಳಿದನು. ಮಾರನೆಯದಿನ ಸತ್ಯಕಾಮನು ಆಕಳುಗಳನ್ನು ( ಗುರುಕುಲದ ಕಡೆಗೆ) ಸಾಗಿಸಿದನು, ಸಂಜೆಯಾದೊಡನೆ ಆಕಳುಗಳು ಒತ್ತಟ್ಟಿಗೆ

ತಮಗ್ನಿರಭ್ಯುವಾದ ಸತ್ಯಕಾಮ ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೨ ॥

ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪೃಥಿವೀ ಕಲಾಂತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋಽನಂತವಾನ್ನಾಮ ॥ ೩ ॥

ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋಽನಂತವಾನಿತ್ಯುಪಾಸ್ತೇಽನಂತವಾನಸ್ಮಿಁಲ್ಲೋಕೇ ಭವತ್ಯನಂತವತೋ ಹ ಲೋಕಾಂಜಯತಿ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋಽನಂತವಾನಿತ್ಯುಪಾಸ್ತೇ ॥ ೪ ॥

॥ ಇತಿ ಷಷ್ಠಃ ಖಂಡಃ ॥

ಕೂಡಿದ ಸ್ಥಳದಲ್ಲಿ ಅವುಗಳನ್ನು ತಡೆದು ಅಗ್ನಿಯನ್ನು ಹೊತ್ತಿಸಿ ಸಮಿಧೆಗಳನ್ನು ಸಮರ್ಪಿಸಿ ಬಳಿಕ ಅಗ್ನಿಯ ಬಳಿ ಪೂರ್ವಾಭಿಮುಖವಾಗಿ ಸತ್ಯಕಾಮನು ಕುಳಿತನು.

( ೨ ) 'ಸತ್ಯಕಾಮನೇ,' ಎಂದು ಅಗ್ನಿಯು ಅವನನ್ನು ಸಂಬೋಧಿಸಲು 'ಏನು ಭಗವನ್,' ಎಂದು ಸತ್ಯಕಾಮನು ಕೇಳಿದನು.

( ೩ ) 'ಬಹ್ಮನ ಪಾದವನ್ನು ನಾನು ನಿನಗೆ ಹೇಳುವೇನು,' ಎಂದು ಅಗ್ನಿಯು ಅನ್ನಲು ಸತ್ಯಕಾಮನು, 'ಭಗವನ್ ನನಗೆ ಹೇಳಬೇಕು,' ಎಂದು ಬೇಡಿಕೊಂಡನು. ಅವನಿಗೆ ಅಗ್ನಿಯು ಅಂದದ್ದು, 'ಪೃಥಿವಿ, ಅಂತರಿಕ್ಷ, ದ್ಯುಲೋಕ, ಸಮುದ್ರ, ಇವು ನಾಲ್ಕು ಕಲೆಗಳು. ಚನ್ನನೇ, ಇದು ನಾಲ್ಕು ಕಲೆಗಳುಳ್ಳದ್ದು ಇದರ ಹೆಸರು ಅನಂತವಾನ್, ಇಡು ಬ್ರಹ್ಮನ ಪಾದವು.

( ೪ ) ಇದನ್ನರಿತವನು ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಅನಂತವಾನ್ ಎಂದು ಉಪಾಸಿಸುವನೊ ಅವನು ಈ ಲೋಕದಲ್ಲಿ ಅನಂತವಾನ್ ಆಗುವನು. ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಅನಂತವಾನ್ ಎಂದು ಉಪಾಸಿಸುವನೊ ಅವನು ಅನಂತವಾನ್ ಲೋಕಗಳನ್ನು ಜಯಿಸುವನು.

೬ ನೆಯ ಖಂಡವು ಸಮಾಪ್ತವು

ಹꣳಸಸ್ತೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥

ತꣳ ಹꣳಸ ಉಪ ನಿಪತ್ಯಾಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೨ ॥

ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚಾಗ್ನಿಃ ಕಲಾ ಸೂರ್ಯಃ ಕಲಾ ಚಂದ್ರಃ ಕಲಾ ವಿದ್ಯುತ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋ ಜ್ಯೋತಿಷ್ಮಾನ್ನಾಮ ॥ ೩ ॥

ಸ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ಜ್ಯೋತಿಷ್ಮಾನಸ್ಮಿꣳಲ್ಲೋಕೇ ಭವತಿ ಜ್ಯೋತಿಷ್ಮತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ॥ ೪ ॥

॥ ಇತಿ ಸಪ್ತಮಃ ಖಂಡಃ ॥

(೧) ಹಂಸನು ನಿನಗೆ ಬ್ರಹ್ಮಪಾದದ ಜ್ಞಾನವನ್ನು ಹೇಳುವನು (ಎಂದು ಅಗ್ನಿಯು ಸ್ಪಷ್ಟನಾದನು). ಮಾರನೆಯ ದಿನ ಸತ್ಯಕಾಮನು ಆಕಳುಗಳನ್ನು ಎಂದಿನಂತೆ ಸಾಗಿಸಿದನು. ಸಾಯಂಕಾಲದಲ್ಲಿ ಆಕಳುಗಳೆಲ್ಲ ಒಟ್ಟುಗೂಡಲು ಅವುಗಳನ್ನು ತಡೆದು ಅಗ್ನಿಯನ್ನು ಹೊತ್ತಿಸಿ, ಅದರಲ್ಲಿ ಸಮಿಧೆಗಳನ್ನು ಸಮರ್ಪಿಸಿ, ಅದರ ಪೂರ್ವಾಭಿಮುಖನಾಗಿ ಕುಳಿತನು.

(೨) ಹಂಸನು ಅವನ ಬಳಿಗೆ ಬಂದು, 'ಸತ್ಯಕಾಮನೆ' ಎಂದು ಸಂಬೋಧಿಸಿದನು. 'ಏನು ಭಗವನ್' ಎಂದು ಸತ್ಯಕಾಮನು ಕೇಳಿದನು.

(೩) 'ಚನ್ನನೆ, ನಿನಗೆ ಬ್ರಹ್ಮಪಾದದ ಜ್ಞಾನವನ್ನು ಹೇಳುವೆನು,' ಎಂದು ಹಂಸನು ಅನ್ನಲು, 'ಹೇಳಬೇಕು, ಭಗವನ್' ಎಂದು ಸತ್ಯಕಾಮನು ಬೇಡಿಕೊಂಡನು. ಆಗ ಹಂಸನು ಅಂದದ್ದು, 'ಅಗ್ನಿ, ಸೂರ್ಯ, ಚಂದ್ರ, ವಿದ್ಯುತ್ತು, ಇವು ಕಲೆಗಳು. ಇವು ನಾಲ್ಕು ಕಲೆಗಳು. ಇದು ಜ್ಯೋತಿಷ್ಮಾನ್ ಎಂಬ ಬ್ರಹ್ಮಪಾದವು.'

(೪) ಇದನ್ನರಿತವನು ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಜ್ಯೋತಿಷ್ಮಾನ್ ಎಂದು ಉಪಾಸಿಸುವನೊ ಅವನು ಜ್ಯೋತಿಷ್ಮಾನನಾಗುವನು

ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಜ್ಯೋತಿಷ್ಮಾನ್ ಎಂದು ಉಪಾಸಿ-ಸುವನೊ ಅವನು ಜ್ಯೋತಿಷ್ಮಾನ್ ಲೋಕಗಳನ್ನು ಗೆದೆಯುವನು.

೭ ನೆಯ ಖಂಡವು ಸಮಾಪ್ತವು

ಮದ್ಗುಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪ-
ಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪ-
ಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ
ಪ್ರಾಙುಪೋಪವಿವೇಶ ॥ ೧ ॥

ತಂ ಮದ್ಗುರುಪನಿಪತ್ಯಾಭ್ಯುವಾದ ಸತ್ಯಕಾಮ ೩ ಇತಿ ಭಗವ ಇತಿ ತಂ
ಪ್ರತಿಶುಶ್ರಾವ ॥ ೨ ॥

ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ
ತಸ್ಮೈ ಹೋವಾಚ ಪ್ರಾಣಃ ಕಲಾ ಚಕ್ಷುಃ ಕಲಾ ಶ್ರೋತ್ರಂ ಕಲಾ
ಮನಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣ
ಆಯತನವಾನ್ನಾಮ ॥ ೩ ॥

(೧) 'ಮದ್ಗು ಎಂಬ ಜಲಚರ ಪಕ್ಷಿಯು ನಿನಗೆ ಬ್ರಹ್ಮಪಾದದ ಜ್ಞಾನವನ್ನು ಹೇಳುವನು' (ಎಂದು ಹಂಸನು ಸುಮ್ಮನಾದನು). ಮರುದಿವಸ ಆಕಳುಗಳನ್ನು ಹೊರಡಿಸಿದನು. ಅವು ಸಾಯಂಕಾಲದಲ್ಲಿ ಒಟ್ಟುಗೂಡಲು ಅವುಗಳನ್ನು ತಡೆದು, ಸತ್ಯಕಾಮನು, ಅಗ್ನಿಯನ್ನು ಹೊತ್ತಿಸಿ, ಅದರಲ್ಲಿ ಸಮಿಧೆಗಳನ್ನು ಹಾಕಿ, ಅದರ ಕಡೆಗೆ ಪೂರ್ವಾಭಿಮುಖನಾಗಿ ಕುಳಿತನು.

(೨) ಮದ್ಗುಪಕ್ಷಿಯು ಅವನ ಬಳಿ ಬಂದು, 'ಸತ್ಯಕಾಮನೇ,' ಅಂದನು. 'ಏನು, ಭಗವನ್,' ಎಂದು ಇವನು ಕೇಳಿದನು.

(೩) 'ಚನ್ನನೇ, ನಾನು ನಿನಗೆ ಬ್ರಹ್ಮಪಾದವನ್ನು ಹೇಳುವೆನು,' ಎಂದು ಮದ್ಗುವು ಅನ್ನಲು, 'ಭಗವನ್, ಹೇಳಬೇಕು,' ಎಂದು ಸತ್ಯಕಾಮನು ಬೇಡಿಕೊಂಡನು. ಅವನಿಗೆ ಮದ್ಗುವು ಅಂದದ್ದು, 'ಪ್ರಾಣ, ಚಕ್ಷು, ಶ್ರೋತ್ರ, ಮನ, ಇವು ನಾಲ್ಕು ಕಲೆಗಳು. ಇದು ಆಯತನವಾನ್ (ಆಶ್ರಯವುಳ್ಳದ್ದು) ಎಂದು ಕರೆಯಲ್ಪಡುವ ಬ್ರಹ್ಮನ ಪಾದವು.'

ಸ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನ-
ವಾನಿತ್ಯುಪಾಸ್ತೇ ಆಯತನವಾನಸ್ಮಿꣳಲ್ಲೋಕೇ ಭವತ್ಯಾಯತನವತೋ
ಹ ಲೋಕಾꣳಜಯತಿ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ
ಬ್ರಹ್ಮಣ ಆಯತನವಾನಿತ್ಯುಪಾಸ್ತೇ ॥ ೪ ॥

॥ ಇತ್ಯಷ್ಟಮಃ ಖಂಡಃ ॥

( ೪ ) ಇದನ್ನರಿತವನು ಯಾವನು ಬ್ರಹ್ಮನ ಚತುಷ್ಕಲ ಪಾದವನ್ನು ಆಯತನವಾನ್ ಎಂದು ಉಪಾಸಿಸುವನೊ ಅವನು ಈ ಲೋಕದಲ್ಲಿ ಆಶ್ರಯವುಳ್ಳವನಾಗುವನು. ಬ್ರಹ್ಮನ ಚತುಷ್ಕಲ ಪಾದವನ್ನು ಆಯತನವಾನ್ ಎಂದು ಉಪಾಸಿಸುವವನು, ಆಯತನವಾನ್ ಲೋಕಗಳನ್ನು ಜಯಿಸುವನು.

೮ ನೆಯ ಖಂಡವು ಸಮಾಪ್ತವು

ಪ್ರಾಪ ಹಾಚಾರ್ಯಕುಲಂ ತಮಾಚಾರ್ಯೋಽಭ್ಯುವಾದ ಸತ್ಯಕಾಮ ೩ ಇತಿ
ಭಗವ ಇತಿ ಹ ಪ್ರತಿಶುಶ್ರಾವ ॥ ೧ ॥

ಬ್ರಹ್ಮವಿದಿವ ವೈ ಸೋಮ್ಯ ಭಾಸಿ ಕೋ ನು ತ್ವಾನುಶಶಾಸೇತ್ಯನ್ಯೇ ಮನು-
ಷ್ಯೇಭ್ಯ ಇತಿ ಹ ಪ್ರತಿಜಜ್ಞೇ ಭಗವಾꣳಸ್ತ್ವೇವ ಮೇ ಕಾಮಂ
ಬ್ರೂಯಾತ್ ॥ ೨ ॥

ಶ್ರುತꣳ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ
ಸಾಧಿಷ್ಠಂ ಪ್ರಾಪಯತೀತಿ ತಸ್ಮೈ ಹೈತದೇವೋವಾಚಾತ್ರ ಹ ನ ಕಿಂಚನ
ವೀಯಾಯೇತಿ ವೀಯಾಯೇತಿ ॥ ೩ ॥

॥ ಇತಿ ನವಮಃ ಖಂಡಃ ॥

( ೧ ) ಸತ್ಯಕಾಮನು ಗುರುಕುಲವನ್ನು ಮುಟ್ಟಿದನು. ಆಗ ಆಚಾರ್ಯನು ' ಹೇ ಸತ್ಯಕಾಮನೇ, ' ಎಂದನು. ಅದಕ್ಕೆ ' ಏನು, ಭಗವನ್, ' ಎಂದು ಅವನು ಕೇಳಿದನು.

( ೨ ) ' ಚನ್ನನೇ, ಬ್ರಹ್ಮವನ್ನರಿತವನಂತೆ ( ಪ್ರಸನ್ನ ಮತ್ತು ಕೃತಾರ್ಥ ) ಕಾಣುವಿ. ನಿನಗೆ ಉಪದೇಶವನ್ನು ಯಾರುಕೊಟ್ಟರು ? ' ಎಂದು ಕೇಳಿದನು. ' ಮನುಷ್ಯೇತರರು ನನಗೆ ಈಗ ಜ್ಞಾನವನ್ನು ಹೇಳಿರುವರು. ಆದರೆ ನೀವೇ ಉಪದೇಶ ಮಾಡಬೇಕೆಂದು ನನ್ನ ಇಚ್ಛೆಯು. '

( ೩ ) ' ತಮ್ಮಂತಹ ಆಚಾರ್ಯರಿಂದ ಪಡೆದ ವಿದ್ಯೆಯೆ ಪರಮ ಕಲ್ಯಾಣ

ದಾಯಕವಾಗುವದೆಂದು ನಾನು ಕೇಳಿರುವೆನು,' ಎಂದು ಸತ್ಯಕಾಮನು ಹೇಳಿದನು. ಆದನ್ನು ಕೇಳಿ ಆಚಾರ್ಯನು ಅವನಿಗೆ ಅದೇ ವಿದ್ಯೆಯನ್ನು (ವೃಷಭಾದಿಗಳು ಹೇಳಿದ) ಹೇಳಿದನು. ಅದರಲ್ಲಿ (ಸತ್ಯಕಾಮನು ಮೊದಲು ಕೇಳಿದ ವಿದ್ಯೆಯಲ್ಲಿ) ಏನೂ ನ್ಯೂನವಿದ್ದಿಲ್ಲ, ನ್ಯೂನವಿದ್ದಿಲ್ಲ.

೯ ನೆಯ ಖಂಡವು ಸಮಾಪ್ತವು

ಉಪಕೋಸಲೋ ಹ ವೈ ಕಾಮಲಾಯನಃ ಸತ್ಯಕಾಮೇ ಜಾಬಲೇ ಬ್ರಹ್ಮ-
ಚರ್ಯಮುವಾಸ ತಸ್ಯ ಹ ದ್ವಾದಶವರ್ಷಾಣ್ಯಗ್ನೀನ್ಪರಿಚಚಾರ ಸ ಹ
ಸ್ಮಾನ್ಯಾನಂತೇವಾಸಿನಃ ಸಮಾವರ್ತಯಂಸ್ತಂ ಹ ಸ್ಮೈವ ನ ಸಮಾ-
ವರ್ತಯತಿ ॥ ೧ ॥

ತಂ ಜಾಯೋವಾಚ ತಪ್ತೋ ಬ್ರಹ್ಮಚಾರೀ ಕುಶಲಮಗ್ನೀನ್ಪರಿಚಚಾರೀನ್ಮಾ
ತ್ವಾಗ್ನಯಃ ಪರಿಪ್ರವೋಚಂ ಪ್ರಬ್ರೂಹ್ಯಸ್ಮಾ ಇತಿ ತಸ್ಮೈ ಹಾಪ್ರೋ-
ಚ್ಯೈವ ಪ್ರವಾಸಾಂಚಕ್ರೇ ॥ ೨ ॥

ಸ ಹ ವ್ಯಾಧಿನಾನಶಿತುಂ ದಧ್ರೇ ತಮಾಚಾರ್ಯಜಾಯೋವಾಚ ಬ್ರಹ್ಮಚಾರಿ-
ನ್ನಶಾನ ಕಿಂ ನು ನಾಶ್ನಾಸೀತಿ ಸ ಹೋವಾಚ ಬಹವ ಇಮೇಽಸ್ಮಿನ್ಪು-

(೧) ಉಪಕೋಸಲ ಕಾಮಲಾಯನನು ಸತ್ಯಕಾಮ ಜಾಬಾಲನಲ್ಲಿ ಬ್ರಹ್ಮಚರ್ಯ ವ್ರತದಿಂದ ಇದ್ದನು. ಅವನು ಹನ್ನೆರಡು ವರ್ಷ ಅಗ್ನಿಯ ಸೇವೆಯನ್ನು ಮಾಡಿದನು. ಗುರುವು ಅನ್ಯ ಶಿಷ್ಯರ ಸಮಾವರ್ತನ ಮಾಡಿ (ಗುರುಕುಲ ಬಿಟ್ಟುಹೋಗುವಾಗ ಆಶೀರ್ವಾದ ಕೊಟ್ಟು ಕಳಿಸುವ ವಿಶಿಷ್ಟ ವಿಧಿ) ಅವರನ್ನು (ಮನೆಗೆ) ಕಳಿಸಿಬಿಟ್ಟನು. ಆದರೆ ಇವನನ್ನು ಮಾತ್ರ ಹಾಗೆ ಕಳಿಸಲಿಲ್ಲ.

(೨) (ಗುರುವಿಗೆ) ಅವನ ಹೆಂಡತಿಯು ಅಂದದ್ದು, 'ಈ ಬಹ್ಮಚಾರಿಯು (ಉಪಕೋಸಲನು) ಸಿಟ್ಟಾಗಿರುವನು. ಇವನು ಅಗ್ನಿಯ ಸೇವೆಯನ್ನು ಚನ್ನಾಗಿ ಮಾಡಿರುವನು. ಅಗ್ನಿಗಳು ನಿನ್ನನ್ನು ನಿಂದಿಸದಿರಲಿ. (ನೀನು ಅರ್ಹನಿದ್ದ ಅವನಿಗೆ ವಿದ್ಯೆ ಕೊಡದಿದ್ದರೆ ಅಗ್ನಿಗಳು ನಿನ್ನನ್ನು ನಿಂದಿಸುವವು ಎಂದರ್ಥ.) ಅವನಿಗೆ ವಿದ್ಯೆಯನ್ನು ಕೊಡು.' ಆಕೆಗೆ ಉತ್ತರ ಕೊಡದೆ ಸತ್ಯಕಾಮನು ಪ್ರವಾಸಕ್ಕೆ ಹೊರಟು ಹೋದನು.

ರುಷೇ ಕಾಮಾ ನಾನಾತ್ಯಯಾ ವ್ಯಾಧಿಭಿಃ ಪ್ರತಿಪೂರ್ಣೋಽಸ್ಮಿ ನಾಶಿಷ್ಯಾ-
ಮೀತಿ ॥ ೩ ॥

ಅಥ ಹಾಗ್ನಯಃ ಸಮೂದಿರೇ ತಪ್ತೋ ಬ್ರಹ್ಮಚಾರೀ ಕುಶಲಂ ನಃ ಪರ್ಯ-
ಚಾರೀದ್ಧಂತಾಸ್ಮೈ ಪ್ರಬ್ರವಾಮೇತಿ ತಸ್ಮೈ ಹೋಚುಃ ॥ ೪ ॥

ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ ಸ ಹೋವಾಚ ವಿಜಾನಾ-
ಮ್ಯಹಂ ಯತ್ಪ್ರಾಣೋ ಬ್ರಹ್ಮ ಕಂ ಚ ತು ಖಂ ಚ ನ ವಿಜಾನಾಮೀತಿ
ತೇ ಹೋಚುರ್ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ
ಕಮಿತಿ ಪ್ರಾಣಂ ಚ ಹಾಸ್ಮೈ ತದಾಕಾಶಂ ಚೋಚುಃ ॥ ೫ ॥

॥ ಇತಿ ದಶಮಃ ಖಂಡಃ ॥

(೩) ಉಪಕೋಸಲನು ಇದರಿಂದಾದ ಮನಸ್ಸಂತಾಪದ ಮೂಲಕ ಉಪವಾಸವನ್ನಾರಂಭಿಸಿದನು. ಅವನಿಗೆ ಗುರುಪತ್ನಿಯು ಅಂದದ್ದು, 'ಹೇ ಬ್ರಹ್ಮಚಾರಿಯೇ, ತಿನ್ನು. ನೀನು ಉಪವಾಸವನ್ನೇಕೆ ಮಾಡುವಿ?' ಅವನು ಉತ್ತರ ಕೊಟ್ಟದ್ದೇನಂದರೆ, 'ಈ ದೇಹದಲ್ಲಿ ಚಂಚಲವಾದ ಅನೇಕ ಕಾಮನೆಗಳು ಇರುವವು. ನನ್ನಲ್ಲಿ ಮನೋವ್ಯಾಧಿಗಳು ತುಂಬಿರುವವು. ಅವುಗಳನ್ನೆಲ್ಲ (ಉಪವಾಸದಿಂದ) ನಷ್ಟಪಡಿಸುವೆನು.'

(೪) ಆಗ ಅಗ್ನಿಗಳೆಲ್ಲ ಒತ್ತಟ್ಟಿಗೆ ಕೂಡಿ, 'ಈ ಬ್ರಹ್ಮಚಾರಿಯು ಸಂತಪ್ತನಾಗಿರುವನು, ಇವನು ನಮ್ಮ ಸೇವೆಯನ್ನು ಚನ್ನಾಗಿ ಮಾಡಿರುವನು. ಇವನಿಗೆ ವಿದ್ಯೆಯನ್ನು ಹೇಳುವಾ,' ಎಂದು ವಿದ್ಯೆಯನ್ನು ಹೇಳಿದವು.

(೫) 'ಪ್ರಾಣವು ಬ್ರಹ್ಮ, ಕಂ (ಸುಖ) ಬ್ರಹ್ಮ, ಖಂ (ಆಕಾಶ) ಬ್ರಹ್ಮ,' ಎಂದು ಅಗ್ನಿಗಳು ಅನ್ನಲು, 'ಪ್ರಾಣವು ಬ್ರಹ್ಮವೆಂಬುವದನ್ನು ಬಲ್ಲೆನು, ಕಂ ಖಂ ಇವುಗಳನ್ನರಿಯೆನು,' ಎಂದು ಉಪಕೋಸಲನು ಹೇಳಿದನು. ಅವುಗಳು ಅಂದದ್ದು, 'ಕಂ (ಸುಖವು) ಇದೇ ಖಂ (ಆಕಾಶವು). ಖಂ ಇದೇ ಕಂ.' ಹೀಗೆ ಪ್ರಾಣ ಮತ್ತು (ತದಾಶ್ರಯವಾದ) ಆಕಾಶ ಇವುಗಳ ಜ್ಞಾನವನ್ನು ಅಗ್ನಿಗಳು ಹೇಳಿದವು. (ಆಕಾಶಸ್ಥ ಅಂದರೆ ಇಂದ್ರಿಯಾತೀತ ಸುಖವೇ ಬ್ರಹ್ಮ ಎಂದು ಅರ್ಥ)

೧೦ ನೆಯ ಖಂಡವು ಸಮಾಪ್ತವು

ಅಥ ಹೈನಂ ಗಾರ್ಹಪತ್ಯೋಽನುಶಶಾಸ ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾ-ಹಮಸ್ಮೀತಿ ॥ ೧ ॥

ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ-ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯಂತ ಉಪ ವಯಂ ತಂ ಭುಂಜಾಮೋಽಸ್ಮಿಂಶ್ಚ ಲೋಕೇಽ-ಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ॥ ೨ ॥

॥ ಇತ್ಯೇಕಾದಶಃ ಖಂಡಃ ॥

(೧) ಬಳಿಕ ಗಾರ್ಹಪತ್ಯ ಅಗ್ನಿಯು (ಅಗ್ನಿಗಳೆಲ್ಲ ಕೂಡಿ ಹೇಳಿದ ಜ್ಞಾನವು ಮೇಲೆ ಇದೆ. ಈಗ ಬೇರೆ ಬೇರೆ ಅಗ್ನಿಗಳು ಹೇಳುವವು) ಅವನಿಗೆ, 'ಪೃಥಿವಿ, ಅಗ್ನಿ, ಅನ್ನ, ಆದಿತ್ಯ' ಎಂದು (ಇವುಗಳ ಜ್ಞಾನವನ್ನು ಹೇಳಿದನು). 'ಆದಿತ್ಯನಲ್ಲಿ ಕಾಣುವ ಪುರುಷನು ನಾನು. ಅವನೇ ನಾನು' (ಎಂದು ಆ ಅಗ್ನಿಯು ಹೇಳಿದನು.)

(೨) ಇದನ್ನರಿತವನು ಯಾವನು (ಗಾರ್ಹಪತ್ಯ ಅಗ್ನಿಯನ್ನು) ಉಪಾಸಿಸುವನೊ, ಅವನು ಪಾಪಕರ್ಮಗಳನ್ನು ನಾಶಗೊಳಿಸಿ ಅಗ್ನಿಲೋಕವನ್ನು ಪಡೆಯುವನು, ಪೂರ್ಣಾಯು ಆಗುವನು, ಉಜ್ವಲ ಜೀವನವುಳ್ಳವನಾಗು-ವನು. ಅವನ ವಂಶಜರು ಕ್ಷಯರಹಿತರಾಗುವರು. ಇದನ್ನು ಹೀಗೆ ತಿಳಿದು ಉಪಾಸಿಸುವವನಿಗೆ ನಾವು (ಅಗ್ನಿಗಳು) ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಭೋಗಗಳನ್ನು ಕೊಡುವೆವು.

೧೧ ನೆಯ ಖಂಡವು ಸಮಾಪ್ತವು

ಅಥ ಹೈನಮನ್ವಾಹಾರ್ಯಪಚನೋಽನುಶಶಾಸಾಪೋ ದಿಶೋ ನಕ್ಷತ್ರಾಣಿ ಚಂದ್ರಮಾ ಇತಿ ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥

(೧) ಬಳಿಕ 'ಆಪ, ದಿಕ್ಕು, ನಕ್ಷತ್ರ, ಚಂದ್ರ' ಎಂದು ಅನ್ವಾಹಾರ್ಯ ಪಚನ ಅಗ್ನಿಯು ಉಪದೇಶಕೊಟ್ಟನು. 'ಚಂದ್ರನಲ್ಲಿ ಕಾಣುವ ಪುರುಷನು ನಾನು, ಅವನೇ ನಾನು' (ಎಂದು ಆ ಅಗ್ನಿಯು ಹೇಳಿದನು).

ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ-
ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ
ಕ್ಷೀಯಂತ ಉಪ ವಯಂ ತಂ ಭುಂಜಾಮೋಽಸ್ಮಿಂಶ್ಚ ಲೋಕೇಽ-
ಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ॥ ೨ ॥

॥ ಇತಿ ದ್ವಾದಶಃ ಖಂಡಃ ॥

( ೨ ) ಇದನ್ನು ಹೀಗೆ ಅರಿತವನು ಯಾವನು ( ಈ ಅಗ್ನಿಯನ್ನು ) ಉಪಾಸಿಸುವನೊ ಅವನು ಪಾಪಕರ್ಮಗಳನ್ನು ನಾಶಗೊಳಿಸಿ ಅಗ್ನಿಲೋಕವನ್ನು ಪಡೆಯುವನು, ಪೂರ್ಣಾಯುವಾಗುವನು, ಉಜ್ವಲ ಜೀವನವುಳ್ಳವನಾಗುವನು. ಅವನ ವಂಶಜರು ಕ್ಷಯರಹಿತರಾಗುವರು. ಇದನ್ನು ಹೀಗೆ ತಿಳಿದು ಉಪಾಸಿಸುವವನಿಗೆ ನಾವು ( ಅಗ್ನಿಗಳು ) ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಭೋಗಗಳನ್ನು ಸಲ್ಲಿಸುವೆವು.

೧೨ ನೆಯ ಖಂಡವು ಸಮಾಪ್ತವು

ಅಥ ಹೈನಮಾಹವನೀಯೋಽನುಶಶಾಸ ಪ್ರಾಣ ಆಕಾಶೋ ದ್ಯೌರ್ವಿದ್ಯುದಿತಿ
ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹ-
ಮಸ್ಮೀತಿ ॥ ೧ ॥

ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ
ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ
ಕ್ಷೀಯಂತ ಉಪ ವಯಂ ತಂ ಭುಂಜಾಮೋಽಸ್ಮಿಂಶ್ಚ ಲೋಕೇ-
ಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ॥ ೨ ॥

॥ ಇತಿ ತ್ರಯೋದಶಃ ಖಂಡಃ ॥

( ೧ ) ಬಳಿಕ ' ಪ್ರಾಣ, ಆಕಾಶ, ದ್ಯುಲೋಕ, ವಿದ್ಯುತ್ತು, ' ಎಂದು ಆಹವನೀಯ ಅಗ್ನಿಯು ಉಪದೇಶ ಮಾಡಿದನು. ' ವಿದ್ಯುತ್ತಿನಲ್ಲಿ ಕಾಣುವ ಪುರಷನು ನಾನು, ಅವನೇ ನಾನು ' ( ಎಂದು ಆ ಅಗ್ನಿಯು ಹೇಳಿದನು ).

( ೨ ) ಇದನ್ನು ಹೀಗೆ ಅರಿತವನು ಯಾವನು ( ಈ ಅಗ್ನಿಯನ್ನು )

ಉಪಾಸಿಸುವನೊ ಅವನು ಪಾಪಕೃತ್ಯಗಳನ್ನು ನಾಶಗೊಳಿಸಿ ಅಗ್ನಿಲೋಕ ವನ್ನು ಪಡೆಯುವನು, ಪೂರ್ಣಾಯು ಆಗುವನು, ಉಜ್ವಲ ಜೀವನವುಳ್ಳವ- ನಾಗುವನು. ಅವನ ವಂಶಜರು ಕ್ಷಯರಹಿತರಾಗುವರು. ಇದನ್ನು ಹೀಗೆ ತಿಳಿದು ಉಪಾಸಿಸುವವನಿಗೆ ನಾವು (ಅಗ್ನಿಗಳು) ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಭೋಗಗಳನ್ನು ಸಲ್ಲಿಸುವೆವು.

೧೩ ನೆಯ ಖಂಡವು ಸಮಾಪ್ತವು

ತೇ ಹೋಚುರುಪಕೋಸಲೈಷಾ ಸೋಮ್ಯ ತೇಽಸ್ಮಾದ್ವಿದ್ಯಾತ್ಮವಿದ್ಯಾ ಚಾಚಾ-
ರ್ಯಸ್ತು ತೇ ಗತಿಂ ವಕ್ತೇತ್ಯಾಜಗಾಮ ಹಾಸ್ಯಾಚಾರ್ಯಸ್ತಮಾಚಾ-
ರ್ಯೋಽಭ್ಯುವಾದೋಪಕೋಸಲ೩ ಇತಿ ॥ ೧ ॥

ಭಗವ ಇತಿ ಹಾ ಪ್ರತಿಶುಶ್ರಾವ ಬ್ರಹ್ಮವಿದ ಇವ ಸೋಮ್ಯ ತೇ ಮುಖಂ
ಭಾತಿ ಕೋ ನು ತ್ವಾನುಶಶಾಸೇತಿ ಕೋ ನು ಮಾನುಶಿಷ್ಯಾದ್ಭೋ
ಇತೀಹಾಪೇವ ನಿಹ್ನುತ ಇಮೇ ನೂನಮೀದೃಶಾ ಅನ್ಯಾದೃಶಾ ಇತೀ-
ಹಾಗ್ನೀನಭ್ಯೂದೇ ಕಿಂ ನು ಸೋಮ್ಯ ಕಿಲ ತೇಽವೋಚನ್ನಿತಿ ॥ ೨ ॥

(೧) ಆ ಅಗ್ನಿಗಳು ಅಂದದ್ದು, 'ಹೇ ಉಪಕೋಸಲನೇ, ಈ ನಮ್ಮ ವಿದ್ಯೆಯನ್ನೂ ಆತ್ಮವಿದ್ಯೆಯನ್ನೂ ನಿನಗೆ ಹೇಳಿರುವೆವು. ಆದರೆ ಆಚಾರ್ಯನು ನಿನಗೆ ಕೊನೆಯ ಗತಿಯನ್ನು ಕುರಿತು ಹೇಳುವನು.' ಬಳಿಕ ಆಚಾರ್ಯನು ಬಂದನು. ಆಚಾರ್ಯನು ಅವನನ್ನು 'ಹೇ ಉಪಕೋಸಲನೇ,' ಎಂದು ಸಂಬೋಧಿಸಿದನು.

(೨) 'ಏನು ಭಗವನ್,' ಎಂದು ಉಪಕೋಸಲನು ಕೇಳಿದನು. ಆಗ ಆಚಾರ್ಯನು ಅಂದದ್ದು, 'ನಿನ್ನ ಮುಖವು ಬ್ರಹ್ಮಜ್ಞಾನಿಯಂತೆ ಕಂಗೊಳಿಸು ವದು. ನಿನಗೆ ಯಾರು ಉಪದೇಶ ಮಾಡಿದರು?' 'ನನಗೆ (ತಾವು ಇಲ್ಲ- ದಾಗ) ಯಾರು ಉಪದೇಶ ಮಾಡುವರು ಭಗವನ್?' ಎಂದು ಶಿಷ್ಯನು ಹಿಂಜರಿಯುತ್ತ, 'ಇವು (ಅಗ್ನಿಗಳು) ಹೀಗೆ ಮೊದಲು ಇರಲಿಲ್ಲ,' ಅನ್ನುತ್ತ ಅಗ್ನಿಗಳೆ ತನಗೆ ಜ್ಞಾನವನ್ನು ಹೇಳಿದವು ಎಂದು ಸೂಚಿಸಿದನು. 'ಚನ್ನನೆ, ಅವು ನಿನಗೆ ಏನು ಹೇಳಿದವು?' ಎಂದು ಆಚಾರ್ಯನು ಕೇಳಿದನು.

ಇದಮಿತಿ ಹ ಪ್ರತಿಜಜ್ಞೇ ಲೋಕಾನ್ವಾವ ಕಿಲ ಸೋಮ್ಯ ತೇಽವೋಚನ್ನಹಂ ತು ತೇ ತದ್ವಕ್ಷ್ಯಾಮಿ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತ ಇತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ॥ ೩ ॥

॥ ಇತಿ ಚತುರ್ದಶಃ ಖಂಡಃ ॥

( ೩ ) 'ಹೀಗೆ ಹೇಳಿದವು' ಎಂದು ಉಪಕೋಸಲನು ಸತ್ಯವನ್ನು ಹೇಳಿದನು. 'ಚನ್ನ, ನಿನಗೆ ಅವು ಲೋಕಗಳ ಜ್ಞಾನವನ್ನು ಹೇಳಿರುವವು. ನಾನು ನಿನಗೆ ಅದನ್ನು ( ಆತ್ಮಜ್ಞಾನವನ್ನು ) ಹೇಳುವೆನು. ಅದನ್ನರಿತವನಿಗೆ, ಪದ್ಮಪತ್ರಕ್ಕೆ ನೀರು ತಗಲದಿರುವಂತೆ, ಪಾಪವೆಂಬುದು ತಗಲುವದಿಲ್ಲ' ಎಂದು ಆಚಾರ್ಯನು ಹೇಳಿದನು. 'ನನಗೆ ಅದನ್ನು ಹೇಳಬೇಕು ಭಗವನ್' ಎಂದು ಶಿಷ್ಯನು ಅಂದನು. ಆಚಾರ್ಯನು ಆಗ ಅವನಿಗೆ ಹೇಳಿದನು.

೧೪ ನೆಯ ಖಂಡವು ಸಮಾಪ್ತವು

ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದ-ಮೃತಮಭಯಮೇತದ್ಬ್ರಹ್ಮೇತಿ ತದ್ಯದ್ಯಪ್ಯಸ್ಮಿನ್ಸರ್ಪಿರ್ವೋದಕಂ ವಾ ಸಿಂಚಂತಿ ವರ್ತ್ಮನೀ ಏವ ಗಚ್ಛತಿ ॥ ೧ ॥

ಏತꣳ ಸಂಯದ್ವಾಮ ಇತ್ಯಾಚಕ್ಷತ ಏತꣳ ಹಿ ಸರ್ವಾಣಿ ವಾಮಾನ್ಯಭಿಸಂ-ಯಂತಿ ಸರ್ವಾಣ್ಯೇನಂ ವಾಮಾನ್ಯಭಿಸಂಯಂತಿ ಯ ಏವಂ ವೇದ ॥ ೨ ॥

( ೧ ) 'ಈ ಕಣ್ಣಿನಲ್ಲಿ ಕಾಣುವ ಪುರುಷನೇ ಆತ್ಮನು,' ಎಂದು ಗುರುವು ಹೇಳಿದನು, 'ಅವನೇ ಅಮೃತನು, ಅಭಯನು, ಬ್ರಹ್ಮನು. ಕಣ್ಣಿನಲ್ಲಿ ತುಪ್ಪ ಅಥವಾ ನೀರನ್ನು ಸಿಡಿಸಿದರೆ ಅದು ಒಡನೆ ಬದಿಗೆ ರೆಪ್ಪೆಗಳೆಡೆಗೆ ಹೋಗುವದು.

( ೨ ) ಇವನಿಗೆ 'ಸಂಯದ್ವಾಮ' ಎಂದೆನ್ನುವರು. ಯಾಕಂದರೆ ಎಲ್ಲ ಸದ್ವಸ್ತುಗಳು, ಇಷ್ಟವಸ್ತುಗಳು ಇವನ ಕಡೆಗೆಯೇ ಹೋಗುವವು. ಇದನ್ನರಿತವನಿಗೆ ಎಲ್ಲ ಸದ್ವಸ್ತುಗಳು ಪ್ರಾಪ್ತವಾಗುವವು.

ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ ಸರ್ವಾಣಿ
ವಾಮಾನಿ ನಯತಿ ಯ ಏವಂ ವೇದ ॥ ೩ ॥

ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ ಸರ್ವೇಷು
ಲೋಕೇಷು ಭಾತಿ ಯ ಏವಂ ವೇದ ॥ ೪ ॥

ಅಥ ಯದು ಚೈವಾಸ್ಮಿಞ್ಛವ್ಯಂ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿ-
ಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪ-
ಕ್ಷಾದ್ಯಾನ್ಷಡುದಙ್ಙೇತಿ ಮಾಸಾಂಸ್ತಾನ್ಮಾಸೇಭ್ಯಃ ಸಂವತ್ಸರಂ ಸಂವತ್ಸ-
ರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪು-
ರುಷೋಽಮಾನವಃ ॥ ೫ ॥

ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿ-
ಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ॥ ೬ ॥

॥ ಇತಿ ಪಂಚದಶಃ ಖಂಡಃ ॥

( ೩ ) ಇವನಿಗೆ 'ವಾಮನೀ' ಎನ್ನುವರು. ಯಾಕಂದರೆ, ಇವನು ಎಲ್ಲ ಪುಣ್ಯಕರ್ಮಗಳ ಫಲವನ್ನು ಕೊಡಿಸುವನು, ಇದನ್ನರಿತವನಿಗೆ ಎಲ್ಲ ಪುಣ್ಯಕರ್ಮಗಳ ಫಲಗಳು ದೊರೆಯುವವು.

( ೪ ) ಇವನಿಗೆ 'ಭಾಮನೀ' ಎನ್ನುವರು. ಯಾಕಂದರೆ, ಎಲ್ಲ ಲೋಕಗಳಲ್ಲಿ ಇವನು ಪ್ರಕಾಶಮಾನನಾಗುವನು. ಇದನ್ನರಿತವನು ಎಲ್ಲ ಲೋಕಗಳಲ್ಲಿ ಪ್ರಕಾಶಮಾನನಾಗುವನು.

( ೫ ) ಈ ಜ್ಞಾನವನ್ನು ಪಡೆದ ಮನುಷ್ಯರ ಉತ್ತರಕ್ರಿಯೆಗಳನ್ನು (ಅವರ ಆಪ್ತರು) ಮಾಡಲಿ, ಬಿಡಲಿ, ಅವರು ಅರ್ಚಿಲೋಕಗಳಿಗೆಯೆ ಹೋಗುವರು. ಅಲ್ಲಿಂದ ಹಗಲು, ಅಲ್ಲಿಂದ ಶುಕ್ಲಪಕ್ಷ, ಅಲ್ಲಿಂದ ಉತ್ತರಾಯಣ, ಅಲ್ಲಿಂದ ಸಂವತ್ಸರ, ಅಲ್ಲಿಂದ ಆದಿತ್ಯಲೋಕ, ಅಲ್ಲಿಂದ ಚಂದ್ರಲೋಕ, ಅಲ್ಲಿಂದ ವಿದ್ಯುಲ್ಲೋಕ, ಈ ಕ್ರಮದಿಂದ ಅವರು ತೆರಳುವರು. ಅಲ್ಲಿ ಅಮಾನವ ಪುರುಷನಿರುವನು.

( ೬ ) ಅವನು ಅವರನ್ನು ಬ್ರಹ್ಮಲೋಕಕ್ಕೆ ಕರಕೊಂಡು ಹೋಗುವನು. ಅದೇ ದೇವಪಥವು, ಬ್ರಹ್ಮಪಥವು; ಆ ಮಾರ್ಗದಿಂದ ಹೋಗುವವರು ಈ ಮಾನವಲೋಕಕ್ಕೆ ಮರಳಿ ಬರುವದಿಲ್ಲ, ಬರುವದಿಲ್ಲ.

೧೫ ನೆಯ ಖಂಡವು ಸಮಾಪ್ತವು

ಏಷ ಹ ವೈ ಯಜ್ಞೋ ಯೋಽಯಂ ಪವತ ಏಷ ಹ ಯನ್ನಿದꣳ
ಸರ್ವಂ ಪುನಾತಿ ಯದೇಷ ಯನ್ನಿದꣳ ಸರ್ವಂ ಪುನಾತಿ ತಸ್ಮಾದೇಷ ಏವ
ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ ॥ ೧ ॥

ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ ವಾಚಾ ಹೋತಾ-
ಧ್ವರ್ಯುರುದ್ಗಾತಾನ್ಯತರಾꣳ ಸ ಯತ್ರೋಪಾಕೃತೇ ಪ್ರಾತರನುವಾಕೇ
ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯವವದತಿ ॥ ೨ ॥

ಅನ್ಯತರಾಮೇವ ವರ್ತನೀꣳ ಸꣳಸ್ಕರೋತಿ ಹೀಯತೇಽನ್ಯತರಾ ಸ ಯಥೈ-
ಕಪಾದ್ವ್ರಜನ್ರಥೋ ವೈಕೇನ ಚಕ್ರೇಣ ವರ್ತಮಾನೋ ರಿಷ್ಯತ್ಯೇವ-
ಮಸ್ಯ ಯಜ್ಞೋ ರಿಷ್ಯತಿ ಯಜ್ಞꣳ ರಿಷ್ಯಂತಂ ಯಜಮಾನೋಽನುರಿಷ್ಯತಿ
ಸ ದೃಷ್ಟ್ವಾ ಪಾಪೀಯಾನ್ಭವತಿ ॥ ೩ ॥

(೧) ಈ ಬೀಸುವವನೆ ಯಜ್ಞವು (ವಾಯುವೆ ಯಜ್ಞವು). ಇವನು ಬೀಸುತಿರುವಾಗ ಇದನ್ನೆಲ್ಲ (ಜಗತ್ತನ್ನು) ಪವಿತ್ರ ಮಾಡುವನು. ಹೋಗ ಹೋಗುತ್ತ ಇವನು ಪವಿತ್ರ ಮಾಡುತಿರುವದರಿಂದ ಇವನೆ ಯಜ್ಞವು. ವಾಣಿ ಮತ್ತು ಮನಸು ಇವು ಎರಡು (ವಾಯುವಿನ) ಯಜ್ಞದ ಮಾರ್ಗಗಳು. (ಈ ಎರಡರ ಸಹಾಯದಿಂದ ಯಜ್ಞವು ಸಾಂಗವಾಗುವದು).

(೨) ಅವುಗಳಲ್ಲಿ ಒಂದನ್ನು ಬ್ರಹ್ಮನು (ಸರ್ವದೋಷ ಪರಿಹಾರ ಕಾರ್ಯದಲ್ಲಿ ನಿಷ್ಣಾತ ಋತ್ವಿಜನು) ಮನಸಿನಿಂದ ಸಂಸ್ಕರಿಸುವನು. ಹೋತೃ, ಅಧ್ವರ್ಯು ಮತ್ತು ಉದ್ಗಾತಾ (ಮಿಕ್ಕ ಋತ್ವಿಜರು) ಇವರು ಎರಡನೆಯ-ದನ್ನು ವಾಣಿಯಿಂದ ಸಂಸ್ಕರಿಸುವರು. ಪ್ರಾತರನುವಾಕವು (ಯಜ್ಞದ ವಿಶಿಷ್ಟ ಭಾಗವು) ಪ್ರಾರಂಭವಾದಾಗ ಪರಿಧಾನೀಯಾ ಋಚೆಗಳನ್ನು ಅನ್ನುವ ಪೂರ್ವದಲ್ಲಿ ಬ್ರಹ್ಮನು ಮಾತಾಡಿದರೆ,

(೩) ಅವನು ಎರಡನೇ ಮಾರ್ಗವನ್ನು ಸಂಸ್ಕರಿಸಿದಂತೆ ಆಗುವದು' ಮತ್ತು ಒಂದು ಮಾರ್ಗವು (ಸಂಸ್ಕಾರವಿಲ್ಲದ್ದರಿಂದ) ಹೀನವಾಗುವದು, ಒಂಟಿಕಾಲಿನ ಮನುಷ್ಯನು ಅಥವಾ ಒಂಟಿಗಾಲಿನ ರಥವು ನಡೆಯುವಾಗ ಬಿದ್ದು ಮುರಿದು ಹೋಗುವಂತೆ ಇಂಥ ಯಜ್ಞವು ನಾಶಹೊಂದುವದು. ಯಜ್ಞದ ಹಿಂದಿನಿಂದ ಆದರ ಯಜಮಾನನೂ ನಾಶಹೊಂದುವನು. ಇಂಥ ಯಜ್ಞ ಮಾಡುವದರಿಂದ ಅವನು ಹೆಚ್ಚು ಪಾಪಿಷ್ಠನಾಗುವನು.

ಅಥ ಯತ್ರೋಪಾಕೃತೇ ಪ್ರಾತರನುವಾಕೇನ ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯವವದತ್ಯುಭೇ ಏವ ವರ್ತನೀ ಸಂಸ್ಕುರ್ವಂತಿ ನ ಹೀಯ-ತೇಽನ್ಯತರಾ ॥ ೪ ॥

ಸ ಯಥೋಭಯಪಾದ್ವ್ರಜನ್ರಥೋ ವೋಭಾಭ್ಯಾಂ ಚಕ್ರಾಭ್ಯಾಂ ವರ್ತಮಾನಃ ಪ್ರತಿತಿಷ್ಠತ್ಯೇವಮಸ್ಯ ಯಜ್ಞಃ ಪ್ರತಿತಿಷ್ಠತಿ ಯಜ್ಞಂ ಪ್ರತಿತಿಷ್ಠಂತಂ ಯಜಮಾನೋಽನು ಪ್ರತಿತಿಷ್ಠತಿ ಸ ಇಷ್ಟ್ವಾ ಶ್ರೇಯಾನ್ಭವತಿ ॥ ೫ ॥

॥ ಇತಿ ಷೋಡಶಃ ಖಂಡಃ ॥

(೪) ಪ್ರಾತರನುವಾಕವು ಪ್ರಾರಂಭವಾದಾಗ ಪರಿಧಾನೀಯಾ ಋಚೆಯ ಪೂರ್ವದಲ್ಲಿ ಬ್ರಹ್ಮನು ಮಾತಾಡದೇ ಇದ್ದರೆ, ಋತ್ವಿಜರು ಎರಡೂ ಮಾರ್ಗ ಗಳನ್ನು ಸಂಸ್ಕರಿಸಿದಂತಾಗುವದು. (ಹೀಗಾಯಿತೆಂದರೆ) ಎರಡನೇ ಮಾರ್ಗವು ನಾಶಗೊಳ್ಳುವದಿಲ್ಲ.

(೫) ಎರಡೂ ಕಾಲುಗಳುಳ್ಳ ಮನುಷ್ಯನು ಅಥವಾ ಎರಡೂ ಕಾಲು ಗಳುಳ್ಳ ರಥವು ನಡೆಯುವಾಗ ಹೇಗೆ ಸುಸೂತ್ರ ನಡೆದು ಗಟ್ಟಿಯಾಗಿ ಇರು ವದೊ ಹಾಗೆ ಈ ಯಜ್ಞವು ಫಲಕಾರಿಯಾಗುವದು. ಅರ್ಥಾತ್ ಯಜ-ಮಾನನೂ ಪ್ರತಿಷ್ಠಿತನಾಗುವನು, ಯಜ್ಞಮಾಡಿ ಅವನು ಶ್ರೇಷ್ಠನಾಗು ವನು.

೧೬ ನೆಯ ಖಂಡವು ಸಮಾಪ್ತವು

ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾꣳ ರಸಾನ್ಪ್ರಾಬೃಹ-ದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ॥ ೧ ॥

ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾನಾꣳ ರಸಾನ್ಪ್ರಾ-ಬೃಹದಗ್ನೇರ್ಋಚೋ ವಾಯೋರ್ಯಜೂꣳಷಿ ಸಾಮಾನ್ಯಾದಿತ್ಯಾತ್ ॥ ೨ ॥

(೧) ಪ್ರಜಾಪತಿಯು ಲೋಕಗಳನ್ನು ಕುರಿತು ತಪಸ್ಸು (ಧ್ಯಾನ) ಮಾಡಿದನು. ಯಾವ ಲೋಕಗಳನ್ನು ಕುರಿತು ತಪಸ್ಸು ಮಾಡಿದನೊ ಅವು-ಗಳ ಸಾರವನ್ನು, ಪೃಥಿವಿಯಿಂದ ಅಗ್ನಿಯನ್ನು, ಅಂತರಿಕ್ಷದಿಂದ ವಾಯುವನ್ನು, ದ್ಯುಲೋಕದಿಂದ ಆದಿತ್ಯನನ್ನು ಗ್ರಹಿಸಿದನು.

(೨) ಈ ಮೂರು ದೇವತೆಗಳನ್ನು (ಅಗ್ನಿ ಆದಿ) ಕುರಿತು ಮತ್ತೆ

ಸ ಏತಾಂ ತ್ರಯೀಂ ವಿದ್ಯಾಮಭ್ಯತಪತ್ತಸ್ಯಾಸ್ತಪ್ಯಮಾನಾಯಾ ರಸಾನ್ಪ್ರಾ-
ಬೃಹದ್ಭೂರಿತ್ಯೃಗ್ಭ್ಯೋ ಭುವರಿತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ ॥ ೩

ತದ್ಯದ್ಯೃಕ್ತೋ ರಿಷ್ಯೇದ್ಭೂಃ ಸ್ವಾಹೇತಿ ಗಾರ್ಹಪತ್ಯೇ ಜುಹುಯಾದೃ-
ಚಾಮೇವ ತದ್ರಸೇನರ್ಚಾಂ ವೀರ್ಯೇಣರ್ಚಾಂ ಯಜ್ಞಸ್ಯ ವಿರಿಷ್ಟꣳ
ಸಂದಧಾತಿ ॥ ೪

ಅಥ ಯದಿ ಯಜುಷ್ಟೋ ರಿಷ್ಯೇದ್ಭುವಃ ಸ್ವಾಹೇತಿ ದಕ್ಷಿಣಾಗ್ನೌ ಜುಹು-
ಯಾದ್ಯಜುಷಾಮೇವ ತದ್ರಸೇನ ಯಜುಷಾಂ ವೀರ್ಯೇಣ
ಯಜುಷಾಂ ಯಜ್ಞಸ್ಯ ವಿರಿಷ್ಟꣳ ಸಂದಧಾತಿ ॥ ೫

ತಪಸ್ಸು ಮಾಡಿದನು. ಯಾವ ದೇವತೆಗಳನ್ನು ಕುರಿತು ಯಜ್ಞಮಾಡಿದನೊ ಅವುಗಳ ಸಾರವನ್ನು—ಅಗ್ನಿಯಿಂದ ಋಚೆಗಳನ್ನು, ವಾಯುವಿನಿಂದ ಯಜುಸ್ಸುಗಳನ್ನು, ಆದಿತ್ಯನಿಂದ ಸಾಮಗಳನ್ನು—ಗ್ರಹಿಸಿದನು.

(೩) ಈ ತ್ರಯೀ ವಿದ್ಯೆಯನ್ನು (ಋಕ್ ಆದಿ) ಕುರಿತು ಪುನಃ ತಪಸ್ಸು ಮಾಡಿದನು. ಯಾವ ವಿದ್ಯೆಗಳನ್ನು ಕುರಿತು ತಪಸ್ಸು ಮಾಡಿದನೊ ಅವುಗಳ ಸಾರವನ್ನು—ಋಕ್ಕುಗಳಿಂದ ಭೂಃ, ಯಜುಸ್ಸುಗಳಿಂದ ಭುವಃ, ಸಾಮಗಳಿಂದ ಸ್ವಃ, ಇವುಗಳನ್ನು—ಗ್ರಹಿಸಿದನು.

(೪) ಆದುದರಿಂದ (ಯಜ್ಞದಲ್ಲಿ) ಋಕ್ ಸಂಬಂಧದಿಂದ ಕ್ಷತವು (ದೋಷವು) ಉಂಟಾದರೆ 'ಭೂಃ ಸ್ವಾಹಾ' ಎಂದು ಗಾರ್ಹಪತ್ಯ ಅಗ್ನಿಯಲ್ಲಿ ಹವನ ಮಾಡಬೇಕು. ಋಕ್ಕಿನ ಆ ರಸದಿಂದ, ಋಕ್ಕಿನ ಬಲದಿಂದ, ಋಕ್ ಯಜ್ಞದ ಕ್ಷತವನ್ನು (ಸಕಲಯಜ್ಞದೋಷಪರಿಹಾರಕನಿಂದ ಬ್ರಹ್ಮಾ ಎಂಬ ಮುಖ್ಯ ಋತ್ವಿಜನು) ಹೋಗಲಾಡಿಸುವನು.

(೫) ಇನ್ನು ಯಜುರ್ಮಂತ್ರ ಸಂಬಂಧದಿಂದ ಕ್ಷತವು ಉಂಟಾದರೆ 'ಭುವಃ ಸ್ವಾಹಾ' ಎಂದು ದಕ್ಷಿಣಾಗ್ನಿಯಲ್ಲಿ ಹವನ ಮಾಡಬೇಕು. ಯಜುಸ್ಸಿನ ಆ ಮಂತ್ರದಿಂದ ಯಜುಸ್ಸಿನ ಬಲದಿಂದ ಯಜುರ್ಯಜ್ಞದ ಕ್ಷತವನ್ನು (ಬ್ರಹ್ಮಾ) ಹೋಗಲಾಡಿಸುವನು.

ಅಥ ಯದಿ ಸಾಮತೋ ರಿಷ್ಯೇತ್ಸ್ವಃ ಸ್ವಾಹೇತ್ಯಾಹವನೀಯೇ ಜುಹು-
ಯಾತ್ಸಾಮ್ನಾಮೇವ ತದ್ರಸೇನ ಸಾಮ್ನಾಂ ವೀರ್ಯೇಣ ಸಾಮ್ನಾಂ
ಯಜ್ಞಸ್ಯ ವಿರಿಷ್ಟಂ ಸಂದಧಾತಿ ॥ ೬ ॥

ತದ್ಯಥಾ ಲವಣೇನ ಸುವರ್ಣಂ ಸಂದಧ್ಯಾತ್ಸುವರ್ಣೇನ ರಜತಂ ರಜತೇನ
ತ್ರಪು ತ್ರಪುಣಾ ಸೀಸಂ ಸೀಸೇನ ಲೋಹಂ ಲೋಹೇನ ದಾರು
ದಾರುಣಾ ಚರ್ಮ ॥ ೭ ॥

ಏವಮೇಷಾಂ ಲೋಕಾನಾಮಾಸಾಂ ದೇವತಾನಾಮಸ್ಯಾಸ್ತ್ರಯ್ಯಾ
ವಿದ್ಯಾಯಾ ವೀರ್ಯೇಣ ಯಜ್ಞಸ್ಯ ವಿರಿಷ್ಟಂ ಸಂದಧಾತಿ ಭೇಷ-
ಜಕೃತೋ ಹ ವಾ ಏಷ ಯಜ್ಞೋ ಯತ್ರೈವಂವಿದ್ಬ್ರಹ್ಮಾ ಭವತಿ ॥ ೮ ॥

ಏಷ ಹ ವಾ ಉದಕ್ಪ್ರವಣೋ ಯಜ್ಞೋ ಯತ್ರೈವಂವಿದ್ಬ್ರಹ್ಮಾ
ಭವತ್ಯೇವಂವಿದಂ ಹ ವಾ ಏಷಾ ಬ್ರಹ್ಮಾಣಮನು ಗಾಥಾ ಯತೋ
ಯತ ಆವರ್ತತೇ ತತ್ತದ್ಗಚ್ಛತಿ ॥ ೯ ॥

( ೬ ) ಸಾಮಗಳ ಸಂಬಂಧದಿಂದ ಕ್ಷತವು ಉಂಟಾದರೆ ' ಸ್ವಃ ಸ್ವಾಹಾ' ಎಂದು ಆಹವನೀಯ ಅಗ್ನಿಯಲ್ಲಿ ಹವನ ಮಾಡಬೇಕು. ಸಾಮಗಳ ಆ ರಸ ದಿಂದ, ಸಾಮಗಳ ಬಲದಿಂದ ಸಾಮಯಜ್ಞದ ಕ್ಷತವನ್ನು ( ಬ್ರಹ್ಮಾ ) ಸರಿ ಪಡಿಸುವನು.

( ೭ ) ಖಾರದಿಂದ ( ಟಂಕಣಖಾರ ) ಚಿನ್ನವನ್ನು, ಚಿನ್ನದಿಂದ ಬೆಳ್ಳಿ ಯನ್ನು, ಬೆಳ್ಳಿಯಿಂದ ತವರನ್ನು, ತವರಿನಿಂದ ಶೀಸನ್ನು, ಶೀಸಿನಿಂದ ಲೋಹವನ್ನು, ಲೋಹದಿಂದ ಕಟ್ಟಿಗೆಯನ್ನು, ಚರ್ಮದಿಂದ ಕಟ್ಟಿಗೆಯನ್ನು ಜೋಡಿಸುವಂತೆ,

( ೮ ) ಈ ಲೋಕಗಳ ( ಪೃಥಿವ್ಯಾದಿ ), ಈ ದೇವತೆಗಳ ( ಅಗ್ನ್ಯಾದಿ ), ಈ ವಿದ್ಯೆಗಳ ( ಋಗಾದಿ ) ಬಲದಿಂದ ಯಜ್ಞಕ್ಷತವನ್ನು ( ಬ್ರಹ್ಮಾ ) ಸರಿ ಪಡಿಸುವನು. ಇದನ್ನರಿತ ( ಬ್ರಹ್ಮಾ ) ಯಾವ ಯಜ್ಞದಲ್ಲಿರುವನೋ ಆ ಯಜ್ಞವು ಔಷಧದಿಂದ ಯುಕ್ತವಿರುವದು. ( ಆ ಯಜ್ಞದಲ್ಲಿ ದೋಷರೂಪ ರೋಗವು ಉಂಟಾಗಲಾರದು ಎಂದರ್ಥ ).

( ೯ ) ಇದನ್ನರಿತ ಬ್ರಹ್ಮಾ ಇದ್ದ ಯಜ್ಞವೆ ಉದಕ್‌ಪ್ರವಣವೆನಿಸುವದು. ( ಉತ್ತಮ ಫಲದಾಯಿಯು ). ಇದು ಅಂಥ ಬ್ರಹ್ಮನ ಸ್ತುತಿ ಇರುವದು— ಎಲ್ಲೆಲ್ಲಿ ತಪ್ಪಾಗುವವೊ ಅಲ್ಲಲ್ಲಿ ( ಬ್ರಹ್ಮಾ ) ಹೋಗುವನು (ರಕ್ಷಣಾರ್ಥವಾಗಿ.)

ಮಾನವೋ ಬ್ರಹ್ಮೈವೈಕ ಋತ್ವಿಕ್ಕುರೂನಶ್ವಾಭಿರಕ್ಷತ್ಯೇವಂವಿದ್ಧ ವೈ ಬ್ರಹ್ಮಾ ಯಜ್ಞಂ ಯಜಮಾನಙ್ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ತಸ್ಮಾದೇವಂವಿದಮೇವ ಬ್ರಹ್ಮಾಣಂ ಕುರ್ವೀತ ನಾನೇವಂವಿದಂ ನಾನೇವಂವಿದಂ ॥ ೧೦ ॥

॥ ಇತಿ ಸಪ್ತದಶಃ ಖಂಡಃ ॥

( ೧೦ ) ವಿದ್ವಾಂಸನಾದ ಬ್ರಹ್ಮಾ ಎಂಬ ಋತ್ವಿಜನೆ ( ರಕ್ಷಣಾರ್ಥವಾಗಿ ಹೋಗುವನು ಎಂದು ಹಿಂದಿನ ಮಂತ್ರದೊಡನೆ ಅನ್ವಯ ) ರಾವುತರನ್ನು ಕುದುರೆಗಳು ರಕ್ಷಿಸುವಂತೆ ವಿದ್ವಾಂಸನಿದ್ದವನು ಬ್ರಹ್ಮಯಜ್ಞವನ್ನು, ಯಜಮಾನನನ್ನು ಮತ್ತು ಎಲ್ಲರನ್ನು ( ಮಿಕ್ಕ ಋತ್ವಿಜರನ್ನು ) ರಕ್ಷಿಸುವನು. ಆದುದರಿಂದ ಇಂಥ ವಿದ್ವಾಂಸನನ್ನೆ ಬ್ರಹ್ಮಾ ಎಂದು ನೇಮಿಸಬೇಕು, ಇದನ್ನರಿಯದವನನ್ನು ನೇಮಿಸಬಾರದು, ನೇಮಿಸಬಾರದು.

೧೭ ನೆಯ ಖಂಡವು ಸಮಾಪ್ತವು

ನಾಲ್ಕನೆಯ ಅಧ್ಯಾಯವು ಸಮಾಪ್ತವು

# ೫ ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಒಟ್ಟು ೨೪ ಖಂಡಗಳಿರುವವು. ಮೊದಲನೆಯ ಖಂಡದಲ್ಲಿ ಶರೀರಶಕ್ತಿಗಳಲ್ಲಿ ಎಲ್ಲಕ್ಕೂ ಶ್ರೇಷ್ಠವು ಯಾವುದು, ಎಂಬ ಬಗ್ಗೆ ವಿವೇಚನೆ ಇರುವದು. ಕಣ್ಣು, ಕಿವಿ, ಮನಸು ಮುಂತಾದವುಗಳೆಲ್ಲ ಶರೀರಶಕ್ತಿಗಳೇ ಇದ್ದರೂ ಮುಖ್ಯಪ್ರಾಣವೇ ಪ್ರಧಾನಶಕ್ತಿಯು. ಯಾಕಂದರೆ, ಕಣ್ಣು, ಕಿವಿ, ಮನಸು ಮುಂತಾದವುಗಳಿಲ್ಲದಿದ್ದರೂ ಮನುಷ್ಯನು ಕುರುಡನಂತೆ, ಕಿವುಡನಂತೆ, ಪಡ್ಡನಂತೆ ಜೀವಿಸಬಲ್ಲನು. ಆದರೆ ಮುಖ್ಯಪ್ರಾಣವು ಇಲ್ಲದಿದ್ದರೆ ಮನುಷ್ಯನ ಶರೀರವು ಒಂದು ಕ್ಷಣ ಸಹ ಬಾಳಲಾರದು. ಪ್ರಾಣವು ಶರೀರವನ್ನು ಬಿಟ್ಟು ಹೊರಟಿತೆಂದರೆ ಮಿಕ್ಕ ಶಕ್ತಿಗಳೆಲ್ಲ ತಮ್ಮ ತಳವನ್ನು ತಡವಿಲ್ಲದೆ ಕಿತ್ತುವವು.

ಪ್ರಾಣವು ಅನ್ನ ಮತ್ತು ನೀರು ಇವುಗಳಿಂದ ಪೋಷಿಸಲ್ಪಡುವದು, ಎಂದು ಎರಡನೆಯ ಖಂಡವು ಹೇಳುವದು. ಈ ವಿದ್ಯೆಯನ್ನರಿತವನು ಇದನ್ನು ಒಂದು ಒಣ ಕೊರಡಿಗೆ ಹೇಳಿದರೂ ಅದು ಕೊನರುವದು, ಎಂದು ಉಪನಿಷತ್ಕಾರರು ಹೇಳಿರು-ವರು ! ಇನ್ನು ಯಾವನೊಬ್ಬ ಉಪಾಸಕನು ಮಹತ್ವವನ್ನು ಪಡೆಯಬೇಕೆಂದು ಇಚ್ಛಿಸಿದರೆ, ಅವನು ಮಂಥವನ್ನು ಹೇಗೆ ಮಾಡಬೇಕು, ಅದರ ಆಹುತಿಗಳನ್ನು ಕೊಟ್ಟು ತಾನು ಹೇಗೆ ಭಕ್ಷಿಸಬೇಕು, ಇದನ್ನು ಉಪನಿಷತ್ಕಾರರು ಈ ಖಂಡದಲ್ಲಿ ಹೇಳಿರುವರು. ಆಹುತಿ ಮುಂತಾದವುಗಳನ್ನು ಕೊಟ್ಟು ಅಗ್ನಿಯ ಬಳಿಗೆ ಮಲಗಿದಾಗ ಸ್ತ್ರೀದರ್ಶನವಾದರೆ ಅದು ಶುಭಫಲದಾಯಕವು, ಎಂದು ಪ್ರತಿಪಾದಿಸಿ ಈ ಖಂಡವು ಕೊನೆಗಂಡಿದೆ.

ಮೂರನೆಯ ಖಂಡದಲ್ಲಿ ಶ್ವೇತಕೇತುವು ಪಂಚಾಲರ ಸಮಿತಿಗೆ ಹೋಗುವನು. ಅಲ್ಲಿ ಪ್ರವಾಹಣನು ಅವನಿಗೆ ಐದು ಪ್ರಶ್ನೆಗಳನ್ನು ಕೇಳುವನು. ಅವುಗಳಲ್ಲಿ ಯಾವ ಪ್ರಶ್ನೆಯ ಉತ್ತರವೂ ಅವನಿಗೆ ಬಾರದ್ದರಿಂದ ಅವನು ತಂದೆಯ ಬಳಿಗೆ ತಿರುಗಿ ಹೋಗುವನು. ತಂದೆಗೂ ಆ ಪ್ರಶ್ನೆಗಳು ಬಗೆಹರಿಯುವದಿಲ್ಲ. ಆದುದರಿಂದ ತಂದೆಮಕ್ಕಳಿಬ್ಬರೂ ಪುನಃ ಪ್ರವಾಹಣನ ಬಳಿಗೆ ಹೋಗಿ ಉತ್ತರಗಳನ್ನು ಕೇಳಿ ಕೊಳ್ಳುವರು. ಆಗ ೪-೯ ಈ ಖಂಡಗಳಲ್ಲಿ ದೇವತೆಗಳು ಆಪವನ್ನು ಐದುಸಾರೆ ಹೋಮಿಸಿ ಪುರುಷನನ್ನು ಹೇಗೆ ನಿರ್ಮಾಣಮಾಡುವರು ಎಂಬದನ್ನು ಹೇಳಿ ಪ್ರವಾಹಣನು ೧೦ ನೆಯ ಖಂಡದಲ್ಲಿ ದೇವಯಾನ ಪಿತೃಯಾನ ಮಾರ್ಗ, ಅವು ಎಲ್ಲಿ ಕವಲೊಡೆಯುವವು, ಪ್ರಾಣಿಯು ತಿರುಗಿ ಈ ಲೋಕದಲ್ಲಿ ಯಾವ ರೀತಿ ಬರುವನು, ಈ ಎರಡು ಮಾರ್ಗಗಳಿಲ್ಲದೆ ಪುನರಪಿ ಜನನ, ಪುನರಪಿ ಮರಣ, ಎಂಬ ಮೂರನೆಯ ಗತಿಯು ಮಹಾಪಾತಕಿಗಳಿಗೆ ಹೇಗೆ ಪ್ರಾಪ್ತವಾಗುವದು, ಪಂಚಮಹಾಪಾತಕಗಳು ಯಾವವು, ಇದನ್ನೆಲ್ಲ ಹೇಳುವನು. ಸುವರ್ಣಚೌರ್ಯ, ಬ್ರಹ್ಮಹತ್ಯೆ, ಶೆರೆ ಕುಡಿಯು ವದು, ಗುರುತಲ್ಪಗಮನ, ಈ ಪಾಪಗಳು ಹಾಗೂ ಇವುಗಳನ್ನು ಮಾಡುವವರ

ಜೊತೆಗಾರಿಕೆ ಇವೇ ಪಂಚಮಹಾ ಪಾತಕಗಳು. ಇಷ್ಟೆಲ್ಲ ಹೇಳಿ ಕೊನೆಗೆ ಪಂಚಾಗ್ನಿಯ ಜ್ಞಾನವಿದ್ದವನು ಯಾವ ಪಾಪದಿಂದಲೂ ಲಿಪ್ತನಾಗುವದಿಲ್ಲ, ಎಂದು ಉಪನಿಷತ್ಕಾರರು ಆಶ್ವಾಸನವಿತ್ತಿರುವರು.

೧೧ ನೆಯ ಖಂಡದಲ್ಲಿ ಪ್ರಾಚೀನ ಶಾಲಾದಿ ಐವರು ವೈಶ್ವಾನರ ಆತ್ಮನನ್ನು ಕುರಿತು ಅಂದರೆ ವಿಶ್ವವ್ಯಾಪಿಯಾದ ಆತ್ಮನನ್ನು ಕುರಿತು ಶೋಧ ಮಾಡುವರು. ಅವರು ಮೊದಲು ಉದ್ದಾಲಕನ ಬಳಿಗೆ ಹೋಗುವರು. ಅವನು ಅವರನ್ನು ಅಶ್ವಪತಿ ಕೈಕೇಯನೆಡೆಗೆ ಕರಕೊಂಡು ಹೋಗುವನು. ಅವನು ಇವರೆಲ್ಲರಿಗೂ, ನೀವು ಯಾವ ಆತ್ಮನನ್ನು ಉಪಾಸಿಸುವಿರಿ, ಎಂದು ಪ್ರಶ್ನೆ ಕೇಳಲು ಅವರು ದ್ಯುಲೋಕ, ಆದಿತ್ಯ, ವಾಯು, ಆಕಾಶ, ಅಪ್ಪು, ಪೃಥಿವಿ, ಎಂದು ಕ್ರಮದಿಂದ ಉತ್ತರಕೊಡುವರು. ಆಗ ಅರಸನು ಇವೆಲ್ಲ ಪೂರ್ಣ ಆತ್ಮವಲ್ಲ, ಇವು ಆತ್ಮನ ಅಂಗಗಳು, ಎಂಬ ವಿಷಯವನ್ನು ೧೮ ನೆಯ ಖಂಡದ ವರೆಗೆ ಹೇಳುವನು. ೧೯ ನೆಯ ಖಂಡದಿಂದ ೨೩ ರ ವರೆಗೆ ಪಂಚಾಗ್ನಿಗಳಲ್ಲಿ ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ ಇವುಗಳ ಹೆಸರಿನಿಂದ ಆಹುತಿಗಳನ್ನು ಕೊಡಬೇಕು. ಅಂದರೆ ಎಲ್ಲ ದೇವತೆಗಳು ( ಶಕ್ತಿಗಳು, ತೃಪ್ತವಿರುವವು ಮತ್ತು ಉಪಾಸಕನು ಪಶು, ಪ್ರಜೆಗಳು, ಬ್ರಹ್ಮವರ್ಚಸು) ಮುಂತಾದವುಗಳಿಂದ ಯುಕ್ತನಾಗುವನು ಎಂದು ಅಶ್ವಪತಿರಾಜನು ಹೇಳಿರುವನು.

ಈ ಜ್ಞಾನವನ್ನರಿತು ಹೋಮಿಸಿದವನ ಹವನವೆ ಸಾರ್ಥಕವಾಗುವದು, ಇಲ್ಲದಿದ್ದರೆ ಬರಿಯ ಬೂದಿಯಲ್ಲಿ ಹೋಮಿಸಿದಂತೆ ವ್ಯರ್ಥವು. ಜ್ಞಾನಪೂರ್ಣನಾಗಿ ಆಹುತಿಗಳನ್ನು ಕೊಟ್ಟವನು ಸರ್ವಪಾಪಗಳಿಂದ ಮುಕ್ತನಾಗುವನು, ಎಂದು ೨೪ ನೆಯ ಅಂದರೆ ಈ ಅಧ್ಯಾಯದಲ್ಲಿಯ ಕೊನೆಯ ಖಂಡದಲ್ಲಿ ಉಪನಿಷತ್ಕಾರರು ಹೇಳಿರುವರು.

## ಅಥ ಪಂಚಮೋಽಧ್ಯಾಯಃ

ಓಂ॥ ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಹ ವೈ
ಶ್ರೇಷ್ಠಶ್ಚ ಭವತಿ ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ ॥ ೧ ॥
ಯೋ ಹ ವೈ ವಸಿಷ್ಠಂ ವೇದ ವಸಿಷ್ಠೋ ಹ ಸ್ವಾನಾಂ ಭವತಿ ವಾಗ್ವಾವ
ವಸಿಷ್ಠಃ ॥ ೨ ॥

( ೧ ) ಜ್ಯೇಷ್ಠನನ್ನು ( ಹಿರಿಯನನ್ನು ) ಅರಿತವನು ಜ್ಯೇಷ್ಠನೂ ಶ್ರೇಷ್ಠನೂ ಆಗುವನು. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಇರುವದು.

( ೨ ) ವಸಿಷ್ಠನನ್ನು ( ಧನಿಕನನ್ನು ) ಅರಿತವನು ತಮ್ಮ ಜನರಲ್ಲಿ ವಸಿಷ್ಠನಾಗುವನು. ವಾಣಿಯೆ ವಸಿಷ್ಠವು.

ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತ್ಯಸ್ಮಿꣳಶ್ಚ ಲೋಕೇಽ-
ಮುಷ್ಮಿꣳಶ್ಚ ಚಕ್ಷುರ್ವಾವ ಪ್ರತಿಷ್ಠಾ ॥ ೩ ॥

ಯೋ ಹ ವೈ ಸಂಪದಂ ವೇದ ಸꣳಹಾಸ್ಮೈ ಕಾಮಾಃ ಪದ್ಯಂತೇ ದೈವಾಶ್ಚ
ಮಾನುಷಾಶ್ಚ ಶ್ರೋತ್ರಂ ವಾವ ಸಂಪತ್ ॥ ೪ ॥

ಯೋ ಹ ವಾ ಆಯತನಂ ವೇದಾಯತನꣳ ಹ ಸ್ವಾನಾಂ ಭವತಿ
ಮನೋ ಹ ವಾ ಆಯತನಮ್ ॥ ೫ ॥

ಅಥ ಹ ಪ್ರಾಣಾ ಅಹꣳಶ್ರೇಯಸಿ ವ್ಯೂದಿರೇಽಹꣳಶ್ರೇಯಾನಸ್ಮ್ಯಹꣳ
ಶ್ರೇಯಾನಸ್ಮೀತಿ ॥ ೬ ॥

ತೇ ಹ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುರ್ಭಗವನ್ಕೋ ನಃ
ಶ್ರೇಷ್ಠ ಇತಿ ತಾನ್ಹೋವಾಚ ಯಸ್ಮಿನ್ವ ಉತ್ಕ್ರಾಂತೇ ಶರೀರಂ
ಪಾಪಿಷ್ಠತರಮಿವ ದೃಶ್ಯೇತ ಸ ವಃ ಶ್ರೇಷ್ಠ ಇತಿ ॥ ೭ ॥

ಸಾ ಹ ವಾಗುಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋ-
ವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾಽಕಲಾ ಅವದಂತಃ
ಪ್ರಾಣಂತಃ ಪ್ರಾಣೇನ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ
ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ವಾಕ್ ॥ ೮ ॥

( ೩ ) ಪ್ರತಿಷ್ಠೆಯನ್ನರಿತವನು ಇಹಪರಲೋಕಗಳಲ್ಲಿ ಪ್ರತಿಷ್ಠಿತನಾಗುವನು. ಚಕ್ಷುವೆ ಪ್ರತಿಷ್ಠೆಯು.

( ೪ ) ಸಂಪತ್ತನ್ನರಿತವನಿಗೆ ದೇವತೆಗಳ ಮತ್ತು ಮಾನವರ ಸಂಪತ್ತು ಪ್ರಾಪ್ತವಾಗುವದು. ಶ್ರೋತ್ರವೆ ಸಂಪತ್ತು.

( ೫ ) ಆಯತನವನ್ನರಿತವನು ( ಆಶ್ರಯ ಸ್ಥಾನ ) ತನ್ನ ಬಾಂಧವರ ಆಶ್ರಯನಾಗುವನು. ಮನವೇ ಆಯತನವು.

( ೬ ) ಆಗ ಪ್ರಾಣಗಳು ( ಇಂದ್ರಿಯ ಶಕ್ತಿಗಳು ) 'ನಾನು ಶ್ರೇಷ್ಠ,' 'ನಾನು ಶ್ರೇಷ್ಠ,' ಎಂದವು.

( ೭ ) ಪ್ರಾಣಗಳು ತಂದೆಯಾದ ಪ್ರಜಾಪತಿಯ ಕಡೆಗೆ ಹೋಗಿ, 'ಭಗವನ್, ನಮ್ಮಲ್ಲಿ ಯಾರು ಶ್ರೇಷ್ಠರು ?' ಎಂದು ಕೇಳಿದವು. 'ನಿಮ್ಮೊಳಗಿಂದ ಯಾವನು ಹೊರಟುಹೋದರೆ ಶರೀರವು ಅತ್ಯಂತ ಪಾಪಿಷ್ಠವಾಗುವುದೊ ( ಅಶುಚಿ–ಹೆಣದಂತೆ ) ಅವನೆ ಶೇಷ್ಠನು,' ಎಂದು ಪ್ರಜಾಪತಿಯು ಉತ್ತರ ಕೊಟ್ಟನು.

( ೮ ) ವಾಣಿಯು ( ಶರೀರದಿಂದ ) ಹೊರಟು ಹೋಯಿತು. ಒಂದು

ಚಕ್ಷುರ್ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾಂಧಾ ಅಪಶ್ಯಂತಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಶೃಣ್ವಂತಃ ಶ್ರೋತ್ರೇಣ ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ಚಕ್ಷುಃ ॥ ೯ ॥

ಶ್ರೋತ್ರಂ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಧಿರಾ ಅಶೃಣ್ವಂತಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ಶ್ರೋತ್ರಂ ॥ ೧೦ ॥

ವರ್ಷ ಹೊರಗೆ ಇದ್ದು, ನಂತರ ತಿರುಗಿ ಬಂದು ಅಂದದ್ದು, 'ನನ್ನ ವಿನಾ ಇದು (ಶರೀರವು) ಜೀವದಿಂದಿರಲು ಹೇಗೆ ಸಮರ್ಥವಾಯಿತು?' ಆಗ 'ಮೂಕರು ಮಾತಾಡದೆ ಜೀವಿಸುವಂತೆ ಪ್ರಾಣಗಳಿಂದ (ವಾಯುಗಳಿಂದ) ಉಸುರಾಡಿಸುತ್ತ, ಕಣ್ಣುಗಳಿಂದ ನೋಡುತ್ತ, ಕಿವಿಯಿಂದ ಕೇಳುತ್ತ, ಮನಸಿನಿಂದ ಧ್ಯಾನಿಸುತ್ತ ಈ ಶರೀರವು ಜೀವಿಸಿತು,' (ಎಂದು ಮಿಕ್ಕ ಪ್ರಾಣ ಶಕ್ತಿಗಳು ಹೇಳಿದವು.) ಅದನ್ನು ಕೇಳಿ ವಾಣಿಯು ಪುನಃ ಪ್ರವೇಶಿಸಿತು.

(೯) ಚಕ್ಷುವು ಹೊರಟು ಹೋಯಿತು. ಒಂದು ವರ್ಷ ಹೊರಗೆ ಇದ್ದು ನಂತರ ತಿರುಗಿ ಬಂದು ಅಂದದ್ದು, 'ನನ್ನ ವಿನಾ ಈ ಶರೀರವು ಜೀವದಿಂದಿರಲು ಹೇಗೆ ಸಮರ್ಥವಾಯಿತು?' ಆಗ, 'ಕುರುಡರು ನೋಡಲರಿಯದೆ ಜೀವಿಸುವಂತೆ ಪ್ರಾಣಗಳಿಂದ ಉಸುರಾಡಿಸುತ್ತ, ವಾಣಿಯಿಂದ ಮಾತಾಡುತ್ತ, ಕಿವಿಗಳಿಂದ ಕೇಳುತ್ತ, ಮನಸಿನಿಂದ ಧ್ಯಾನಿಸುತ್ತ ಈ ಶರೀರವು ಜೀವಿಸಿತು,' (ಎಂದು ಪ್ರಾಣಗಳು ಹೇಳಿದವು). ಅದನ್ನು ಕೇಳಿ ಚಕ್ಷು ಪುನಃ ಪ್ರವೇಶ ಮಾಡಿತು.

(೧೦) ಶ್ರೋತ್ರವು ಹೊರಟು ಹೋಯಿತು. ಒಂದು ವರ್ಷ ಹೊರಗೆ ಇದ್ದು ನಂತರ ತಿರುಗಿ ಬಂದು ಅಂದದ್ದು, 'ನನ್ನ ವಿನಾ ಈ ಶರೀರವು ಜೀವದಿಂದಿರಲು ಹೇಗೆ ಸಮರ್ಥವಾಯಿತು?' ಆಗ, 'ಕಿವುಡರು ಕೇಳಲರಿಯದೆ ಜೀವಿಸುವಂತೆ ಪ್ರಾಣಗಳಿಂದ ಉಸುರಾಡಿಸುತ್ತ, ವಾಣಿಯಿಂದ ನುಡಿಯುತ್ತ, ಕಣ್ಣುಗಳಿಂದ ನೋಡುತ್ತ, ಮನಸಿನಿಂದ ಧ್ಯಾನಿಸುತ್ತ, ಈ ಶರೀರವು ಜೀವಿಸಿತು,' (ಎಂದು ಮಿಕ್ಕ ಪ್ರಾಣಗಳು ಹೇಳಿದವು). ಅದನ್ನು ಕೇಳಿ ಶ್ರೋತ್ರವು ಪುನಃ ಪ್ರವೇಶ ಮಾಡಿತು.

ಮನೋ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಾಲಾ ಅಮನಸಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣೈವಮಿತಿ ಪ್ರವಿವೇಶ ಹ ಮನಃ ॥ ೧೧ ॥

ಅಥ ಹ ಪ್ರಾಣ ಉಚ್ಚಿಕ್ರಮಿಷನ್ತ್ಸ ಯಥಾ ಸುಹಯಃ ಪಡ್ವೀಶಶಂಕೂನ್ತ್ಸಂಖಿದೇದೇವಮಿತರಾನ್ಪ್ರಾಣಾನ್ಸಮಖಿದತ್ತꣳ ಹಾಭಿಸಮೇತ್ಯೋಚುರ್ಭಗವನ್ನೇಧಿ ತ್ವಂ ನಃ ಶ್ರೇಷ್ಠೋಽಸಿ ಮೋತ್ಕ್ರಮೀರಿತಿ ॥ ೧೨ ॥

ಅಥ ಹೈನಂ ವಾಗುವಾಚ ಯದಹಂ ವಸಿಷ್ಠೋಽಸ್ಮಿ ತ್ವಂ ತದ್ವಸಿಷ್ಠೋಽಸೀತ್ಯಥ ಹೈನ ಚಕ್ಷುರುವಾಚ ಯದಹಂ ಪ್ರತಿಷ್ಠಾಽಸ್ಮಿ ತ್ವಂ ತತ್ಪ್ರತಿಷ್ಠಾಸೀತಿ ॥ ೧೩ ॥

ಅಥ ಹೈನಂ ಶ್ರೋತ್ರಮುವಾಚ ಯದಹꣳ ಸಂಪದಸ್ಮಿ ತ್ವಂ ತತ್ಸಂಪದಸೀತ್ಯಥ ಹೈನಂ ಮನ ಉವಾಚ ಯದಹಮಾಯತನಮಸ್ಮಿ ತ್ವಂ ತದಾಯತನಮಸೀತಿ ॥ ೧೪ ॥

( ೧೧ ) ಮನಸು ಹೊರಟು ಹೋಯಿತು. ಒಂದು ವರ್ಷ ಹೊರಗೆ ಇದ್ದು ನಂತರ ತಿರುಗಿ ಬಂದು ಅಂದದ್ದು, 'ನನ್ನ ವಿನಾ ಈ ಶರೀರವು ಜೀವದಿಂದಿರಲು ಹೇಗೆ ಸಮರ್ಥವಾಯಿತು ?' ಆಗ, 'ಬಾಲಕರು ( ಅಪ್ರಬುದ್ಧರು ) ವಿಚಾರ ಮಾಡಲರಿಯದೆ ಜೀವಿಸುವಂತೆ ಪ್ರಾಣಗಳಿಂದ ಉಸುರಾಡಿಸುತ್ತ, ವಾಣಿಯಿಂದ ನುಡಿಯುತ್ತ, ಕಣ್ಣುಗಳಿಂದ ನೋಡುತ್ತ, ಕಿವಿಗಳಿಂದ ಕೇಳುತ್ತ ಶರೀರವು ಜೀವಿಸಿತು.' ( ಎಂದು ಮಿಕ್ಕ ಪ್ರಾಣಗಳು ಹೇಳಿದವು ). ಅದನ್ನು ಕೇಳಿ ಮನಸು ಪುನಃ ಪ್ರವೇಶ ಮಾಡಿತು.

( ೧೨ ) ಬಳಿಕ ಒಂದು ಉತ್ತಮ ಕುದುರೆಯು ತನ್ನ ಕಾಲು ಕಟ್ಟಿದ ಗೂಟಗಳನ್ನು ಕಿತ್ತಿ ಬಿಡುವಂತೆ ಹೊರಗೆ ಹೋಗಲನುವಾದ ಮುಖ್ಯ ಪ್ರಾಣವು ಮಿಕ್ಕ ಶಕ್ತಿಗಳನ್ನು ಶರೀರದಿಂದ ಕಿತ್ತಿಬಿಟ್ಟಿತು. ಆಗ ಆ ಶಕ್ತಿಗಳೆಲ್ಲ ಮುಖ್ಯ ಪ್ರಾಣದೆಡೆಗೆ ಬಂದು 'ಹೇ ಭಗವನ್, ನೀನು ನಮ್ಮ ಸ್ವಾಮಿಯಾಗು. ನೀನೆ ನಮ್ಮೊಳಗೆ ಶ್ರೇಷ್ಠನು. ನೀನು ಹೊರಟು ಹೋಗಬೇಡ,' ಎಂದು ಬೇಡಿಕೊಂಡವು.

( ೧೩ ) ಆಗ ಮುಖ್ಯಪ್ರಾಣವನ್ನು ಕುರಿತು ವಾಣಿಯು, 'ನಾನು ವಸಿಷ್ಠನಿದ್ದುದು ನಿಜವಾಗಿ ನೀನು ಪ್ರತಿಷ್ಠಿತನಿದ್ದುದರಿಂದಲೆ,' ಅಂದಿತು.

( ೧೪ ) ಶ್ರೋತ್ರವು, 'ನಾನು ಸಂಪತ್ತು ಇದ್ದುದು ನೀನು ನಿಜವಾಗಿ

ನ ವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತ್ಯಾಚಕ್ಷತೇ
ಪ್ರಾಣಾ ಇತ್ಯೇವಾಚಕ್ಷತೇ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವಂತಿ ॥ ೧೫ ॥

॥ ಇತಿ ಪ್ರಥಮಃ ಖಂಡಃ ॥

ಸಂಪತ್ತು ಇದ್ದುದರಿಂದಲೆ,' ಎಂದು, ಮನವು 'ನಾನು ಆಶ್ರಯಸ್ಥಾನವಿದ್ದುದು ನೀನು ನಿಜವಾಗಿ ಆಶ್ರಯಸ್ಥಾನವಿದ್ದದರಿಂದಲೆ,' ಎಂದು ಹೇಳಿದವು, (ಎಲ್ಲ ಇಂದ್ರಿಯ ಶಕ್ತಿಗಳಿಲ್ಲಿದ್ದ ಗುಣಗಳು ಮುಖ್ಯಪ್ರಾಣದ ಮೂಲಕವೆ ಎಂದರ್ಥ).

(೧೫) ವಾಣಿ, ಕಣ್ಣುಗಳು, ಕಿವಿಗಳು, ಮನಗಳು (ಇವು ಪ್ರತ್ಯೇಕ ಶಕ್ತಿಗಳು) ಎಂದು ಜನರು ಅನ್ನುವದಿಲ್ಲ, ಪ್ರಾಣಗಳು ಎಂದೇ ಅನ್ನುವರು, ಪ್ರಾಣವೇ ಇದೆಲ್ಲ ಆಗುವದು.

೧ ನೆಯ ಖಂಡವು ಸಮಾಪ್ತವು

ಸ ಹೋವಾಚ ಕಿಂ ಮೇಽನ್ನಂ ಭವಿಷ್ಯತೀತಿ ಯತ್ಕಿಂಚಿದಿದಮಾಶ್ವಭ್ಯ
ಆ ಶಕುನಿಭ್ಯ ಇತಿ ಹೋಚುಸ್ತದ್ವಾ ಏತದನಸ್ಯಾನ್ನಮನೋ ಹ ವೈ ನಾಮ
ಪ್ರತ್ಯಕ್ಷಂ ನ ಹವಾ ಏವಂವಿದಿ ಕಿಂಚನಾನನ್ನಂ ಭವತೀತಿ ॥ ೧ ॥

ಸ ಹೋವಾಚ ಕಿಂ ಮೇ ವಾಸೋ ಭವಿಷ್ಯತೀತ್ಯಾಪ ಇತಿ ಹೋಚುಸ್ತಸ್ಮಾದ್ವಾ
ಏತದಶಿಷ್ಯಂತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್ಭಿಃ ಪರಿದಧತಿ ಲಂಭುಕೋ
ಹ ವಾಸೋ ಭವತ್ಯನಗ್ನೋ ಹ ಭವತಿ ॥ ೨ ॥

(೧) ಅವನು (ಮುಖ್ಯಪ್ರಾಣನು) 'ನನ್ನ ಅನ್ನವು ಯಾವದು,' ಎಂದು ಕೇಳಿದನು. 'ನಾಯಿಗಳು ಮುಂತಾದ ಪಶುಪಕ್ಷಿಗಳೆಲ್ಲ ತಿನ್ನುತ್ತಿರುವ ಅನವೆಲ್ಲ ನಿನ್ನದೇ,' ಎಂದು (ಮಿಕ್ಕಪ್ರಾಣಿಗಳು) ಹೇಳಿದವು. ಅದೇ 'ಅನ'ದ (ಪ್ರಾಣದ) ಅನ್ನವು. 'ಅನ' ಇದು ಪ್ರತ್ಯಕ್ಷಪ್ರಾಣದ ಹೆಸರು ಇರುವದು. ಇದನ್ನರಿತವನಿಗೆ ಯಾವುದೂ ಅನನ್ನವಾಗದು (ಎಲ್ಲವೂ ಅನ್ನ ರೂಪವಾಗುವದು).

(೨) ಅವನು 'ನನ್ನ ವಸ್ತ್ರವು ಯಾವುದು,' ಎಂದು ಕೇಳಿದನು. 'ನೀರು' ಎಂದು ಪ್ರಾಣಗಳು ಹೇಳಿದವು. ಆದುದರಿಂದ ತಿನ್ನುವವರು

ತದ್ಧೈತತ್ಸತ್ಯಕಾಮೋ ಜಾಬಾಲೋ ಗೋಶ್ರುತಯೇ ವೈಯಾಘ್ರಪದ್ಯಾ-
ಯೋಕ್ತ್ವೋವಾಚ ಯದ್ಯಪ್ಯೇನಚ್ಛುಷ್ಕಾಯ ಸ್ಥಾಣವೇ ಬ್ರೂಯಾ-
ಜ್ಜಾಯೇರನ್ನೇವಾಸ್ಮಿಂಛಾಖಾಃ ಪ್ರರೋಹೇಯುಃ ಪಲಾಶಾನೀತಿ || ೩ ||

ಅಥ ಯದಿ ಮಹಜ್ಜಿಗಮಿಷೇದಮಾವಾಸ್ಯಾಯಾಂ ದೀಕ್ಷಿತ್ವಾ ಪೌರ್ಣ-
ಮಾಸ್ಯಾಂ ರಾತ್ರೌ ಸರ್ವೌಷಧಸ್ಯ ಮಂಥಂ ದಧಿಮಧುನೋರುಪಮಥ್ಯ
ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ
ಸಂಪಾತಮವನಯೇತ್ || ೪ ||

ವಸಿಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾತಮವನ-
ಯೇತ್ಪ್ರತಿಷ್ಠಾಯೈ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾತ-
ಮವನಯೇತ್ಸಂಪದೇ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ
ಸಂಪಾತಮವನಯೇದಾಯತನಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ-
ಮಂಥೇ ಸಂಪಾತಮವನಯೇತ್ || ೫ ||

ಊಟದ ಮೊದಲು ಮತ್ತು ಕೊನೆಗೆ (ಊಟವನ್ನು) ನೀರಿನಿಂದ ಆಚ್ಛಾದಿಸುವರು (ನೀರು ಕುಡಿಯುವರು). ಅವನಿಗೆ (ಇದನ್ನರಿತವನಿಗೆ) ವಸ್ತ್ರವು ದೊರೆಯುವದು, ಅವನು ಎಂತೂ ಬತ್ತಲೆ ಇರುವ ಪ್ರಸಂಗ ಬರದು. (ಅವನಿಗೆ ಯಾವಾಗಲೂ ವಸ್ತ್ರವು ದೊರೆಯುವದು).

(೩) ಇದನ್ನು (ಈ ವಿದ್ಯೆಯನ್ನು) ಸತ್ಯಕಾಮ ಜಾಬಾಲನು ವೈಯ್ಯಾಘ್ರಪದ್ಯ ಗೋಶ್ರುತಿಗೆ ಹೇಳಿ ಅಂದದ್ದು, 'ಇದನ್ನು ಒಂದು ಒಣ ಬೊಡ್ಡೆಗೆ ಹೇಳಿದರೂ ಅದು ಕವಲೊಡೆದು ಚಿಗುರುವದು.'

(೪) ಉಪಾಸಕನು ಮಹತ್ವವನ್ನು ಪಡೆಯಬೇಕೆಂದು ಇಚ್ಛಿಸಿದರೆ ಅಮಾವಾಸ್ಯೆಯ ದಿನ ದೀಕ್ಷೆ ಪಡೆದು ಹುಣ್ಣಿಮೆಯ ರಾತ್ರಿ ಎಲ್ಲ ವನಸ್ಪತಿಗಳನ್ನು ಮೊಸರು ಜೇನುತುಪ್ಪಗಳಲ್ಲಿ ಕೂಡಿಸಿ, ಮಥಿಸಿ 'ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ' ಎಂದು ಅಗ್ನಿಯಲ್ಲಿ ತುಪ್ಪದ ಆಹುತಿಕೊಟ್ಟು ಮಂಥದ (ವನಸ್ಪತಿಗಳಿಂದ ತಯಾರ ಮಾಡಿದ) ಮೇಲೆ ತುಪ್ಪದ ಅನ್ನಶೇಷವನ್ನು ಸುರುವ ಬೇಕು.

(೫) ಅದೇ ರೀತಿ ಅನುಕ್ರಮದಿಂದ ವಸಿಷ್ಠಾಯ ಸ್ವಾಹಾ, ಪ್ರತಿಷ್ಠಾಯ ಸ್ವಾಹಾ, ಸಂಪದಾಯ ಸ್ವಾಹಾ, ಆಯತನಾಯ ಸ್ವಾಹಾ, ಎಂದು ಅಗ್ನಿಯಲ್ಲಿ

ಅಥ ಪ್ರತಿಸೃಪ್ಯಾಂಜ್ಞಲೌ ಮಂಥಮಾಧಾಯ ಜಪತ್ಯಮೋ ನಾಮಾಸ್ಯಮಾ ಹಿ
ತೇ ಸರ್ವಮಿದಲ್ಂ ಸ ಹಿ ಜ್ಯೇಷ್ಠಃ ಶ್ರೇಷ್ಠೋ ರಾಜಾಧಿಪತಿಃ ಸ ಮಾ
ಜ್ಯೈಷ್ಠ್ಯಲ್ಂ ಶ್ರೈಷ್ಠ್ಯಲ್ಂರಾಜ್ಯಮಾಧಿಪತ್ಯಂ ಗಮಯತ್ವಹಮೇವೇದಲ್ಂ
ಸರ್ವಮಸಾನೀತಿ || ೬ ||

ಅಥ ಖಲ್ವೇತಯರ್ಚಾ ಪಚ್ಛ ಆಚಾಮತಿ ತತ್ಸವಿತುರ್ವೃಣೀಮಹ ಇತ್ಯಾ-
ಚಾಮತಿ ವಯಂ ದೇವಸ್ಯ ಭೋಜನಮಿತ್ಯಾಚಾಮತಿ ಶ್ರೇಷ್ಠಲ್ಂ ಸರ್ವ-
ಧಾತಮಮಿತ್ಯಾಚಾಮತಿ ತುರಂ ಭಗಸ್ಯ ಧೀಮಹೀತಿ ಸರ್ವಂ ಪಿಬತಿ || ೭ ||

ನಿರ್ಣಿಜ್ಯ ಕಲ್ಂಸಂ ಚಮಸಂ ವಾ ಪಶ್ಚಾದಗ್ನೇಃ ಸಂವಿಶತಿ ಚರ್ಮಣಿ ವಾ
ಸ್ಥಂಡಿಲೇ ವಾ ವಾಚಂಯಮೋಽಪ್ರಸಾಹಃ ಸ ಯದಿ ಸ್ತ್ರಿಯಂ ಪಶ್ಯೇತ್ಸ-
ಮೃದ್ಧಂ ಕರ್ಮೇತಿ ವಿದ್ಯಾತ್ || ೮ ||

ಒಂದೊಂದು ತುಪ್ಪದ ಆಹುತಿಯನ್ನು ಕೊಟ್ಟು ಘೃತಾವಶೇಷವನ್ನು ಮಂಥದ ಮೇಲೆ ಸುರುವಬೇಕು.

(೬) ಬಳಿಕ ಅಗ್ನಿಯಿಂದ ಸ್ವಲ್ಪ ದೂರ ಸರಿದು ಮಂಥವನ್ನು ಬೊಗಸೆಯಲ್ಲಿ ಹಿಡಿದು ಉಪಾಸಕನು, 'ಹೇ ಮಂಥವೇ, ಶ್ರೇಷ್ಠವು, ಜ್ಯೇಷ್ಠವು, ಪ್ರಕಾಶಮಾನವು, ಅಧಿಪತಿಯು, ಅದೇ ನನ್ನನ್ನು ಶ್ರೇಷ್ಠ, ಜ್ಯೇಷ್ಠ, ಪ್ರಕಾಶಮಾನ್ ಮತ್ತು ಅಧಿಪತಿಯನ್ನಾಗಿ ಮಾಡಲಿ. ನಾನು ಇದೆಲ್ಲ ಆಗಲಿ' ಎಂದು ಜಪಮಾಡುವನು.

(೭-೮) ಆ ಮೇಲೆ (ಮುಂದಿನ ಮಂತ್ರವನ್ನು ಭಾಗಶಃ ಅನ್ನುತ್ತ ಮಂಥವನ್ನು ಮೂರು ತುತ್ತು ಮಾಡಿ ಭಕ್ಷಿಸುವನು. ಇಲ್ಲಿ ಇಡೀ ಮಂತ್ರದ ಅರ್ಥವನ್ನು ಒಮ್ಮೆಲೇ ಕೊಟ್ಟಿದೆ.) 'ಪ್ರಕಾಶಮಾನ್ ಸೂರ್ಯನ ಈ ಭೋಜನವನ್ನು (ಮಂಥವನ್ನು) ನಾವು ಪ್ರಾರ್ಥಿಸುವೆವು', ಎಂದು ಆಚಮನ ಮಾಡುವನು. ಇದು ಶ್ರೇಷ್ಠವು, ಸರ್ವಾಧಾರವು, ಎಂದು ಆಚಮನಮಾಡುವನು. ಶೀಘ್ರವಾಗಿ ನಾವು ಸೂರ್ಯರೂಪವನ್ನು ಧ್ಯಾನಿಸುವೆವು, ಎಂದು ಆಚಮನ ಮಾಡುವನು. ಹೀಗೆ ಅಂದು ಅವನು ಎಲ್ಲವನ್ನೂ ಕುಡಿದು ಬಿಡುವನು. ಕಂಸ ಅಥವಾ ಚಮನದಂತಿರುವ ಪಾತ್ರವನ್ನು ತೊಳೆದು ಬಿಡುವನು. ಬಳಿಕ ಅಗ್ನಿಯ ಪಶ್ಚಾತ್ ಭಾಗದಲ್ಲಿ (ಪಶ್ಚಿಮ) ಚರ್ಮದ ಮೇಲೆ ಅಥವಾ ಸ್ಥಂಡಿಲದ ಮೇಲೆ (ಯಜ್ಞಭೂಮಿ) ವಾಣಿಯ ಸಂಯಮನ ಮಾಡಿ ಕೆಟ್ಟಕನಸು ಮುಂತಾದವು ಬೀಳದಂತೆ (ಅಪ್ರಸಾಹಃ) ಮಲಗುವನು.

ತದೇಷ ಶ್ಲೋಕ�ః ॥ ಯದಾ ಕರ್ಮಸು ಕಾಮ್ಯೇಷು ಸ್ತ್ರಿಯꣳ ಸ್ವಪ್ನೇಷು
ಪಶ್ಯತಿ ॥ ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ಸ್ವಪ್ನನಿದರ್ಶನೇ ತಸ್ಮಿನ್ಸ್ವ-
ಪ್ನನಿದರ್ಶನೇ ॥ ೯ ॥

॥ ಇತಿ ದ್ವಿತೀಯಃ ಖಂಡಃ ॥

ಕನಸಿನಲ್ಲಿ ಸ್ತ್ರೀಯನ್ನು ನೋಡಿದರೆ ಕರ್ಮವು ಫಲದಾಯಕವಾಯಿತೆಂದು ತಿಳಿಯತಕ್ಕದ್ದು.

(೯) ಆ ಬಗ್ಗೆ ಈ ಶ್ಲೋಕವಿರುವದು: ಕಾಮ್ಯ ಕರ್ಮಗಳನ್ನು ಮಾಡುತಿರುವಾಗ ಸ್ವಪ್ನದಲ್ಲಿ ಸ್ತ್ರೀಯನ್ನು ನೋಡಿದರೆ ಆ ಕರ್ಮವು ಸಮೃದ್ಧವಾಗುವುದೆಂದು ತಿಳಿಯಬೇಕು, ಆ ಸ್ವಪ್ನ ನೋಡಿದರೆ, ಆ ಸ್ವಪ್ನ ನೋಡಿದರೆ—

೨ ನೆಯ ಖಂಡವು ಸಮಾಪ್ತವು

ಶ್ವೇತಕೇತುರ್ಹಾರುಣೇಯಃ ಪಂಚಾಲಾನಾꣳ ಸಮಿತಿಮೇಯಾಯ ತꣳಹ
ಪ್ರವಾಹಣೋ ಜೈವಲಿರುವಾಚ ಕುಮಾರಾನು ತ್ವಾಶಿಷತ್ಪಿತೇತ್ಯನು
ಹಿ ಭಗವ ಇತಿ ॥ ೧ ॥

ವೇತ್ಥ ಯದಿತೋಽಧಿ ಪ್ರಜಾಃ ಪ್ರಯಂತೀತಿ ನ ಭಗವ ಇತಿ ವೇತ್ಥ ಯಥಾ
ಪುನರಾವರ್ತಂತಾ೩ ಇತಿ ನ ಭಗವ ಇತಿ ವೇತ್ಥ ಪಥೋರ್ದೇವಯಾನಸ್ಯ
ಪಿತೃಯಾಣಸ್ಯ ಚ ವ್ಯಾವರ್ತನಾ೩ ಇತಿ ನ ಭಗವ ಇತಿ ॥ ೨ ॥

(೧) ಶ್ವೇತಕೇತು ಆರುಣೇಯನು ಪಂಚಾಲ ದೇಶದ ಜನರ ಸಮಿತಿಗೆ ಬಂದನು. ಅವನಿಗೆ ಪ್ರವಾಹಣ ಜೈವಲಿಯು (ಅರಸನು) ಅಂದದ್ದು, 'ಕುಮಾರನೇ, ತಂದೆಯು ನಿನಗೆ ವಿದ್ಯೆ ಕಲಿಸಿರುವನೋ?' 'ಅಹುದು ಭಗವನ್' ಎಂದು ಅವನು ಉತ್ತರ ಕೊಟ್ಟನು.

(೨) ಅವನು (ಪ್ರವಾಹಣನು) ಕೇಳಿದ್ದು, 'ಇಲ್ಲಿಂದ ಸತ್ತು ಹೋದ ಪ್ರಜೆಗಳು ಎಲ್ಲಿ ಹೋಗುವರು, ಇದನ್ನು ಬಲ್ಲೆಯಾ?' 'ಇಲ್ಲ ಸ್ವಾಮೀ' 'ಅವರು ಪುನಃ ಈ ಲೋಕಕ್ಕೆ ಹೇಗೆ ಬರುವರು, ಇದನ್ನರಿತಿರುವೆಯಾ?' 'ಇಲ್ಲ ಭಗವನ್' 'ದೇವಯಾನ ಪಿತೃಯಾನ ಈ ಎರಡೂ ಹಾದಿಗಳು ಎಲ್ಲಿಂದ ಒಡೆಯುವವು, ಇದರ ಜ್ಞಾನವು ನಿನಗೆ ಇರುವದೊ?' 'ಇಲ್ಲ ಮಹಾಸ್ವಾಮೀ.'

ವೇತ್ಥ ಯಥಾಸೌ ಲೋಕೋ ನ ಸಂಪೂರ್ಯತ೩ ಇತಿ ನ ಭಗವ ಇತಿ ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತಿ ನೈವ ಭಗವ ಇತಿ ॥ ೩ ॥

ಅಥಾನು ಕಿಮನುಶಿಷ್ಟೋಽವೋಚಥಾ ಯೋ ಹೀಮಾನಿ ನ ವಿದ್ಯಾತ್ಕಥಂ ಸೋಽನುಶಿಷ್ಟೋ ಬ್ರುವೀತೇತಿ ಸ ಹಾಯಸ್ತಃ ಪಿತುರರ್ಧಮೇಯಾಯ ತಂ ಹೋವಾಚಾಽನನುಶಿಷ್ಯ ವಾವ ಕಿಲ ಮಾ ಭಗವಾನಬ್ರವೀದನು ತ್ವಾಶಿಷಮಿತಿ ॥ ೪ ॥

ಪಂಚ ಮಾ ರಾಜನ್ಯಬಂಧುಃ ಪ್ರಶ್ನಾನಪ್ರಾಕ್ಷೀತ್ತೇಷಾಂ ನೈಕಂಚನಾಶಕಂ ವಿವಕ್ತುಮಿತಿ ಸ ಹೋವಾಚ ಯಥಾ ಮಾ ತ್ವಂ ತದೇತಾನವದೋ ಯಥಾಹಮೇಷಾಂ ನೈಕಂಚನ ವೇದ ಯದ್ಯಹಮಿಮಾನವೇದಿಷ್ಯಂ ಕಥಂ ತೇ ನಾವಕ್ಷ್ಯಮಿತಿ ॥ ೫ ॥

( ೩ ) 'ಆ ಲೋಕವು ( ಪರಲೋಕವು) ಅದೇಕೆ ತುಂಬಿ ( ಇಲ್ಲಿಂದ ಹೋದ ಜನರಿಂದ) ಹೋಗುವುದಿಲ್ಲ, ಎಂಬುದನ್ನು ಅರಿತಿರುವೆಯಾ?' 'ಇಲ್ಲ ಸ್ವಾಮೀ.' 'ಆಪವು ಐದನೆಯ ಆಹುತಿಯಲ್ಲಿ 'ಪುರುಷ' ಎಂಬ ಸಂಜ್ಞೆಯನ್ನು ಹೇಗೆ ಪಡೆಯುವದು, ಇದನ್ನು ಬಲ್ಲೆಯಾ?' 'ಇಲ್ಲ ಸ್ವಾಮೀ.'

( ೪ ) 'ಹೀಗಿದ್ದರೆ, 'ನಾನು ವಿದ್ಯೆಯನ್ನು ಕಲಿತಿರುವೆನು' ಎಂದು ನೀನು ಏಕೆ ಹೇಳಿದಿ? ಈ ಪ್ರಶ್ನೆಗಳ ಉತ್ತರವನ್ನರಿಯದವನು ಕಲಿತವನೆಂದು ಹೇಗೆ ಹೇಳಲಾದೀತು?' ಎಂದು ಪ್ರವಾಹಣನು ಕೇಳಿದನು. ಕುಮಾರನು ಮನಸಿನಲ್ಲಿ ನೊಂದು, ತಂದೆ ಇದ್ದೆಡೆಗೆ ಬಂದು, 'ನನಗೆ ವಿದ್ಯೆ ಕಲಿಸದೆಯೆ ಕಲಿಸಿರುವೆನೆ'ಂದು ಹೇಳಿದಿರಿ.

( ೫ ) ಕ್ಷತ್ರಿಯನು ( ಪ್ರವಾಹಣನು ) ಈ ಐದು ಪ್ರಶ್ನೆಗಳನ್ನು ಕೇಳಿದನು. ಆವುಗಳಲ್ಲಿಯ ಒಂದಕ್ಕೂ ಉತ್ತರ ಕೊಡಲು ನಾನು ಸಮರ್ಥನಾಗಲಿಲ್ಲ' ಎಂದನು. ಇದನ್ನು ಕೇಳಿ ತಂದೆಯು ಅಂದದ್ದು, 'ನೀನು ನನಗೆ ಈಗ ಈ ಪ್ರಶ್ನೆಗಳನ್ನು ಕೇಳಿದೆ, ಇವುಗಳಲ್ಲಿ ಒಂದರ ಉತ್ತರವನ್ನೂ ನಾನರಿಯೆನು, ಇವುಗಳ ಉತ್ತರವು ನನಗೆ ಗೊತ್ತಿದ್ದರೆ ನಾನು ನಿನಗೆ ಹೇಳದೆ ಇರುತಿದ್ದೇನೆ?'

ಸ ಹ ಗೌತಮೋ ರಾಜ್ಞೋಽರ್ಧಮೇಯಾಯ ತಸ್ಮೈ ಹ ಪ್ರಾಪ್ತಾಯಾ-
ಹಾರ್ಂಚಕಾರ ಸ ಹ ಪ್ರಾತಃ ಸಭಾಗ ಉದೇಯಾಯ ತಂ ಹೋವಾಚ
ಮಾನುಷಸ್ಯ ಭಗವನ್ಗೌತಮ ವಿತ್ತಸ್ಯ ವರಂ ವೃಣೀಥಾ ಇತಿ ಸ
ಹೋವಾಚ ತವೈವ ರಾಜನ್ಮಾನುಷಂ ವಿತ್ತಂ ಯಾಮೇವ ಕುಮಾರ-
ಸ್ಯಾಂತೇ ವಾಚಮಭಾಷಥಾಸ್ತಾಮೇವ ಮೇ ಬ್ರೂಹೀತಿ || ೬ ||

ಸ ಹ ಕೃಚ್ಛ್ರೀಬಭೂವ ತಂ ಹ ಚಿರಂ ವಸೇತ್ಯಾಜ್ಞಾಪಯಾಂಚಕಾರ ತಂ
ಹೋವಾಚ ಯಥಾ ಮಾ ತ್ವಂ ಗೌತಮಾವದೋ ಯಥೇಯಂ ನ
ಪ್ರಾಕ್ ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ಗಚ್ಛತಿ ತಸ್ಮಾದು ಸರ್ವೇಷು
ಲೋಕೇಷು ಕ್ಷತ್ರಿಯಸ್ಯೈವ ಪ್ರಶಾಸನಮಭೂದಿತಿ ತಸ್ಮೈ ಹೋವಾಚ || ೭ ||

|| ಇತಿ ತೃತೀಯಃ ಖಂಡಃ ||

(೬) ಆಗ ಗೌತಮನು (ತಂದೆಯು) ಅರಸನಿದ್ದೆಡೆಗೆ (ಪ್ರವಾಹಣ ನೆಡೆಗೆ) ಹೋದನು. ಅರಸನು ಅವನಿಗೆ ಯೋಗ್ಯ ಸತ್ಕಾರಮಾಡಿದನು. ಪೂಜ್ಯನಾದ ಗೌತಮನು ಬೆಳಿಗ್ಗೆ ಅರಸನ ಬಳಿಗೆ ಹೋದನು. ಆಗ ಅರಸನು, 'ಗೌತಮನೇ, ಮನುಷ್ಯರಿಗೆ ಬೇಕಾಗುವ ಎಲ್ಲ ಸಂಪತ್ತನ್ನು ಬೇಡಿಕೊ,' ಎಂದನು. ಇದನ್ನು ಕೇಳಿ ಗೌತಮನು ಅಂದದ್ದು, 'ಅರಸನೆ, ಆ ಸಂಪತ್ತು ನಿನ್ನ ಬಳಿಗೆಯೇ ಇರಲಿ. ನನ್ನ ಮಗನಿಗೆ ಕೇಳಿದ ಪ್ರಶ್ನೆಗಳ ವಿಷಯವನ್ನೆ ನನಗೆ ಹೇಳು.' ಆಗ ಅರಸನು ತೊಂದರೆಗೆ ಒಳಗಾದನು.

(೭) ಬಹುಕಾಲ ಇಲ್ಲಿ ಇರು (ಬ್ರಹ್ಮಚರ್ಯ ವ್ರತದಿಂದ) ಎಂದು ಅರ-ಸನು ಆಜ್ಞಾಪಿಸಿದನು. ಬಳಿಕ ಅರಸನು ಅಂದದ್ದು, 'ಗೌತಮನೇ, ನೀನು ಈಗ ವಿದ್ಯೆಯನ್ನು ಹೇಳು, ಎಂದು ನನ್ನನ್ನು ಕೇಳಿದ್ದರ ಮೇಲಿಂದ ನೋಡ-ಲಾಗಿ, ಇದಕ್ಕೂ ಮೊದಲು ಈ ವಿದ್ಯೆಯು ಬ್ರಾಹ್ಮಣರ ಕೈಸೇರಿರಲಿಲ್ಲ, ಎನ್ನಬಹುದು. ಆದುದರಿಂದ ಎಲ್ಲ ಲೋಕದಲ್ಲಿಯೂ ಕ್ಷತ್ರಿಯರ ವರ್ಚಸ್ಸೇ ಇತ್ತು.' ಹೀಗೆ ಅಂದು ಮುಂದೆ ಅರಸನು ವಿದ್ಯೆಯನ್ನು ಹೇಳಿದನು.

೩ನೆಯ ಖಂಡವು ಸಮಾಪ್ತವು

ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ
ಧೂಮೋಽಹರರ್ಚಿಶ್ಚಂದ್ರಮಾ ಅಂಗಾರಾ ನಕ್ಷತ್ರಾಣಿ ವಿಸ್ಫುಲಿಂಗಾಃ || ೧ ||

(೧) 'ಗೌತಮನೆ, ಆ ಲೋಕವೆ (ದ್ಯುಲೋಕ) ಅಗ್ನಿಯು, ಆದಿತ್ಯನೆ ಸಮಿತ್ತುಗಳು, ಕಿರಣಗಳೆ ಹೊಗೆಯು, ದಿನವು ಉರಿಯು, ಚಂದ್ರನು ಕೆಂಡವು, ನಕ್ಷತ್ರಗಳು ಕಿಡಿಗಳು.

ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ
ಸೋಮೋ ರಾಜಾ ಸಂಭವತಿ ॥ ೨ ॥

॥ ಇತಿ ಚತುರ್ಥಃ ಖಂಡಃ ॥

( ೨ ) ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯ ಆಹುತಿಯನ್ನಿಕ್ಕುವರು. ಆ ಆಹುತಿಗಳಿಂದ ಸೋಮರಾಜನು ಹುಟ್ಟುವನು.'

೪ ನೆಯ ಖಂಡವು ಸಮಾಪ್ತವು

ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ
ವಿದ್ಯುದರ್ಚಿರಶನಿರಂಗಾರಾ ಹ್ರಾದುನಯೋ ವಿಸ್ಫುಲಿಂಗಾಃ ॥ ೧ ॥

ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮꣳ ರಾಜಾನಂ ಜುಹ್ವತಿ ತಸ್ಯಾ ಆಹು-
ತೇರ್ವರ್ಷꣳ ಸಂಭವತಿ ॥ ೨ ॥

॥ ಇತಿ ಪಂಚಮಃ ಖಂಡಃ ॥

( ೧ ) 'ಗೌತಮನೆ, ಪರ್ಜನ್ಯನೆ ಅಗ್ನಿಯು, ವಾಯುವೆ ಸಮಿತ್ತುಗಳು, ಅಭ್ರಗಳೆ ಹೊಗೆ, ವಿದ್ಯುತ್ತು ಉರಿಯು, ಸಿಡಿಲು ಕೆಂಡವು, ಗಡಗಡ ಸಪ್ಪಳವು ಕಿಡಿಗಳು.

( ೨ ) ಈ ಅಗ್ನಿಯಲ್ಲಿ ದೇವತೆಗಳು ಸೋಮರಾಜನ ಆಹುತಿಕೊಡುವರು. ಆ ಆಹುತಿಯಿಂದ ಮಳೆಯು ಬೀಳುವದು.'

೫ ನೆಯ ಖಂಡವು ಸಮಾಪ್ತವು

ಪೃಥಿವೀ ವಾವ ಗೌತಮಾಗ್ನಿಸ್ತಸ್ಯಾಃ ಸಂವತ್ಸರ ಏವ ಸಮಿದಾಕಾಶೋ
ಧೂಮೋ ರಾತ್ರಿರರ್ಚಿರ್ದಿಶೋಽಂಗಾರಾ ಅವಾಂತರದಿಶೋ ವಿಸ್ಫುಲಿಂಗಾಃ ॥ ೧ ॥

ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವರ್ಷಂ ಜುಹ್ವತಿ ತಸ್ಯಾ ಆಹುತೇರನ್ನꣳ ಸಂ-
ಭವತಿ ॥ ೨ ॥

॥ ಇತಿ ಷಷ್ಠಃ ಖಂಡಃ ॥

( ೧ ) 'ಗೌತಮನೆ, ಪೃಥಿವಿಯೆ ಅಗ್ನಿಯು, ಸಂವತ್ಸರಗಳೆ ಸಮಿತ್ತು-ಗಳು, ಆಕಾಶವೆ ಹೊಗೆಯು, ರಾತ್ರಿಯು ಉರಿಯು, ದಿಕ್ಕುಗಳೇ ಕೆಂಡಗಳು, ನಡುದಿಕ್ಕುಗಳೆ ಕಿಡಿಗಳು.

( ೨ ) ಈ ಅಗ್ನಿಯಲ್ಲಿ ದೇವತೆಗಳು ಮಳೆಯನ್ನು ಹೋಮಿಸುವರು. ಆ ಆಹುತಿಗಳಿಂದ ಅನ್ನವು ಉತ್ಪನ್ನವಾಗುವದು!'

೬ ನೆಯ ಖಂಡವು ಸಮಾಪ್ತವು

ಪುರುಷೋ ವಾವ ಗೌತಮಾಗ್ನಿಸ್ತಸ್ಯ ವಾಗೇವ ಸಮಿತ್ಪ್ರಾಣೋ ಧೂಮೋ ಜಿಹ್ವಾರ್ಚಿಶ್ಚಕ್ಷುರಂಗಾರಾಃ ಶ್ರೋತ್ರಂ ವಿಸ್ಫುಲಿಂಗಾಃ ॥ ೧ ॥

ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತೇ ರೇತಃ ಸಂಭವತಿ ॥ ೨ ॥

॥ ಇತಿ ಸಪ್ತಮಃ ಖಂಡಃ ॥

(೧) 'ಗೌತಮನೆ, ಪುರುಷನೆ ಅಗ್ನಿಯು, ವಾಣಿಯೆ ಸಮಿತ್ತು, ಪ್ರಾಣವೆ ಧೂಮವು, ನಾಲಿಗೆಯೆ ಉರಿಯು, ಕಣ್ಣುಗಳು ಕೆಂಡಗಳು, ಕಿವಿಗಳು ಕಿಡಿಗಳು,

(೨) ಈ ಅಗ್ನಿಯಲ್ಲಿ ದೇವತೆಗಳು ಅನ್ನವನ್ನು ಹೋಮಿಸುವರು. ಆ ಆಹುತಿಗಳಿಂದ ರೇತಸ್ಸು ಉತ್ಪನ್ನವಾಗುವದು.'

೭ ನೆಯ ಖಂಡವು ಸಮಾಪ್ತವು

ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದ್ಯದುಪಮಂತ್ರಯತೇ ಸ ಧೂಮೋ ಯೋನಿರರ್ಚಿರ್ಯದಂತಃ ಕರೋತಿ ತೇಽಂಗಾರಾ ಅಭಿನಂದಾ ವಿಸ್ಫುಲಿಂಗಾಃ ॥ ೧ ॥

ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತೇರ್ಗರ್ಭಃ ಸಂಭವತಿ ॥ ೨ ॥

॥ ಇತ್ಯಷ್ಟಮಃ ಖಂಡಃ ॥

(೧) 'ಗೌತಮನೇ, ಸ್ತ್ರೀಯು ಅಗ್ನಿಯು, ಉಪಸ್ಥವೆ ಸಮಿತ್ತು, ಸಂಕೇತವೆ (ಸ್ತ್ರೀಗೆ ಸಂಭೋಗಾರ್ಥವಾಗಿ ಮಾಡುವ ಸಂಕೇತ) ಧೂಮವು, ಯೋನಿಯೆ ಉರಿಯು, ಮೈಥುನವೆ ಕೆಂಡಗಳು, ಆನಂದವೆ ಕಿಡಿಗಳು,

(೨) ಈ ಅಗ್ನಿಯಲ್ಲಿ ದೇವತೆಗಳು ರೇತಸ್ಸನ್ನು ಹೋಮಿಸುವರು. ಆ ಆಹುತಿಯಿಂದ ಗರ್ಭವು ಉತ್ಪನ್ನವಾಗುವದು.'

೮ ನೆಯ ಖಂಡವು ಸಮಾಪ್ತವು

ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತಿ ಸ ಉಲ್ಬಾವೃತೋ ಗರ್ಭೋ ದಶ ವಾ ನವ ವಾ ಮಾಸಾನಂತಃ ಶಯಿತ್ವಾ ಯಾವದ್ವಾಥ ಜಾಯತೇ ॥ ೧ ॥

(೧) 'ಹೀಗೆ ಆಪಗಳು (ಶ್ರದ್ಧೆ) ಪುರುಷನೆಂಬ ಸಂಜ್ಞೆಯನ್ನು

ಸ ಜಾತೋ ಯಾವದಾಯುಷಂ ಜೀವತಿ ತಂ ಪ್ರೇತಂ ದಿಷ್ಟಮಿತೋಽಗ್ನಯ
ಏವ ಹರಂತಿ ಯತ ಏವೇತೋ ಯತಃ ಸಂಭೂತೋ ಭವತಿ ॥ ೨ ॥

॥ ಇತಿ ನವಮಃ ಖಂಡಃ ॥

ಪಡೆಯುವವು. ತಿಳುವಾದ ಚೀಲದಿಂದ ಆವೃತವಾದ ಆ ಗರ್ಭವು ಒಂಭತ್ತು ಅಥವಾ ಹತ್ತು ತಿಂಗಳು (ತಾಯಿಯ ಹೊಟ್ಟೆಯಲ್ಲಿ) ಮಲಗಿ ಬಳಿಕ ಹುಟ್ಟುವದು.

(೨) ಹುಟ್ಟಿದವನು ಆಯುಷ್ಯವಿರುವ ವರೆಗೆ ಬಾಳುವನು. ಸತ್ತವನನ್ನು ಇಲ್ಲಿಂದ ಅಗ್ನಿಗಳು ಅವನವನ ಕರ್ಮದಂತೆ ಆಯಾ ಲೋಕಗಳಿಗೆ ಒಯ್ಯುವವು. ಅವನು ಯಾವ ಅಗ್ನಿಗಳಿಂದ ಬಂದಿರುವನೊ ಯಾವ ಅಗ್ನಿಗಳಿಂದ ಹುಟ್ಟಿರುವನೊ (ಆ ಅಗ್ನಿಗಳಿಗೆ ಅವನನ್ನು ಒಯ್ಯುವವು, ಎಂದು ಅನ್ವಯ).

೯ ನೆಯ ಖಂಡವು ಸಮಾಪ್ತವು

ತದ್ಯ ಇತ್ಥಂ ವಿದುರ್ಯೇಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ
ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷ-
ಮಾಪೂರ್ಯಮಾಣಪಕ್ಷಾದ್ಯಾನ್ಷಡುದಙ್ಙೇತಿ ಮಾಸಾꣳಸ್ತಾನ್ ॥ ೧ ॥

ಮಾಸೇಭ್ಯಃ ಸಂವತ್ಸರꣳ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ
ಚಂದ್ರಮಸೋ ವಿದ್ಯುತಂ ತತ್ಪುರಷೋಽಮಾನವಃ ಸ ಏನಾನ್ಬ್ರಹ್ಮ
ಗಮಯತ್ಯೇಷ ದೇವಯಾನಃ ಪಂಥಾ ಇತಿ ॥ ೨ ॥

(೧) 'ಈ ಮೇಲಿನ ಜ್ಞಾನವನ್ನರಿತವರು ಮತ್ತು ಅರಣ್ಯದಲ್ಲಿ ಶ್ರದ್ಧೆ ತಪಗಳನ್ನು ಉಪಾಸಿಸುವವರು ಅರ್ಚಿಲೋಕಕ್ಕೆ (ಪ್ರಕಾಶಮಾನ್) ಹೋಗುವರು. ಅಲ್ಲಿಂದ ಅಹರ್ಲೋಕ, ಶುಕ್ಲ ಪಕ್ಷ, ಉತ್ತರಾಯಣ,

(೨) ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ತು ಹೀಗೆ ಸಾಗುವರು. ಅಲ್ಲಿ ಅಮಾನವ ಪುರುಷನಿರುವನು. ಅವನು ಅವರನ್ನು ಬ್ರಹ್ಮಲೋಕಕ್ಕೆ ಮುಟ್ಟಿಸುವನು. ಇದು ದೇವಯಾನ ಪಂಥವು.

ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ
ಧೂಮಮಭಿಸಂಭವಂತಿ ಧೂಮಾದ್ರಾತ್ರಿಂ ರಾತ್ರೇರಪರಪಕ್ಷಮಪರ-
ಪಕ್ಷಾದ್ಯಾನ್ ಷಡ್ದಕ್ಷಿಣೈತಿ ಮಾಸಾಂಸ್ತಾನ್ನೈತೇ ಸಂವತ್ಸರಮಭಿಪ್ರಾಪ್ನು-
ವಂತಿ ॥ ೩ ॥

ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಮಾಕಾಶಾಚ್ಚಂದ್ರಮಸ-
ಮೇಷ ಸೋಮೋ ರಾಜಾ ತದ್ದೇವಾನಾಮನ್ನಂ ತಂ ದೇವಾ ಭಕ್ಷಯಂತಿ ॥ ೪ ॥

ತಸ್ಮಿನ್ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತಂತೇ
ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ
ಭವತಿ ಧೂಮೋ ಭೂತ್ವಾಭ್ರಂ ಭವತಿ ॥ ೫ ॥

ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ತ ಇಹ
ವ್ರೀಹಿಯವಾ ಔಷಧಿವನಸ್ಪತಯಸ್ತಿಲಮಾಷಾ ಇತಿ ಜಾಯಂತೇಽತೋ
ವೈ ಖಲು ದುರ್ನಿಷ್ಪ್ರಪತರಂ ಯೋ ಯೋ ಹ್ಯನ್ನಮತ್ತಿ ಯೋ ರೇತಃ
ಸಿಂಚತಿ ತದ್ಭೂಯ ಏವ ಭವತಿ ॥ ೬ ॥

( ೩ ) ಇನ್ನು ಊರಲ್ಲಿದ್ದು ಇಷ್ಟಪೂರ್ತಿಕರ್ಮ, ದಾನ ಮುಂತಾದವು ಗಳನ್ನು ಮಾಡುವವರು ಧೂಮಲೋಕಕ್ಕೆ ಹೋಗುವರು. ಅಲ್ಲಿಂದ ರಾತ್ರಿ ಕೃಷ್ಣಪಕ್ಷ, ದಕ್ಷಿಣಾಯನ, ಹೀಗೆ ಸಾಗಿ ಸಂವತ್ಸರಕ್ಕೆ ಹೋಗದೆ,

( ೪ ) ಪಿತೃಲೋಕ, ಆಕಾಶ, ಚಂದ್ರ, ಹೀಗೆ ಹೋಗುವರು, ಚಂದ್ರನು ಸೋಮರಾಜನು. ಅವನು ದೇವತೆಗಳ ಅನ್ನವು, ದೇವತೆಗಳು ಅವನನ್ನು ತಿನ್ನುವರು.

( ೫ ) ಅಲ್ಲಿ ಕರ್ಮಕ್ಷಯವಾಗುವವರೆಗೆ ಇದ್ದು ಅವರು ಈ ಕೆಳಗಿನ ಮಾರ್ಗ ದಿಂದ ತಿರುಗಿ ಬರುವರು. ಆಕಾಶ, ಅಲ್ಲಿಂದ ವಾಯು, ಧೂಮ, ಅಭ್ರ.'

( ೬ ) ಮುಂದೆ ಅಭ್ರದಿಂದ ಮೇಘವಾಗಿ ಮಳೆಯಾಗುವದು. ಆ ಮೇಲೆ ಅಕ್ಕಿ, ಜವೆಗೋದಿ, ಔಷಧಿ, ವನಸ್ಪತಿ, ಎಳ್ಳು, ಬೇಳೆ, ಉತ್ಪನ್ನವಾಗುವವು. ಅಲ್ಲಿಂದ ( ಆ ಪದಾರ್ಥಗಳಲ್ಲಿ ತೊಡಗಿದ ಜೀವಗಳು ) ಪುನಃ ಹೊರಬೀಳು ವದು ಬಹಳ ಕಠಿಣ. ಮನುಷ್ಯನು ಯಾವ ಯಾವ ಅನ್ನವನ್ನು ತಿನ್ನುವನೊ ಮತ್ತು ( ಸ್ತ್ರೀಯೋನಿಯಲ್ಲಿ ರೇತರೂಪದಿಂದ ) ಸೇಚನ ಮಾಡುವನೊ ಅದೇ ಪುನಃ ಆಗಿ ( ಆಯಾ ಅನ್ನಗತ ಜೀವವು ಹುಟ್ಟುವದು ).

ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ
ಯೋನಿಮಾಪದ್ಯೇರನ್ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ
ವೈಶ್ಯಯೋನಿಂ ವಾಥ ಯ ಇಹ ಕಪೂಯಚರಣಾ ಅಭ್ಯಾಶೋ ಹ
ಯತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರ-
ಯೋನಿಂ ವಾ ಚಾಂಡಾಲಯೋನಿಂ ವಾ || ೭

ಅಥೈತಯೋಃ ಪಥೋರ್ನ ಕತರೇಣ ಚನ ತಾನೀಮಾನಿ ಕ್ಷುದ್ರಾಣ್ಯಸ-
ಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇ-
ತತ್ತೃತೀಯಂ ಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ
ತಸ್ಮಾಜ್ಜುಗುಪ್ಸೇತ ತದೇಷ ಶ್ಲೋಕಃ || ೮

ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪಮಾವಸನ್ಬ್ರ-
ಹ್ಮಹಾ ಚ। ಏತೇ ಪತಂತಿ ಚತ್ವಾರಃ ಪಂಚಮಶ್ಚಾಚರಂಸ್ತೈರಿತಿ || ೯

( ೭ ) ( ಮೇಲೆ ಹೇಳಿದ ಧಾನ್ಯಾದಿಗಳಲ್ಲಿ ಹೋದ ಜೀವಗಳಲ್ಲಿ ) ಯಾರು ಇಲ್ಲಿ ಒಳ್ಳೇ ಆಚರಣಶೀಲರಿದ್ದರೊ ಅವರು ತೀವ್ರವೆ ಒಳ್ಳೇ ಯೋನಿಗಳಲ್ಲಿ ಹುಟ್ಟುವರು. ಅವರು ಬ್ರಾಹ್ಮಣ, ಕ್ಷತ್ರಿಯ, ಅಥವಾ ವೈಶ್ಯರಾಗಿ ಹುಟ್ಟು ವರು. ಯಾರು ದುರಾಚಾರಿಗಳಿದ್ದರೊ ಅವರು ಬೇಗನೆ ಹೀನ ಯೋನಿ ಗಳಲ್ಲಿ ಹುಟ್ಟುವರು. ನಾಯಿ, ಹಂದಿ ಇಲ್ಲವೆ ಚಾಂಡಾಲರಾಗಿ ಹುಟ್ಟುವರು.

( ೮ ) ( ಯಾರು ಯಾವ ಧರ್ಮಕರ್ಮಗಳನ್ನೂ ಮಾಡುವದಿಲ್ಲವೊ ) ಅವರು ಈ ಎರಡು ( ದೇವಯಾನ ಪಿತೃಯಾನ ) ಮಾರ್ಗಗಳಲ್ಲಿ ಒಂದ ರಿಂದಲೂ ಸಾಗದೆ ಪುನಃ ಪುನಃ ಹುಟ್ಟುವ ಕ್ಷುದ್ರ ಪ್ರಾಣಿಗಳಾಗಿ ಜನ್ಮಿಸು ವರು— ಪುನಃ ಪುನಃ ಹುಟ್ಟುವದು ಸಾಯುವದು ( ಇದೇ ಈ ಪ್ರಾಣಿಗಳ ಉದ್ಯೋಗವು ). ಇದು ಮೂರನೆಯ ಗತಿಯು. ಆದಕಾರಣ ಪರಲೋಕವು ತುಂಬಿಹೋಗುವದಿಲ್ಲ. ಆದುದರಿಂದ ( ಕೆಟ್ಟಕರ್ಮಗಳ ಬಗ್ಗೆ ) ತಿರಸ್ಕಾರ ವನ್ನು ತಾಳಬೇಕು. ಆ ಬಗ್ಗೆ ಶ್ಲೋಕವಿರುವದು.

( ೯ ) ಸುವರ್ಣಚೋರ, ಸೆರೆಕುಡುಕ, ಗುರುಪತ್ನಿಸಂಗ ಮಾಡುವವ, ಬ್ರಹ್ಮಹತ್ಯೆಮಾಡುವವ ಮತ್ತು ಇವರಿಗೆ ಈ ಕರ್ಮಗಳಲ್ಲಿ ಸಹಾಯಮಾಡು ವವ ಇವರೆಲ್ಲರೂ ಪತಿತರಾಗುವರು.

ಅಥ ಹ ಯ ಏತಾನೇವಂ ಪಂಚಾಗ್ನೀನ್ವೇದ ನ ಸ ಹ ತೈರಪ್ಯಾಚರ-
ನ್ಪಾಪ್ಮನಾ ಲಿಪ್ಯತೇ ಶುದ್ಧಃ ಪೂತಃ ಪುಣ್ಯಲೋಕೋ ಭವತಿ ಯ
ಏವಂ ವೇದ ಯ ಏವಂ ವೇದ ॥ ೧೦ ॥

॥ ಇತಿ ದಶಮಃ ಖಂಡಃ ॥

( ೧೦ ) ಆದರೆ ಪಂಚಾಗ್ನಿಯ ಜ್ಞಾನವಿದ್ದವನು ಅಂಥವರೊಡನೆ ವ್ಯವಹಾರ ಮಾಡಿದರೂ, ಪಾಪದಿಂದ ಲಿಪ್ತನಾಗುವದಿಲ್ಲ. ಇದನ್ನರಿತವನು ಶುದ್ಧನೂ ಪವಿತ್ರನೂ ಇದ್ದು ಪುಣ್ಯಲೋಕವನ್ನು ಪಡೆಯುವನು.

೧೦ ನೆಯ ಖಂಡವು ಸಮಾಪ್ತವು

ಪ್ರಾಚೀನಶಾಲ ಔಪಮನ್ಯವಃ ಸತ್ಯಯಜ್ಞಃ ಪೌಲುಷಿರಿಂದ್ರದ್ಯುಮ್ನೋ
ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯೋ ಬುಡಿಲ ಆಶ್ವತರಾಶ್ವಿಸ್ತೇ
ಹೈತೇ ಮಹಾಶಾಲಾ ಮಹಾಶ್ರೋತ್ರಿಯಾಃ ಸಮೇತ್ಯ ಮೀಮಾಂ-
ಸಾಂಚಕ್ರುಃ ಕೋ ನು ಆತ್ಮಾ ಕಿಂ ಬ್ರಹ್ಮೇತಿ ॥ ೧ ॥

ತೇ ಹ ಸಂಪಾದಯಾಂಚಕ್ರುರುದ್ದಾಲಕೋ ವೈ ಭಗವಂತೋಽಯಮಾ-
ರುಣಿಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತಂ
ಹಂತಾಭ್ಯಾಗಚ್ಛಾಮೇತಿ ತಂ ಹಾಭ್ಯಾಜಗ್ಮುಃ ॥ ೨ ॥

ಸ ಹ ಸಂಪಾದಯಾಂಚಕಾರ ಪ್ರಕ್ಷ್ಯಂತಿ ಮಾಮಿಮೇ ಮಹಾಶಾಲಾ
ಮಹಾಶ್ರೋತ್ರಿಯಾಸ್ತೇಭ್ಯೋ ನ ಸರ್ವಮಿವ ಪ್ರತಿಪತ್ಸ್ಯೇ ಹಂತಾಹ-
ಮನ್ಯಮಭ್ಯನುಶಾಸಾನೀತಿ ॥ ೩ ॥

( ೧ ) ಉಪಮನ್ಯುವಿನ ಮಗ ಪ್ರಾಚೀನಶಾಲ, ಪುಲುಷನ ಮಗ ಸತ್ಯಯಜ್ಞ, ಭಾಲ್ಲವಿಯ ಮಗ ಇಂದ್ರದ್ಯುಮ್ನ, ಶರ್ಕರಾಕ್ಷ್ಯನ ಮಗ ಜನ, ಅಶ್ವತರಾಶ್ವತನ ಮಗ ಬುಡಿಲ, ಈ ಮಹಾಗೃಹಸ್ಥರು, ವೇದಜ್ಞರು ಒಟ್ಟುಗೂಡಿ, ನಮ್ಮ ಆತ್ಮನೆಂದರೆ ಯಾರು, ಬ್ರಹ್ಮವೆಂದರೇನು, ಎಂದು ವಿಚಾರ ಮಾಡಿದರು.

( ೨ ) ಶ್ರೇಷ್ಠರಾದ ಅವರು ( ಗುರುವನ್ನು ) ಯೋಚಿಸಿದರು. ಅರುಣಪುತ್ರನಾದ ಉದ್ದಾಲಕನು ವೈಶ್ವಾನರ ಆತ್ಮನನ್ನು ( ವಿಶ್ವಾತ್ಮ ) ಧ್ಯಾನಿಸುವನು ( ಅರಿತಿರುವನು ). ಅವನೆಡೆಗೆ ಹೋಗುವ ಎಂದು ಅವನ ಬಳಿಗೆ ಹೋದರು.

( ೩ ) ಅವನು ವಿಚಾರಿಸಿದ್ದೇನೆಂದರೆ, ‘ ಇನ್ನು ಈ ಮಹಾನ್ ವೇದಜ್ಞ

ತಾನ್ಹೋವಾಚಾಶ್ವಪತಿರ್ವೈ ಭಗವಂತೋಽಯಂ ಕೈಕಯಃ ಸಂಪ್ರತೀಮ-
ಮಾತ್ಮಾನಂ ವೈಶ್ವಾನರಮಧ್ಯೇತಿ ತꣳ ಹಂತಾಭ್ಯಾಗಚ್ಛಾಮೇತಿ ತꣳ ಹಾ
ಭ್ಯಾಜಗ್ಮುಃ ॥ ೪ ॥

ತೇಭ್ಯೋ ಹ ಪ್ರಾಪ್ತೇಭ್ಯಃ ಪೃಥಗರ್ಹಾಣಿ ಕಾರಯಾಂಚಕಾರ ಸ ಹ ಪ್ರಾತಃ
ಸಂಜಿಹಾನ ಉವಾಚ ನ ಮೇ ಸ್ತೇನೋ ಜನಪದೇ ನ ಕದರ್ಯೋ
ನ ಮದ್ಯಪೋ ನಾನಾಹಿತಾಗ್ನಿರ್ನಾವಿದ್ವಾನ್ನ ಸ್ವೈರೀ ಸ್ವೈರಿಣೀ ಕುತೋ
ಯಕ್ಷ್ಯಮಾಣೋ ವೈ ಭಗವಂತೋಽಹಮಸ್ಮಿ ಯಾವದೇಕೈಕಸ್ಮಾ
ಋತ್ವಿಜೇ ಧನಂ ದಾಸ್ಯಾಮಿ ತಾವದ್ಭಗವದ್ಭ್ಯೋ ದಾಸ್ಯಾಮಿ ವಸಂತು
ಭಗವಂತ ಇತಿ ॥ ೫ ॥

ತೇ ಹೋಚುರ್ಯೇನ ಹೈವಾರ್ಥೇನ ಪುರುಷಶ್ಚರೇತ್ತꣳಹೈವ ಮದೇದಾ-
ತ್ಮಾನಮೇವೇಮಂ ವೈಶ್ವಾನರꣳ ಸಂಪ್ರತ್ಯಧ್ಯೇಷಿ ತಮೇವ ನೋ
ಬ್ರೂಹೀತಿ ॥ ೬ ॥

ಗೃಹಸ್ಥರು ನನ್ನನ್ನು ( ಬ್ರಹ್ಮನ ಬಗ್ಗೆ ) ಕೇಳುವರು. ಅವರಿಗೆ ಎಲ್ಲವನ್ನು ನಾನು ಹೇಳಲು ಸಮರ್ಥನಾಗಲಿಕ್ಕಿಲ್ಲ. ಆದುದರಿಂದ ಅವರಿಗೆ ಅನ್ಯ ಉಪದೇಶಕನನ್ನು ತೋರಿಸಿ ಕೊಡುವದು ಲೇಸು.

( ೪ ) ಅವನು ( ಅವನಿಗೆ ) ಅಂದದ್ದು, ‘ ಪೂಜ್ಯ ಬ್ರಾಹ್ಮಣರೆ, ಕೇಕಯ ಪುತ್ರ ವಿಶ್ವಪತಿಯು ವೈಶ್ವಾನರ ಆತ್ಮನನ್ನು ಚನ್ನಾಗಿ ಅರಿತಿರುವನು, ಅವನೆಡೆಗೆ ಹೋಗುವ. ’ ಹೀಗೆ ಅವರೆಲ್ಲರೂ ಅವನ ಬಳಿಗೆ ಹೋದರು.

( ೫ ) ತನ್ನ ಬಳಿಗೆ ಬಂದ ಆ ಗೃಹಸ್ಥರಿಗೆ ಪ್ರತಿಯೊಬ್ಬರಿಗೆ ಅವನು ಚನ್ನಾಗಿ ಸ್ವಾಗತವನ್ನಿತ್ತನು. ಮಾರನೇ ದಿನ ಬೆಳಿಗ್ಗೆ ಎದ್ದು ಅವನು ಅಂದದ್ದು, ‘ ನನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಜಿಪುಣರಿಲ್ಲ, ಕುಡುಕರಿಲ್ಲ, ಅಗ್ನಿ-ಹೋತ್ರವಿಲ್ಲದವರಿಲ್ಲ, ದಡ್ಡರಿಲ್ಲ, ಸ್ವೈರಿಗಳಿಲ್ಲ, ಅಂದ ಬಳಿಕ ಸ್ವೈರಣಿಯ-ರೆಲ್ಲಿಂದ ಬರಬೇಕು ? ನಾನು ಯಜ್ಞವನ್ನು ಮಾಡತಕ್ಕವನಿದ್ದೇನೆ. ಒಬ್ಬೊಬ ಋತ್ವಿಜನಿಗೆ ಕೊಡುವಷ್ಟು ಧನವನ್ನು ನಿಮಗೆ ಒಬ್ಬೊಬ್ಬರಿಗೆ ನಾನು ಕೊಡುವೆನು, ನೀವು ಇಲ್ಲಿಯೇ ಇರಬೇಕು. ’

( ೬ ) ಅವರು ಅಂದದ್ದು, ‘ ಯಾವುದನ್ನು ಕೇಳಬೇಕೆಂಬ ಉದ್ದೇಶದಿಂದ ಮನುಷ್ಯನು ತನ್ನ ಕಡೆಗೆ ಬಂದಿರುವನೊ ಅದನ್ನು ಅವನಿಗೆ ಹೇಳಬೇಕು. ವೈಶ್ವಾನರ ಆತ್ಮನನ್ನು ನೀನು ಚನ್ನಾಗಿ ಬಲ್ಲವನಿರುವಿ, ಆ ಬಗ್ಗೆಯೆ ನಮಗೆ ಹೇಳು. ’

ತಾನ್ಹೋವಾಚ ಪ್ರಾತರ್ವಃ ಪ್ರತಿವಕ್ತಾಸ್ಮೀತಿ ತೇ ಹ ಸಮಿತ್ಪಾಣಯಃ
ಪೂರ್ವಾಹ್ಣೇ ಪ್ರತಿಚಕ್ರಮಿರೆ ತಾನ್ಹಾನುಪನೀಯ್ಯೈವೈತದುವಾಚ ॥ ೭ ॥

॥ ಇತ್ಯೇಕಾದಶಃ ಖಂಡಃ ॥

( ೭ ) ಅರಸನು ಅಂದದ್ದು, 'ಬೆಳಿಗ್ಗೆ ನಾನು ಹೇಳುವೆನು.' ಅವರು ಬೆಳಿಗ್ಗೆ ಸಮಿತ್ಪಾಣಿಗಳಾಗಿ ಅವನ ಬಳಿಗೆ ಹೋದರು. ಅವರ ಉಪನಯನ ಮಾಡದೆ ಅವನು ಅವರಿಗೆ ಹೇಳಿದನು.

೧೧ ನೆಯ ಖಂಡವು ಸಮಾಪ್ತವು

ಔಪಮನ್ಯವ ಕಂ ತ್ವಮಾತ್ಮಾನಮುಪಾಸ್ಸ ಇತಿ ದಿವಮೇವ ಭಗವೋ ರಾಜ-
ನ್ನಿತಿ ಹೋವಾಚೈಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾ-
ತ್ಮಾನಮುಪಾಸ್ಸೇ ತಸ್ಮಾತ್ತವ ಸುತಂ ಪ್ರಸುತಮಾಸುತಂ ಕುಲೇ ದೃಶ್ಯತೇ ॥ ೧ ॥

ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮ-
ವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ
ಮೂರ್ಧಾತ್ವೇಷ ಆತ್ಮನ ಇತಿ ಹೋವಾಚ ಮೂರ್ಧಾ ತೇ ವ್ಯಪತಿಷ್ಯದ್ಯನ್ಮಾಂ
ನಾಗಮಿಷ್ಯ ಇತಿ ॥ ೨ ॥

ಇತಿ ದ್ವಾದಶಃ ಖಂಡಃ

( ೧ ) ಅರಸನು ಕೇಳಿದ್ದು, 'ಉಪಮನ್ಯುಪುತ್ರನೇ, ನೀನು ಯಾವ ಆತ್ಮನನ್ನು ಉಪಾಸಿಸುವಿ?' 'ಮಹಾರಾಜನೇ, ದ್ಯುಲೋಕವನ್ನು ಉಪಾಸಿಸುವೆನು.' ಎಂದು ಅವನು ಹೇಳಿದನು. 'ನೀನು (ಪೂರ್ಣ ಆತ್ಮನೆಂದು) ಉಪಾಸಿಸುವದು 'ಸುತೇಜ' ಎಂಬ ವೈಶ್ವಾನರ ಆತ್ಮವು (ಪೂರ್ಣ ಆತ್ಮವಲ್ಲ.) ಆದುದರಿಂದ ನಿನ್ನ ಕುಲದಲ್ಲಿ ಸುತ ಪ್ರಸೂತ, ಆಸುತ (ಅಗ್ನಿಹೋತ್ರ, ಯಜ್ಞ, ಸತ್ರ ಮುಂತಾದವುಗಳಲ್ಲಿ ತೆಗೆಯಲ್ಪಡುತಿರುವ ಸೋಮರಸ) ಇವು ಕಂಡು ಬರುವವು. (ನಿನ್ನ ಕುಲದವರು ಕರ್ಮಿಷ್ಠರಾಗುವರು, ಎಂದರ್ಥ).

( ೨ ) ನೀನು ಅನ್ನವನ್ನುಣ್ಣುವಿ (ಬೇಕಾದಷ್ಟು ಪಚನಮಾಡುವಿ) ಪ್ರಿಯವಾದುದನ್ನು ಪಡೆಯುವಿ, ಈ (ಸುತೇಜ ಎಂಬ) ವೈಶ್ವಾನರ ಆತ್ಮನನ್ನು ಉಪಾಸಿಸುವವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು. ಅವನ ಕಾಲದಲ್ಲಿ ಬ್ರಹ್ಮವರ್ಚಸ್ಸು ತೋರುವದು, ಇದು (ಪೂರ್ಣ) ಆತ್ಮನ

ತಲೆಯು, ನೀನು ನನ್ನ ಬಳಿಗೆ ಬಾರದಿದ್ದರೆ ನಿನ್ನ ತಲೆಯು ಕಡಿದು ಬೀಳು-ತ್ತಿತ್ತು (ನಿನ್ನ ಅಪೂರ್ಣ ವಿದ್ಯೆಯ ಮೂಲಕ)' ಎಂದು ಕೈಕೇಯನು ಹೇಳಿದನು.

೧೨ ನೆಯ ಖಂಡವು ಸಮಾಪ್ತವು

ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ ಪ್ರಾಚೀನಯೋಗ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾದಿತ್ಯಮೇವ ಭಗವೋ ರಾಜನ್ನಿತಿ ಹೋವಾ-ಚೈಷ ವೈ ವಿಶ್ವರೂಪ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನ-ಮುಪಾಸ್ಸೇ ತಸ್ಮಾತ್ತವ ಬಹು ವಿಶ್ವರೂಪಂ ಕುಲೇ ದೃಶ್ಯತೇ || ೧

ಪ್ರವೃತ್ತೋಽಶ್ವತರೀರಥೋ ದಾಸೀನಿಷ್ಕೋಽತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವ-ಮಾತ್ಮಾನಂ ವೈಶ್ವಾನರಮುಪಾಸ್ತೇ ಚಕ್ಷುಷ್ಟ್ವೇತದಾತ್ಮನ ಇತಿ ಹೋವಾ-ಚಾಂಧೋಽಭವಿಷ್ಯದ್ಯನ್ಮಾಂ ನಾಗಮಿಷ್ಯ ಇತಿ || ೨

|| ಇತಿ ತ್ರಯೋದಶಃ ಖಂಡಃ ||

(೧) ಅರಸನು ಸತ್ಯಯಜ್ಞನನ್ನು ಕೇಳಿದ್ದು, 'ಹೇ ಪ್ರಾಚೀನ ಯೋಗ್ಯನೇ, ನೀನು ಯಾವ ಆತ್ಮನನ್ನು ಉಪಾಸಿಸುವಿ?' 'ಮಹಾರಾಜನೇ, ಆದಿತ್ಯನನ್ನುಪಾಸಿಸುವೆನು,' ಎಂದು ಅವನು ಹೇಳಿದನು. 'ನೀನು (ಪೂರ್ಣ ಆತ್ಮವೆಂದು) ಉಪಾಸಿಸುವದು 'ವಿಶ್ವರೂಪ' ಎಂಬ ವೈಶ್ವಾನರ ಆತ್ಮವು. ಆದುದರಿಂದ ನಿನ್ನ ಕುಲದಲ್ಲಿ ಸಾಧನಸಂಪತ್ತಿಯು ವಿಪುಲವಿರುವದು.

(೨) ಕುದುರೆಗಳ ರಥ, ದಾಸಿಗಳು, ಚಿನ್ನ ಇವು ನಿನಗೆ ಪ್ರಾಪ್ತವಾಗುವವು. ನೀನು ಸಾಕಷ್ಟು ಅನ್ನವನ್ನುಣ್ಣುವಿ, ಮತ್ತು ಪ್ರಿಯವನ್ನು ಪಡೆ-ಯುವಿ. ಈ (ವಿಶ್ವರೂಪ) ಆತ್ಮನನ್ನರಿತವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು. ಇವನ ಕುಲದಲ್ಲಿ ಬ್ರಹ್ಮವರ್ಚಸ್ಸು ತೋರುವದು. ಇದು ಆತ್ಮನ ಕಣ್ಣು, ನೀನು ನನ್ನೆಡೆಗೆ ಬಾರದಿದ್ದರೆ ಕುರುಡನಾಗು-ತ್ತಿದ್ದಿ' ಎಂದು ಕೈಕೇಯನು ಹೇಳಿದನು.

೧೩ ನೆಯ ಖಂಡವು ಸಮಾಪ್ತವು

ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತಿ ವಾಯುಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಪೃಥಗ್ವರ್ತ್ಮಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಾಂ ಪೃಥಗ್ಬಲಯ ಆಯಂತಿ ಪೃಥಗ್ರಥಶ್ರೇಣಯೋಽನುಯಂತಿ || ೧ ||

ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪ್ರಾಣಸ್ತ್ವೇಷ ಆತ್ಮನ ಇತಿ ಹೋವಾಚ ಪ್ರಾಣಸ್ತ ಉದಕ್ರಮಿಷ್ಯದ್ಯನ್ಮಾಂ ನಾಗಮಿಷ್ಯ ಇತಿ || ೨ ||

|| ಇತಿ ಚತುರ್ದಶಃ ಖಂಡಃ ||

(೧) ಬಳಿಕ ಅರಸನು ಇಂದ್ರದ್ಯುಮ್ನನನ್ನು ಕೇಳಿದ್ದು, 'ಹೇ ವೈಯ್ಯಾಘ್ರಪದ್ಯನೇ, ನೀನು ಯಾವ ಆತ್ಮನನ್ನು ಉಪಾಸಿಸುವಿ?' 'ಮಹಾರಾಜನೇ, ನಾನು ವಾಯುವನ್ನು ಉಪಾಸಿಸುವೆನು,' ಎಂದು ಅವನು ಹೇಳಿದನು. 'ನೀನು (ಪೂರ್ಣ ಆತ್ಮವೆಂದು) ಉಪಾಸಿಸುವದು 'ಪೃಥಗ್ವರ್ತ್ಮ' (ನಾನಾ ಗತಿಯುಳ್ಳ) ಎಂಬ ವೈಶ್ವಾನರ ಆತ್ಮವು. ಆದುದರಿಂದ ನಿನ್ನೆಡೆಗೆ ದಿಕ್ಕುದಿಕ್ಕುಗಳಿಂದ ಬಲಿಗಳು (ದಾನಾದಿಗಳು) ಬರುವವು. ನಿನ್ನ ಬೆನ್ನ ಹಿಂದೆ ರಥಗಳ ಸಾಲುಗಳು ನಡೆಯುವವು.

(೨) ನೀನು ಅನ್ನವನ್ನುಣ್ಣುವಿ, ಪ್ರಿಯವನ್ನು ಪಡೆಯುವಿ. ಈ (ಪೃಥಗ್ವರ್ತ್ಮ) ಆತ್ಮನನ್ನುಪಾಸಿಸುವವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ತೋರುವದು. ನೀನು (ಪೂರ್ಣ ಆತ್ಮವೆಂದು) ಉಪಾಸಿಸುವದು ಆತ್ಮನ ಪ್ರಾಣವು, ನೀನು ನನ್ನೆಡೆಗೆ ಬಾರದಿದ್ದರೆ ನಿನ್ನ ಪ್ರಾಣವೇ ಹೋಗುತ್ತಿತ್ತು,' ಎಂದು ಕೈಕೇಯನು ಹೇಳಿದನು.

೧೪ ನೆಯ ಖಂಡವು ಸಮಾಪ್ತವು

ಅಥ ಹೋವಾಚ ಜನಂ ಶಾರ್ಕರಾಕ್ಷ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾಕಾಶಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಬಹುಲ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಬಹುಲೋಽಸಿ ಪ್ರಜಯಾ ಚ ಧನೇನ ಚ || ೧ ||

(೧) ಬಳಿಕ ಅರಸನು ಜನನನ್ನು ಕೇಳಿದ್ದು, 'ಹೇ ಶಾರ್ಕರಾಕ್ಷ್ಯನೇ,

ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮ-
ವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ
ಸಂದೇಹಸ್ತ್ವೇಷ ಆತ್ಮನ ಇತಿ ಹೋವಾಚ ಸಂದೇಹಸ್ತೇ ವ್ಯಶೀರ್ಯ-
ದ್ಯನ್ಮಾಂ ನಾಗಮಿಷ್ಯ ಇತಿ ॥ ೨ ॥

॥ ಇತಿ ಪಂಚದಶಃ ಖಂಡಃ ॥

ನೀನು ಯಾವ ಆತ್ಮನನ್ನುಪಾಸಿಸುವಿ?' 'ಮಹಾರಾಜನೇ, ನಾನು ಆಕಾಶವನ್ನುಪಾಸಿಸುವೆನು' ಎಂದು ಅವನು ಹೇಳಿದನು. 'ನೀನು ಆತ್ಮವೆಂದು ಉಪಾಸಿಸುವದು 'ಬಹುಲ' ಎಂಬ ವೈಶ್ವಾನರ ಆತ್ಮವು. ಆದುದರಿಂದ ನೀನು ಪ್ರಜಾಧನಾದಿಗಳಿಂದ ಸಮೃದ್ಧನಿರುವಿ.

(೨) ನೀನು ಅನ್ನವನ್ನುಣ್ಣುವಿ, ಪ್ರಿಯವನ್ನು ಪಡೆಯುವಿ. ಈ ವೈಶ್ವಾನರ ಆತ್ಮನನ್ನುಪಾಸಿಸುವವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು. ಅವನ ಕುಲದಲ್ಲಿ ಬಹ್ಮವರ್ಚಸ್ಸು ತೋರುವದು. ಇದು (ಪೂರ್ಣ) ಆತ್ಮನ ಶರೀರಮಧ್ಯವು. ನೀನು ನನ್ನೆಡೆಗೆ ಬರದಿದ್ದರೆ ನಿನ್ನ ಶರೀರದ ಮಧ್ಯಭಾಗವು ನಷ್ಟವಾಗುತ್ತಿತ್ತು' ಎಂದು ಕೈಕೇಯನು ಹೇಳಿದನು.

೧೫ನೆಯ ಖಂಡವು ಸಮಾಪ್ತವು

ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ ವೈಯಾಘ್ರಪದ್ಯ ಕಂ ತ್ವಮಾತ್ಮಾ-
ನಮುಪಾಸ್ಸ ಇತ್ಯಪ ಏವ ಭಗವೋ ರಾಜನ್ನಿತಿ ಹೋವಾಚೈಷ ವೈ
ರಯಿರಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನ ಮುಪಾಸ್ಸೇ ತಸ್ಮಾತ್ತ್ವಂ
ರಯಿಮಾನ್ಪುಷ್ಟಿಮಾನಸಿ ॥ ೧ ॥

(೧) ಆ ಮೇಲೆ ಅರಸನು ಬುಡಿಲನಿಗೆ ಕೇಳಿದ್ದು, 'ಹೇ ವೈಯ್ಯಾಘ್ರ ಪದ್ಯನೇ, ನೀನು ಯಾವ ಆತ್ಮನನ್ನುಪಾಸಿಸುವಿ?' 'ಮಹಾರಾಜನೇ, ಅಪ್ಪುವನ್ನುಪಾಸಿಸುವೆನು,' ಎಂದು ಅವನು ಹೇಳಿದನು. 'ನೀನು ಉಪಾಸಿಸುವ ಆತ್ಮನು 'ರಯಿ' ಎಂಬ ವೈಶ್ವಾನರ ಆತ್ಮನು. ಆದುದರಿಂದ ನೀನು ಧನವುಳ್ಳವನೂ ಪುಷ್ಟನೂ ಇರುವಿ.

ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವ-
ರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಬಸ್ತಿ-
ಸ್ತ್ವೇಷ ಆತ್ಮನ ಇತಿ ಹೋವಾಚ ಬಸ್ತಿಸ್ತೇ ವ್ಯಭೇತ್ಸ್ಯದ್ಯನ್ಮಾಂ ನಾಗ-
ಮಿಷ್ಯ ಇತಿ ॥ ೨ ॥

॥ ಇತಿ ಷೋಡಶಃ ಖಂಡಃ ॥

(೨) ನೀನು ಅನ್ನವನ್ನುಣ್ಣುವಿ, ಪ್ರಿಯವನ್ನು ಪಡೆಯುವಿ. ಈ ವೈಶ್ವಾನರ ಆತ್ಮನನ್ನುಪಾಸಿಸುವವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ತೋರುವದು. ಇದು ಆತ್ಮನ ಬಸ್ತಿಯು. ನೀನು ನನ್ನೆಡೆಗೆ ಬಾರದಿದ್ದರೆ ನಿನ್ನ ಬಸ್ತಿಯು (ಮೂತ್ರಪಿಂಡವು) ಹರಿದು ಹೋಗುತ್ತಿತ್ತು ' ಎಂದು ಕೈಕೇಯನು ಅಂದನು.

೧೬ ನೆಯ ಖಂಡವು ಸಮಾಪ್ತವು

ಅಥ ಹೋವಾಚೋದ್ದಾಲಕಮಾರುಣಿಂ ಗೌತಮ ಕಂ ತ್ವಮಾತ್ಮಾನ-
ಮುಪಾಸ್ಸ ಇತಿ ಪೃಥಿವೀಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ
ಪ್ರತಿಷ್ಠಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ
ಪ್ರತಿಷ್ಠಿತೋಽಸಿ ಪ್ರಜಯಾ ಚ ಪಶುಭಿಶ್ಚ ॥ ೧ ॥

ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮ-
ವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ
ಪಾದೌ ತ್ವೇತಾವಾತ್ಮನ ಇತಿ ಹೋವಾಚ ಪಾದೌ ತೇ ವ್ಯಮ್ಲಾಸ್ಯೇತಾಂ
ಯನ್ಮಾಂ ನಾಗಮಿಷ್ಯ ಇತಿ ॥ ೨ ॥

॥ ಇತಿ ಸಪ್ತದಶಃ ಖಂಡಃ ॥

(೧) ಬಳಿಕ ಉದ್ದಾಲಕ ಆರುಣಿಯನ್ನು ಅರಸನು ಕೇಳಿದ್ದು, ' ಹೇ ಗೌತಮನೇ, ನೀನು ಯಾವ ಆತ್ಮನನ್ನುಪಾಸಿಸುವಿ ? ' ' ಮಹಾರಾಜನೇ, ನಾನು ಪೃಥಿವಿಯನ್ನುಪಾಸಿಸುವೆನು, ' ಎಂದು ಅವನು ಹೇಳಿದನು. ' ನೀನು ಉಪಾಸಿಸುತ್ತಿರುವ ಆತ್ಮನು ' ಪ್ರತಿಷ್ಠಾ ' ಎಂಬ ವೈಶ್ವಾನರ ಆತ್ಮನು. ಆದುದರಿಂದ ನೀನು ಪಶುಪ್ರಜೆಗಳಿಂದ ಪ್ರತಿಷ್ಠಿತನಿರುವಿ.

(೨) ನೀನು ಅನ್ನವನ್ನುಣ್ಣುವಿ, ಪ್ರಿಯವನ್ನು ಪಡೆಯುವಿ. ಈ ವೈಶ್ವಾನರ ಆತ್ಮನನ್ನುಪಾಸಿಸುವನು ಅನ್ನವನ್ನುಣ್ಣುವನು, ಪ್ರಿಯವನ್ನು ಪಡೆಯುವನು.

ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ತೋರುವದು. ಇದು ಆತ್ಮನ ಪಾದವು. ನೀನು ನನ್ನೆಡೆಗೆ ಬಾರದಿದ್ದರೆ ನಿನ್ನ ಪಾದಗಳು ಒಣಗಿಹೋಗುತಿದ್ದವು' ಎಂದು ಕೈಕೇಯನು ಅಂದನು.

೧೭ ನೆಯ ಖಂಡವು ಸಮಾಪ್ತವು

ತಾನ್ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ
ವೈಶ್ವಾನರಂ ವಿದ್ವಾಂಸೋಽನ್ನಮಾತ್ಥ ಯಸ್ತ್ವೇತಮೇವಂ ಪ್ರಾದೇಶ
ಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು
ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ॥ ೧ ॥

ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷು-
ರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ
ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ
ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯ-
ಮಾಹವನೀಯಃ ॥ ೨ ॥

॥ ಇತ್ಯಷ್ಟಾದಶಃ ಖಂಡಃ ॥

( ೧ ) ಅರಸನು ಎಲ್ಲರಿಗೂ ಅಂದದ್ದು, 'ನೀವು ಈ ವೈಶ್ವಾನರ ಆತ್ಮನನ್ನು ಪೃಥಕ್ಕಾಗಿ ಬಲ್ಲಿರಿ, ( ಆದುದರಿಂದ ) ಹೇರಳವಾಗಿ ಇಲ್ಲಿ ಅನ್ನವನ್ನು ಉಣ್ಣು ವಿರಿ. ಆದರೆ ಸರ್ವವ್ಯಾಪಿಯಾದ ವೈಶ್ವಾನರ ಆತ್ಮನನ್ನರಿತವನು ಸರ್ವ ಲೋಕಗಳಲ್ಲಿ, ಭೂತಗಳಲ್ಲಿ, ಆತ್ಮಗಳಲ್ಲಿ ಅನ್ನವನ್ನುಪಭೋಗಿಸುವನು.

( ೨ ) ಈ ವೈಶ್ವಾನರ ಆತ್ಮನ ತಲೆಯೆ ಸುತೇಜ ( ದ್ಯುಲೋಕ ) ಎಂಬುದು, ಕಣ್ಣುಗಳು ವಿಶ್ವರೂಪ ( ಆದಿತ್ಯ ) ಎಂಬುದು, ಪ್ರಾಣವು ಪೃಥಗ್ವರ್ತ್ಮ ( ವಾಯು ) ಎಂಬುದು, ಶರೀರಮಧ್ಯವು ಬಹುಲ ( ಆಕಾಶ ) ಎಂಬುದು, ಬಸ್ತಿಯು ರಯಿ ( ಅಪ್ಪು ) ಎಂಬುದು, ಪಾದಗಳು ಪೃಥಿವಿಯು, ಉರವು ವೇದಿಯು, ಲೋಮಗಳು ದರ್ಭ, ಹೃದಯವು ಗಾರ್ಹಪತ್ಯವು, ಮನವು ಅನ್ವಾಹಾರ್ಯಪಚನವು, ಬಾಯಿಯು ಆಹವನೀಯವು.'

೧೮ ನೆಯ ಖಂಡವು ಸಮಾಪ್ತವು

ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ್ಸ ಯಾಂ ಪ್ರಥಮಾ-
ಮಾಹುತಿಂ ಜುಹುಯಾತ್ತಾಂ ಜುಹುಯಾತ್ಪ್ರಾಣಾಯ ಸ್ವಾಹೇತಿ
ಪ್ರಾಣಸ್ತೃಪ್ಯತಿ ॥ ೧ ॥

ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾ-
ದಿತ್ಯೇ ತೃಪ್ಯತಿ ದ್ಯೌಸ್ತೃಪ್ಯತಿ ದಿವಿ ತೃಪ್ಯಂತ್ಯಾಂ ಯತ್ಕಿಂಚ ದ್ಯೌಶ್ಚಾ-
ದಿತ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ
ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥

॥ ಇತ್ಯೇಕೋನವಿಂಶಃ ಖಂಡಃ ॥

( ೧ ) ಆದುದರಿಂದ ಮೊದಲು ಕೈಗೆ ಬಂದ ಅನ್ನವನ್ನು ತಿನ್ನತಕ್ಕದ್ದು. ಮೊದಲನೆಯ ಆಹುತಿಯನ್ನು 'ಪ್ರಾಣಾಯ ಸ್ವಾಹಾ' ಎಂದು ಹೋಮಿಸಬೇಕು. ಅದರಿಂದ ಪ್ರಾಣವು ತೃಪ್ತವಾಗುವದು.

( ೨ ) ಪ್ರಾಣದ ತೃಪ್ತಿಯಿಂದ ಕಣ್ಣು, ಅದರ ತೃಪ್ತಿಯಿಂದ ಆದಿತ್ಯನು, ಅದರಿಂದ ದ್ಯುಲೋಕವು, ಆ ಮೂಲಕ ದ್ಯುಲೋಕ ಮತ್ತು ಆದಿತ್ಯನಲ್ಲಿ ಅಧಿಷ್ಠಿತವಿದ್ದುದೆಲ್ಲ ತೃಪ್ತವಾಗುವದು. ಇವೆಲ್ಲ ತೃಪ್ತವಾದೊಡನೆ ಉಪಾ-ಸಕನು ಸ್ವತಃ ಪಶು ಪ್ರಜೆಗಳು, ಯೋಗ್ಯ ಅನ್ನ, ತೇಜಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ ತೃಪ್ತನಾಗುವನು. ( ಇವು ಅವನಿಗೆ ಪ್ರಾಪ್ತವಾಗುವವು, ಎಂದರ್ಥ. )

೧೯ ನೆಯ ಖಂಡವು ಸಮಾಪ್ತವು

ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ
ಸ್ವಾಹೇತಿ ವ್ಯಾನಸ್ತೃಪ್ಯತಿ ॥ ೧ ॥

ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚಂದ್ರಮಾ-
ಸ್ತೃಪ್ಯತಿ ಚಂದ್ರಮಸಿ ತೃಪ್ಯತಿ ದಿಶಸ್ತೃಪ್ಯಂತಿ ದಿಕ್ಷು ತೃಪ್ಯಂತೀಷು
ಯತ್ಕಿಂಚ ದಿಶಶ್ಚ ಚಂದ್ರಮಾಶ್ಚಾಧಿತಿಷ್ಠಂತಿ ತತ್ತೃಪ್ಯತಿ ತಸ್ಯಾನು-

( ೧ ) ಇನ್ನು ಎರಡನೆಯ ಆಹುತಿಯನ್ನು 'ವ್ಯಾನಾಯ ಸ್ವಾಹಾ' ಎಂದು ಹೋಮಿಸಬೇಕು. ಅಂದರೆ ವ್ಯಾನವು, ಸಂತುಷ್ಟವಾಗುವದು.

ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮ-
ವರ್ಚಸೇನೇತಿ ॥ ೨ ॥

॥ ಇತಿ ವಿಂಶಃ ಖಂಡಃ ॥

(೨) ವ್ಯಾನದ ತೃಪ್ತಿಯಿಂದ ಶ್ರೋತ್ರ, ಅದರಿಂದ ಚಂದ್ರ, ಅದರಿಂದ ದಿಕ್ಕುಗಳು, ಅದರಿಂದ ದಿಕ್ಕು ಹಾಗೂ ಚಂದ್ರನಲ್ಲಿ ಅಧಿಷ್ಠಿತವಿದ್ದುದೆಲ್ಲವು ತೃಪ್ತವಾಗುವದು. ಇದೆಲ್ಲ ತೃಪ್ತವಾದೊಡನೆ ಉಪಾಸಕನು ಪಶು ಪ್ರಜೆಗಳು, ಯೋಗ್ಯ ಅನ್ನ, ತೇಜ, ಬ್ರಹ್ಮವರ್ಚಸ್ಸು ಇವುಗಳಿಂದ (ಸಂಪನ್ನನಾಗಿ) ಸಂತುಷ್ಟನಾಗುವನು.

೨೦ ನೆಯ ಖಂಡವು ಸಮಾಪ್ತವು

ಅಥ ಯಾಂ ತೃತೀಯಾಂ ಜುಹುಯಾತ್ತಾಂ ಜುಹುಯಾದಪಾನಾಯ
ಸ್ವಾಹೇತ್ಯಪಾನಸ್ತೃಪ್ಯತಿ ॥ ೧ ॥

ಅಪಾನೇ ತೃಪ್ಯತಿ ವಾಕ್ತೃಪ್ಯತಿ ವಾಚಿ ತೃಪ್ಯಂತ್ಯಾಮಗ್ನಿಸ್ತೃಪ್ಯತ್ಯಗ್ನೌ
ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯಂತ್ಯಾಂ ಯತ್ಕಿಂಚ ಪೃಥಿವೀ
ಚಾಗ್ನಿಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ
ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥

॥ ಇತ್ಯೇಕವಿಂಶಃ ಖಂಡಃ ॥

(೧) ಇನ್ನು ಮೂರನೆಯ ಆಹುತಿಯನ್ನು 'ಅಪಾನಾಯ ಸ್ವಾಹಾ' ಎಂದು ಹೋಮಿಸಬೇಕು. ಅಂದರೆ ಅಪಾನವು ಸಂತುಷ್ಟವಾಗುವದು.

(೨) ಅಪಾನವು ತೃಪ್ತವಾಯಿತೆಂದರೆ ವಾಣಿಯು ತೃಪ್ತವಾಗುವದು. ಅದರಿಂದ ಅಗ್ನಿಯು, ಅದರಿಂದ ಪೃಥಿವಿಯು, ಅದರಿಂದ ಪೃಥಿವಿ ಮತ್ತು ಅಗ್ನಿಯಲ್ಲಿ ಅಧಿಷ್ಠಿತವಿದ್ದುದೆಲ್ಲ ತೃಪ್ತವಾಗುವದು. ಇವೆಲ್ಲ ತೃಪ್ತವಾದೊಡನೆ ಉಪಾಸಕನು ಪಶು, ಪ್ರಜೆ, ಯೋಗ್ಯ ಅನ್ನ, ತೇಜಸ್ಸು, ಬ್ರಹ್ಮವರ್ಚಸ್ಸು ಇವುಗಳಿಂದ (ಸಂಪನ್ನನಾಗಿ) ತೃಪ್ತನಾಗುವನು.

೨೧ ನೆಯ ಖಂಡವು ಸಮಾಪ್ತವು

ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ಸಮಾನಾಯ ಸ್ವಾಹೇತಿ ಸಮಾನಸ್ತೃಪ್ಯತಿ ॥ ೧ ॥

ಸಮಾನೇ ತೃಪ್ಯತಿ ಮನಸ್ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯಂತ್ಯಾಂ ಯತ್ಕಿಂಚ ಯದ್ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥

॥ ಇತಿ ದ್ವಾವಿಂಶಃ ಖಂಡಃ ॥

(೧) ಇನ್ನು ನಾಲ್ಕನೆಯ ಆಹುತಿಯನ್ನು 'ಸಮಾನಾಯ ಸ್ವಾಹಾ' ಎಂದು ಹೋಮಿಸಬೇಕು. ಆದರಿಂದ ಸಮಾನವು ತೃಪ್ತವಾಗುವದು.

(೨) ಸಮಾನದ ತೃಪ್ತಿಯಿಂದ ಮನಸು ತೃಪ್ತವಾಗುವದು. ಆದರಿಂದ ತರ್ಜನ್ಯವು, ಆದರಿಂದ ವಿದ್ಯುತ್ತು, ಆದರಿಂದ ವಿದ್ಯುತ್ ಮತ್ತು ಪರ್ಜನ್ಯದಲ್ಲಿ ಅಧಿಷ್ಠಿತವಿದ್ದ ಎಲ್ಲವೂ ತೃಪ್ತವಾಗುವದು. ಇವೆಲ್ಲ ತೃಪ್ತವಾದೊಡನೆ ಉಪಾಸಕನು ಪಶು, ಪ್ರಜೆ, ಯೋಗ್ಯ ಅನ್ನ, ತೇಜಸ್ಸು, ಬಹ್ಮವರ್ಚಸ್ಸು, ಇವುಗಳಿಂದ (ಸಂಪನ್ನನಾಗಿ) ತೃಪ್ತನಾಗುವನು.

೨೨ ನೆಯ ಖಂಡವು ಸಮಾಪ್ತವು

ಅಥ ಯಾಂ ಪಂಚಮೀಂ ಜುಹುಯಾತ್ತಾಂ ಜುಹುಯಾದುದಾನಾಯ ಸ್ವಾಹೇತ್ಯುದಾನಸ್ತೃಪ್ಯತಿ ॥ ೧ ॥

ಉದಾನೇ ತೃಪ್ಯತಿ ತ್ವಕ್‌ತೃಪ್ಯತಿ ತ್ವಚಿ ತೃಪ್ಯಂತ್ಯಾಂ ವಾಯುಸ್ತೃಪ್ಯತಿ ವಾಯೌ ತೃಪ್ಯತ್ಯಾಕಾಶಸ್ತೃಪ್ಯತ್ಯಾಕಾಶೇ ತೃಪ್ಯತಿ ಯತ್ಕಿಂಚ ವಾಯು-ಶ್ಚಾಕಾಶಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥

॥ ಇತಿ ತ್ರಯೋವಿಂಶಃ ಖಂಡಃ ॥

(೧) ಇನ್ನು ಐದನೆಯ ಆಹುತಿಯನ್ನು 'ಉದಾನಾಯ ಸ್ವಾಹಾ' ಎಂದು ಹೋಮಿಸಬೇಕು. ಆದರಿಂದ ಉದಾನವು ತೃಪ್ತವಾಗುವದು.

(೨) ಉದಾನದ ತೃಪ್ತಿಯಿಂದ ತ್ವಕ್ಕು, ಆದರಿಂದ ವಾಯು, ಆದರಿಂದ ಆಕಾಶ, ಆದರಿಂದ ವಾಯು ಮತ್ತು ಆಕಾಶಗಳಲ್ಲಿ ಅಧಿಷ್ಠಿತವಿರುವ ಎಲ್ಲವು

ತೃಪ್ತವಾಗುವದು. ಇವೆಲ್ಲ ತೃಪ್ತವಾದೊಡನೆ ಉಪಾಸಕನು, ಪ್ರಜೆಗಳು, ಪಶುಗಳು, ಯೋಗ್ಯ ಅನ್ನ, ತೇಜಸ್ಸು, ಬ್ರಹ್ಮವರ್ಚಸ್ಸು, ಇವುಗಳಿಂದ ತೃಪ್ತನಾಗುವನು.

೨೩ ನೆಯ ಖಂಡವು ಸಮಾಪ್ತವು

ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಂಗಾರಾನಪೋಹ್ಯ
ಭಸ್ಮನಿ ಜುಹುಯಾತ್ತಾದೃಕ್ತತ್ಸ್ಯಾತ್ ॥ ೧ ॥

ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು
ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ॥ ೨ ॥

ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹಾಸ್ಯ ಸರ್ವೇ
ಪಾಪ್ಮಾನಃ ಪ್ರದೂಯಂತೇ ಯ ಏತದೇವಂ ವಿದ್ವಾನಗ್ನಿಹೋತ್ರಂ
ಜುಹೋತಿ ॥ ೩ ॥

ತಸ್ಮಾದು ಹೈವಂ ವಿದ್ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾ-
ತ್ಮನಿ ಹೈವಾಸ್ಯ ತದ್ವೈಶ್ವಾನರೇ ಹುತಂ ಸ್ಯಾದಿತಿ ತದೇಷ ಶ್ಲೋಕಃ ॥ ೪ ॥

( ೧ ) ಇದನ್ನು ( ವೈಶ್ವಾನರ ಆತ್ಮನ ಜ್ಞಾನ ) ಅರಿಯದೆ ಅಗ್ನಿಹೋತ್ರ ಮಾಡಿ ಹೋಮಿಸುವವನ ಹೋಮವು ಕೆಂಡಗಳನ್ನು ತೆಗೆದೊಗೆದು ಬರಿಯ ಬೂದಿಯಲ್ಲಿ ಹೋಮಿಸಿದಂತೆ ( ವ್ಯರ್ಥ ) ಆಗುವದು.

( ೨ ) ಇದನ್ನು ( ವೈಶ್ವಾನರ ಆತ್ಮನ ಜ್ಞಾನ ) ಅರಿತು ಹೋಮಿಸುವವನ ಹವನವು ಎಲ್ಲ ಲೋಕಗಳಲ್ಲಿ, ಎಲ್ಲ ಭೂತಗಳಲ್ಲಿ, ಎಲ್ಲ ಆತ್ಮಗಳಲ್ಲಿ, ಹೋಮಿಸಿದಂತೆ ಆಗುವದು,

( ೩ ) ಇದನ್ನರಿತು ಅಗ್ನಿಹೋತ್ರ ಹೋಮಮಾಡುವವನ ಪಾಪಗಳು, ಅಗ್ನಿಯಲ್ಲಿ ಹಾಕಿದ ಮುಂಜಾಹುಲ್ಲಿನ ಕಡ್ಡಿಯು ತತ್ಕಾಲ ಸುಟ್ಟುಹೋಗುವಂತೆ, ಸುಟ್ಟುಹೋಗುವವು.

( ೪ ) ಆದುದರಿಂದ ಈ ವಿದ್ಯೆಯನ್ನರಿತವನು ಚಾಂಡಾಲನಿಗೆ ಉಚ್ಛಿಷ್ಟವನ್ನು ಕೊಟ್ಟರೂ ಅದು ವೈಶ್ವಾನರ ಆತ್ಮನಲ್ಲಿ ಹೋಮಿಸಿದಂತೆಯೆ ಆಗುವದು. ( ಅದೇ ಶ್ರೇಷ್ಠ ಫಲವು ಬರುವದು, ಎಂದರ್ಥ ). ಆ ಬಗ್ಗೆ ಈ ಶ್ಲೋಕವಿರುವದು.

ಯಥೇಹ ಕ್ಷುಧಿತಾ ಬಾಲಾ ಮಾತರಂ ಪರ್ಯುಪಾಸತೇ । ಏವꣳ ಸರ್ವಾಣಿ
ಭೂತಾನ್ಯಗ್ನಿಹೋತ್ರಮುಪಾಸತ ಇತ್ಯಗ್ನಿಹೋತ್ರಮುಪಾಸತ ಇತಿ ॥ ೫ ॥

॥ ಇತಿ ಚತುರ್ವಿಂಶಃ ಖಂಡಃ ॥

ಇತಿ ಪಂಚಮಃ ಪ್ರಪಾಠಕಃ

( ೫ ) ಹಸಿದ ಕೂಸುಗಳು ತಾಯಿಯನ್ನುಪಾಸಿಸುವಂತೆ ಎಲ್ಲ ಭೂತಗಳು ( ಪ್ರಾಣಿಗಳು ) ಅಗ್ನಿಹೋತ್ರದ ಉಪಾಸನೆ ಮಾಡುವವು. ಅಗ್ನಿಹೋತ್ರದ ಉಪಾಸನೆ ಮಾಡುವವು.

೨೪ ನೆಯ ಖಂಡವು ಸಮಾಪ್ತವು

೫ನೆಯ ಅಧ್ಯಾಯವು ಸಮಾಪ್ತವು

# ೬ ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಮೊದಲಿನಿಂದ ಕೊನೆಯ ವರೆಗೆ ಒಂದೇ ಒಂದು ವಿಷಯ ವಿರುವದು. ಈ ಅಧ್ಯಾಯದಲ್ಲಿ ಶ್ವೇತಕೇತುವಿಗೆ ಅವನ ತಂದೆಯು ಆತ್ಮಜ್ಞಾನವನ್ನು ಹೇಳಿರುವನು, ಮತ್ತು ಈ ಅಧ್ಯಾಯದಲ್ಲಿ 'ತತ್ತ್ವಮಸಿ' ಎಂಬ ಮಹಾವಾಕ್ಯದ ಉಪದೇಶವಿರುವದು.

ಆರುಣಿಯು ತನ್ನ ಮಗನನ್ನು ಗುರುಕುಲಕ್ಕೆ ಕಳಿಸುವನು. ಅವನು ಅಲ್ಲಿ ಹನ್ನೆರಡು ವರ್ಷ ಇದ್ದಬಳಿಕ ಗರ್ವಿಷ್ಠನೂ ತಾನೇ ದೊಡ್ಡ ಪಂಡಿತನೂ ಎಂಬ ಅಹಂಭಾವ ವುಳ್ಳವನೂ ಆಗಿ ತಿರುಗಿ ಬರುವನು. ಮಗನ ಈ ಅವಸ್ಥೆಯನ್ನು ನೋಡಿ ತಂದೆಯು, ಆತ್ಮೋಪದೇಶವನ್ನು ಪಡೆದು ಬಂದಿರುವೆಯೊ ಹಾಗೆಯೆ ಬಂದಿರುವಿಯೊ, ಎಂದು ಕೇಳುವನು. ಆಗ, ಆ ಉಪದೇಶವು ನನ್ನ ಗುರುಗಳಿಗೆ ಗೊತ್ತಿರಲಿಕ್ಕಿಲ್ಲ, ನೀನೇ ನನಗೆ ಹೇಳು, ಎಂದು ಬೇಡಿಕೊಳ್ಳುವನು. ಇದು ಮೊದಲನೆಯ ಖಂಡದ ವಿಷಯವು.

ತಂದೆಯು ೨ನೆಯ ಖಂಡದಲ್ಲಿ ಆತ್ಮಜ್ಞಾನವನ್ನು ಹೇಳಲಾರಂಭಿಸಿ ಈ ಅಧ್ಯಾಯದ ಕೊನೆಯ ವರೆಗೂ ಅದನ್ನು ಪೂರೈಸುವನು. ಮೊದಲು ಸತ್ ಎಂಬುವೇ ಇತ್ತು. ಅದರ ಸಂಕಲ್ಪದಿಂದ ತೇಜ, ಅದರ ಸಂಕಲ್ಪದಿಂದ ಅಪ್ಪು, ಅದರ ಸಂಕಲ್ಪ ದಿಂದ ಅನ್ನ ಹೀಗೆ ಮೂರು ವಸ್ತುಗಳು ಮೊದಲು ಉತ್ಪನ್ನವಾದವು, ಎಂಬುದು ಎರಡನೆಯ ಖಂಡದ ವಿಷಯವು.

ಮುಂದೆ ಈ ಮೂರು ಪದಾರ್ಥಗಳ ತ್ರಿವೃತ್ಕರಣದಿಂದ ನಾಮರೂಪಾತ್ಮಕ ವಿವಿಧ ಸೃಷ್ಟಿಯು ನಿರ್ಮಾಣವಾಯಿತು, ಎಂದು ಹೇಳುವುದೆ ಮೂರನೆಯ ಖಂಡದ ಉದ್ದೇಶವು. ಪ್ರಾಣಿಗಳಲ್ಲಿ ಅಂಡಜ, ಜಾರುಜ, ಉದ್ಭಿಜ ಎಂಬ ಮೂರು ವಿಭಾಗ ಗಳಿರುವವು. ಅದರೆ ತೇಜ, ಅಪ, ಅನ್ನ ಇವುಗಳ ತ್ರಿವೃತ್ಕರಣದಿಂದಲೆ ಇಡೀ ಸೃಷ್ಟಿಯ ನಿರ್ಮಿತಿಯಾಯಿತು ಎಂದು ಆರುಣಿಯು ಹೇಳುವನು.

ಅಗ್ನಿ, ಆದಿತ್ಯ, ಚಂದ್ರ, ವಿದ್ಯುತ್ತು ಇವುಗಳಲ್ಲಿ ಸಹ ತೇಜ, ಅಪ, ಅನ್ನ ಇವೇ ಮೂರು ಇರುವವು. ಅಗ್ನ್ಯಾದಿಗಳೊಳಗಿಂದ ತೇಜಾದಿಗಳನ್ನು ತೆಗೆದುಬಿಟ್ಟರೆ ಅವು ಗಳಲ್ಲಿಯ ಅಗ್ನಿತ್ವಾದಿ ಗುಣಗಳೇ ನಷ್ಟವಾಗಿ ಹೋಗುವವು, ಎಂದು ನಾಲ್ಕನೆಯ ಖಂಡವು ಹೇಳುವದು.

ಇನ್ನು ೫-೬ ಈ ಎರಡು ಖಂಡಗಳಲ್ಲಿ ಪುರುಷನಲ್ಲಿರುವ ಶಕ್ತಿಗಳ ಪೃಥಕ್ಕರಣ ಮಾಡಿ ಅವಾದರೂ ಅನ್ನ, ಅಪ್ಪು, ತೇಜ ಇವುಗಳಿಂದಲೆ ಉತ್ಪನ್ನವಾಗಿರುವವು, ಎಂದು ಆರುಣಿಯು ಮಗನಿಗೆ ತಿಳಿಸಿಕೊಟ್ಟಿರುವನು. ಅನ್ನ, ಅಪ್ಪು, ತೇಜಗಳ ಅತ್ಯಂತ ಸೂಕ್ಷ್ಮವಿದ್ದ ಭಾಗಗಳು ಅನುಕ್ರಮವಾಗಿ ಪುರುಷನ ಮನ, ಪ್ರಾಣ, ವಾಣಿ ಗಳಾಗುವವು, ಎಂದು ತಂದೆಯು ಹೇಳುವನು.

೭ ನೆಯ ಖಂಡದಲ್ಲಿ ಪ್ರಾಣವು ಆಪೋಮಯವಿರುವದು, ಪುರುಷನ ೧೬ ಕಲೆಗಳಲ್ಲಿ ಅದೊಂದೆ ಕೊನೆಗೆ ಉಳಿಯುವದು, ಎಂಬುದನ್ನು ತಂದೆಯು ಮಗನಿಗೆ ಸಪ್ರಮಾಣವಾಗಿ ತೋರಿಸಿಕೊಡುವನು. ಆರುಣಿಯು ಶ್ವೇತಕೇತುವಿಗೆ ೧೫ ದಿನ ಪೂರ್ಣ ಉಪವಾಸ ಇರಲಿಕ್ಕೆ ಹೇಳುವನು. ನೀರು ಮಾತ್ರ ಬಿಡಬೇಡ ಎಂದು ಅವನಿಗೆ ಹೇಳಿರುವನು. ಪಾಠಮಾಡಿದ ವೇದಾದಿಗಳು ಸಹ ಉಪಾವಾಸದ ನಂತರ ಮಗನಿಗೆ ನೆನಪಿಗೆ ಬರುವದಿಲ್ಲ. ಆಗ ತಂದೆಯು ಅವನಿಗೆ ಪುನಃ ಊಟಮಾಡಲಿಕ್ಕೆ ಹೇಳುವನು ಮತ್ತು ಮನಾದಿಗಳು ಅನ್ನಮಯವೂ ಪ್ರಾಣಮಯವೂ ಇರುವವೆಂದು ಮಗನನ್ನು ಮನಗಾಣಿಸುವನು.

ಹೀಗೆ ಉಪವಾಸದ ಮೀಮಾಂಸೆಯಾದ ಬಳಿಕ ೮ ನೆಯ ಖಂಡದಲ್ಲಿ ಆರುಣಿಯು ನಿದ್ರೆ, ಹಸಿವೆ, ನೀರಡಿಕೆ ಇವುಗಳನ್ನು ಕುರಿತು ಮಗನಿಗೆ ಹೇಳುವನು. ನಿದ್ರೆಯ ಕಾಲಕ್ಕೆ ಪುರುಷನು ಸತ್‌ದಲ್ಲಿ ಲೀನನಾಗಿರುವನು. ಆಗ ವಾಣಿಯು ಮನಸಿನಲ್ಲಿ, ಮನನು ಪ್ರಾಣದಲ್ಲಿ, ಪ್ರಾಣವು ತೇಜದಲ್ಲಿ, ತೇಜವು ಸತ್‌ದಲ್ಲಿ ಲೀನವಾಗಿರುವದು, ಎಂದು ಆರುಣಿಯ ಅಭಿಪ್ರಾಯವು. ಮುಂದೆ ಹಸಿವೆಯಾದಾಗ ಅನ್ನವನ್ನು ನೀರು ಒಯ್ಯುವದು ಎಂದು ಅನ್ನ, ನೀರು, ತೇಜ ಇವುಗಳ ಸಂಬಂಧವನ್ನು ತಂದೆಯು ಹೇಳುವನು. ಸತ್‌ದಲ್ಲಿಯೆ ಎಲ್ಲವೂ ಲಯ ಹೊಂದುತಿರುವುದರಿಂದ ಅದೇ ಎಲ್ಲ ಪ್ರಜೆಗಳ ಆಧಾರವು. ಅದೇ ಎಲ್ಲವುಗಳ ಬೇರು ಇರುವದು, ಎಂದು ಇಲ್ಲಿ ಪ್ರತಿಪಾದನ ವಿರುವದು.

ಇದೇ ಮಾತನ್ನು ಸಿದ್ಧಪಡಿಸುವುದಕ್ಕಾಗಿ ೯, ೧೦, ೧೧ ಈ ಖಂಡಗಳಲ್ಲಿ ಬೇರೆ ಬೇರೆ ಉದಾಹರಣಗಳನ್ನು ಕೊಡಲ್ಪಟ್ಟಿವೆ. ಜೇನ್ನೊಣಗಳು ವಿವಿಧ ವೃಕ್ಷಗಳ ಹೂ-ಗಳಿಂದ ಮಧುವನ್ನು ತಂದು ಜೇನುತುಪ್ಪವನ್ನು ಮಾಡುವವು. ಆ ಜೇನುತುಪ್ಪದಲ್ಲಿರುವ ರಸಗಳಿಗೆ, ನಾವು ಇಂಥ ಗಿಡದ ರಸ, ಇಂಥ ಗಿಡದ ರಸ, ಎಂಬ ಜ್ಞಾನವು ಇರಲರಿ-ಯದು. ಅದೇ ರೀತಿ ಸಮುದ್ರದಲ್ಲಿ ಒಂದಾದ ನದಿಗಳಿಗೆ ತಮ್ಮ ವ್ಯಕ್ತಿತ್ವದ ಜ್ಞಾನವು ಇರಲರಿಯದು. ಈ ರೂಪಕಗಳಲ್ಲಿ ಹೇಳಿದಂತೆ ಸತ್‌ದಲ್ಲಿ ಲೀನವಾದ ವಸ್ತುಗಳ ವ್ಯಕ್ತಿತ್ವವು ಸಂಪೂರ್ಣವಾಗಿ ನಷ್ಟವಾಗುವದು. ಸತ್ ಎಂಬುದೊಂದೆ ವಿದ್ಯಮಾನವಿರುವದು, ಎಂದು ಆರುಣಿಯು ಹೇಳುವನು. ಒಂದು ವೃಕ್ಷವನ್ನು ನೋಡಿದರೆ ಅದರಲ್ಲಿ ಆಮೂಲಾಗ್ರವೂ ಜೀವವು ತುಂಬಿರುವದು. ಒಂದು ಟೊಂಗೆಯನ್ನು ಕಡಿದು ಚಲ್ಲಿದರೆ ಅದರಲ್ಲಿಯ ಜೀವವು ಇಲ್ಲದಂತಾಗಿ ಅದು ಒಣಗಿ ಹೋಗುವದು. ಇಡೀ ಗಿಡವು ರಸವನ್ನು ಅಂದರೆ ನೀರನ್ನು ಕುಡಿಯುತ್ತ ಜೀವಂತ ಇರುವದು. ಹಾಗೆಯೆ ವ್ಯಕ್ತಿಗಳು ಸತ್ತಂತೆ ಕಂಡರೂ ಇಡೀ ಸತ್ ಎಂಬುದು ಜೀವಪೂರ್ಣವೆ ಇರುವದು. ಟೊಂಗೆ ಸಾಯುವದು ಹೊರತು ಜೀವಶಕ್ತಿಗೆ ಮರಣವಿಲ್ಲ, ಎಂದು ೧೧ನೆಯ ಖಂಡದಲ್ಲಿ ತಂದೆಯು ಮಗನಿಗೆ ಹೇಳಿರುವನು.

೧೨ನೆಯ ಖಂಡದಲ್ಲಿ ಪ್ರಸಿದ್ಧವಾದ ವಟಬೀಜದ ರೂಪಕವಿರುವದು. ಈ ಸತ್ ಎಂಬುದು ಏನು ಇರುವದು, ಅದು ಹೇಗೆ ಇರುವದು, ಎಂಬುದಕ್ಕೆ ಈ ಖಂಡದಲ್ಲಿ ಉತ್ತರವಿರುವದು. ಅತ್ಯಂತ ಸಣ್ಣವಿರುವ ವಟಬೀಜದಲ್ಲಿ ಏನೂ ಕಣ್ಣಿಗೆ ಕಾಣದಿದ್ದರೂ ಅದರೊಳಗಿಂದಲೆ ಮಹಾನ್ ವಟವೃಕ್ಷವು ಹೊರಬೀಳುವಂತೆ ಅದೃಶ್ಯವಾದ ಸತ್‌ದಿಂದ ಈ ವಿಶ್ವವೆಲ್ಲವೂ ಹುಟ್ಟಿರುವದು, ಇದರಲ್ಲಿ ಶ್ರದ್ಧೆಯನ್ನಿಡು, ಎಂದು ತಂದೆಯು ಮಗನಿಗೆ ಹೇಳುವನು.

ಇನ್ನು ಸತ್ ಇದರ ಸರ್ವವ್ಯಾಪಕತ್ವವು ನೀರು ಮತ್ತು ಉಪ್ಪು ಇವುಗಳ ರೂಪದಿಂದ ೧೩ ನೆಯ ಖಂಡದಲ್ಲಿ ವ್ಯಕ್ತಮಾಡಲ್ಪಟ್ಟಿದೆ. ನೀರಲ್ಲಿ ಕರಗಿದ ಉಪ್ಪಿನ ಹರಳು ಕಣ್ಣಿಗೆ ಕಾಣದಿದ್ದರೂ ನೀರೆಲ್ಲ ಉಪ್ಪುಪ್ಪು ಹತ್ತುವದು. ಅದೇ ರೀತಿ ಆತ್ಮವು ಸರ್ವವ್ಯಾಪಿ ಇರುವದು, ಎಂದು ಆರುಣಿಯು ಮಗನಿಗೆ ಹೇಳುವನು.

ಆ ಆತ್ಮನ ಜ್ಞಾನವು ಗುರುಮುಖದಿಂದ ಆಗುವದು, ಎಂಬದು ೧೪ನೆಯ ಖಂಡದಲ್ಲಿ ಹೇಳಲ್ಪಟ್ಟಿರುವದು. ಒಬ್ಬನನ್ನು ಕಣ್ಣುಕಟ್ಟಿ ಅಡವಿಯಲ್ಲಿ ಬಿಟ್ಟುಬಿಟ್ಟರೆ ಅವನಿಗೆ ತನ್ನ ಊರದಾರಿಯು ಕಾಣದು. ಆದರೆ ಅವನ ಕಣ್ಣು ಬಿಚ್ಚಿ ಈ ಮಾರ್ಗದಿಂದ ಹೋಗು, ಎಂದು ಯಾರಾದರೂ ಹೇಳಿದರೆ ಅವನು ಪುನಃ ತನ್ನ ಮಾರ್ಗಕ್ಕೆ ಹತ್ತಿ ಮನೆಗೆ ಮುಟ್ಟುವನು. ಅದೇ ರೀತಿ ಒಳ್ಳೇ ಗುರುವು ಭೆಟ್ಟಿಯಾದನೆಂದರೆ ಅಜ್ಞಾನದಿಂದ ಕುರುಡನಂತೆ ಆಗಿರುವ ಮನುಷ್ಯನು ಆತ್ಮನನ್ನು ಪಡೆಯುವನು.

ಮುಂದಿನ ಖಂಡದಲ್ಲಿ ಒಬ್ಬ ಆಸನ್ನಮರಣನ ಪ್ರಜ್ಞೆಯು ಎಲ್ಲಿಯವರೆಗೆ ಉಳಿಯುವದು, ಎಂಬುದರ ಚರ್ಚೆಯು ಮಾಡಲ್ಪಟ್ಟಿದೆ. ವಾಣಿಯು ಮನದಲ್ಲಿ, ಮನವು ಪ್ರಾಣದಲ್ಲಿ, ಪ್ರಾಣವು ಸತ್ತಿನಲ್ಲಿ ಲೀನವಾಗುವವರೆಗೆ ಅವನಿಗೆ ಪ್ರಜ್ಞೆ ಇರುವದು, ಮುಂದೆ ಪ್ರಜ್ಞೆ ಇರಲರಿಯದು, ಎಂದು ಆರುಣಿಯು ಹೇಳಿರುವನು. ಆ ಸತ್ ಎಂಬುದೆ ಆತ್ಮವು, ಅದೇ ಸರ್ವವ್ಯಾಪಿಯು, ಇದೆಲ್ಲವೂ ಆತ್ಮಮಯವು, ಎಂದು ಪ್ರತಿಪಾದಸಿ ಆರುಣಿಯು ಮಗನಿಗೆ ನೀನೂ ಅದೇ ಆತ್ಮನಿರುವಿ ಎಂದು ಆಶ್ವಾಸನವನ್ನು ಕೊಡುವನು. " ನೀನೆ ಆತ್ಮನಿರುವಿ " ಎಂಬುದು ೮ನೆಯ ಖಂಡದಿಂದ ೧೫ ನೆಯ ಖಂಡದ ವರೆಗೆ ತಂದೆಯು ಮಗನಿಗೆ ಮಾಡುವ ಉಪದೇಶದ ಪಲ್ಲವಿಯಿರುವದು.

ಇಂಥ ಆತ್ಮಜ್ಞಾನಿಯು ದುಃಖದಿಂದ ಅಲಿಪ್ತನಿರುವನು ಎಂಬುದನ್ನು ಆರುಣಿಯು ೧೬ನೆಯ ಖಂಡದಲ್ಲಿ ಹೇಳಿರುವನು. ಅದಕ್ಕಾಗಿ 'ತಪ್ತ ಪರಶು' ಎಂಬ ದಿವ್ಯದ ಉದಾಹರಣೆಯನ್ನು ಕೊಟ್ಟಿರುವನು. ಯಾವರೀತಿ ಸತ್ಯವಂತನ ಕೈ ಸುಡದೊ ಅದೇ ರೀತಿ ಸತ್ಯಜ್ಞಾನಿಗೆ ದುಃಖಾದಿಗಳು ತೊಂದರೆ ಕೊಡಲರಿಯವು, ಎಂದು ಅರ್ಥವಿರುವದು. ಈ ಜ್ಞಾನದಿಂದ ಮಗನು ಕೃತಾರ್ಥನಾದನು.

## ಅಥ ಷಷ್ಠೋಽಧ್ಯಾಯಃ

ಓಂ ಶ್ವೇತಕೇತುರ್ಹಾರುಣೇಯ ಆಸ ತꣳ ಹ ಪಿತೋವಾಚ ಶ್ವೇತಕೇತೋ ವಸ ಬ್ರಹ್ಮಚರ್ಯಂ ನ ವೈ ಸೋಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬಂಧುರಿವ ಭವತೀತಿ ॥ ೧ ॥

ಸ ಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ ತꣳ ಹ ಪಿತೋವಾಚ ಶ್ವೇತಕೇತೋಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯಃ ॥ ೨ ॥

ಯೇನಾಶ್ರುತꣳ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ ಕಥಂ ನು ಭಗವಃ ಸ ಆದೇಶೋ ಭವತೀತಿ ॥ ೩ ॥

( ೧ ) ಓಂ, ಆರುಣಿಯ ಮಗನು ಶ್ವೇತಕೇತು ಎಂಬವನಿದ್ದನು. ಅವನಿಗೆ ತಂದೆಯು ಅಂದದ್ದು, ‘ ಹೇ ಶ್ವೇತಕೇತುವೇ, ಬ್ರಹ್ಮಚರ್ಯದಿಂದ ಇದ್ದು ಅಧ್ಯಯನ ಮಾಡು. ಯಾಕಂದರೆ, ನಮ್ಮ ಕುಲದವನಾರೂ ಅಧ್ಯಯನ ಮಾಡದೆ ನಾಮಮಾತ್ರ ಬ್ರಾಹ್ಮಣನಾಗಿ ಇರುವುದಿಲ್ಲ.’

( ೨ ) ಹನ್ನೆರಡು ವರುಷದವನಿದ್ದ ಅವನು ೨೪ ವರುಷದವನಾಗುವ ವರೆಗೆ ( ಗುರುಕುಲದಲ್ಲಿದ್ದು ) ಎಲ್ಲ ವೇದಗಳನ್ನಭ್ಯಸಿಸಿ ತಾನು ದೊಡ್ಡವನು ದೊಡ್ಡ ವಿದ್ವಾಂಸನು, ಎಂದು ತಿಳಿದವನು ಗರ್ವಿಷ್ಠನು ಆಗಿ ಮನೆಗೆ ಬಂದನು. ಅವನನ್ನು ಕುರಿತು ತಂದೆಯು ಅಂದದ್ದು, ‘ ಹೇ, ಸೋಮ್ಯನೇ, ನೀನು ಬಹಳ ದೊಡ್ಡವನೂ ವಿದ್ವಾಂಸನೂ ಎಂದು ತಿಳಿದಿರುವಿ, ಗರ್ವಿಯಾಗಿರುವಿ, ಆದರೆ ಆ ಮುಖ್ಯ ಉಪದೇಶವನ್ನು ಪಡೆದಿರುವೆಯಾ ?

( ೩ ) ಯಾವ ಉಪದೇಶದಿಂದ ಒಳಗೆ ಇದ್ದುದು ಕೇಳಿಸುತ್ತದೆಯೊ ತರ್ಕಿಸಲಿಕ್ಕೆ ಬಾರದಿದ್ದುದು ತರ್ಕವಿಷಯವಾಗುತ್ತದೊ, ತಿಳಿಯದೆ ಇದ್ದುದು ತಿಳಿಯುತ್ತದೊ (ಆ ಆದೇಶವನ್ನು) ಗುರುಗಳಿಂದ ಕೇಳಿಕೊಂಡಿರುವಿಯಾ ? ’ ಮಗನು ಅಂದದ್ದು, ‘ ಭಗವನ್ ಅಂಥ ಉಪದೇಶವು ಯಾವುದು ? ’

ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತꣳ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ॥ ೪ ॥

ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತꣳ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಂ ॥ ೫ ॥

ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯಮೇವಂ ಸೋಮ್ಯ ಸ ಆದೇಶೋ ಭವತೀತಿ ॥ ೬ ॥

ನ ವೈ ನೂನಂ ಭಗವಂತಸ್ತ ಏತದವೇದಿಷುರ್ಯದ್ಧ್ಯೇತದವೇದಿಷ್ಯನ್ ಕಥಂ ಮೇ ನಾವಕ್ಷ್ಯನ್ನಿತಿ ಭಗವಾꣳಸ್ತ್ವೇವ ಮೇ ತದ್ಬ್ರವೀತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೭ ॥

॥ ಇತಿ ಪ್ರಥಮಃ ಖಂಡಃ ॥

( ೪ ) 'ಚನ್ನನೇ, ಯಾವರೀತಿ ಒಂದು ಮಣ್ಣು ಹೆಂಟೆಯ ಜ್ಞಾನವಾಯಿತೆಂದರೆ ಮಣ್ಣಿನ ಎಲ್ಲ ಪದಾರ್ಥಗಳ ಜ್ಞಾನವಾಗುವದು ಮತ್ತು ಆ ಮೇಲೆ (ಮಣ್ಣಿನ ಎಲ್ಲ ಪದಾರ್ಥಗಳೆಂದರೆ) ಬರಿಯ ಬಾಯಿಮಾತುಗಳು, (ಮಣ್ಣಿನ) ವಿಕಾರಗಳು, ಬರಿಯ ಹೆಸರುಗಳು ಮಾತ್ರ, ಮಣ್ಣು ಎಂಬುದೊಂದೆ ಹೇಗೆ ಸತ್ಯವೊ,

( ೫ ) ಚನ್ನನೇ, ಯಾವ ರೀತಿ ಒಂದು ಲೋಹಮಣಿಯ ಜ್ಞಾನದಿಂದ ಲೋಹದ ಎಲ್ಲ ಪದಾರ್ಥಗಳ ಜ್ಞಾನವಾಗುವದೊ ಮತ್ತು ಆ ಮೇಲೆ (ಲೋಹದ ಎಲ್ಲ ಪದಾರ್ಥಗಳೆಂದರೆ) ಬರಿಯ ಬಾಯಿಮಾತುಗಳು, (ಲೋಹದ) ವಿಕಾರಗಳು ಬರಿಯ ಹೆಸರುಗಳು ಮಾತ್ರ, ಲೋಹವೆಂಬುದೊಂದೆ ಹೇಗೆ ಸತ್ಯವೊ,

( ೬ ) ಚನ್ನನೇ, ಯಾವ ರೀತಿ ಒಂದು ಉಗುರುಗತ್ತಿಯ ಜ್ಞಾನವಾಯಿತೆಂದರೆ ಉಕ್ಕಿನ ಎಲ್ಲ ಪದಾರ್ಥಗಳ ಜ್ಞಾನವಾಗುವದು ಮತ್ತು ಆ ಮೇಲೆ (ಉಕ್ಕಿನ ಎಲ್ಲ ಪದಾರ್ಥಗಳೆಂದರೆ) ಬರಿಯ ಬಾಯಿಮಾತುಗಳು, (ಉಕ್ಕಿನ) ವಿಕಾರಗಳು, ಬರಿಯ ಹೆಸರುಗಳು ಮಾತ್ರ, ಉಕ್ಕು ಎಂಬುದೊಂದೆ ಹೇಗೆ ಸತ್ಯವೊ, ಚನ್ನನೇ, ನಾನು ನಿರ್ದೇಶಿಸುವ ಉಪದೇಶವು ಇದೇ ಪ್ರಕಾರದ್ದಿರುವದು,' ಎಂದು ತಂದೆಯು ಹೇಳಿದನು.

( ೭ ) ಆಗ ಮಗನು ಅಂದದ್ದು, 'ನಿಜವಾಗಿ ಈ ಉಪದೇಶವು ನನ್ನ

ಗುರುಗಳಿಗೆ ಗೊತ್ತಿರಲಿಲ್ಲ. ಗೊತ್ತಿದ್ದರೆ ಅವರು ನನಗೆ ಹೇಳದೇ ಇರಬಹುದಾಗಿತ್ತೇ? ಅದನ್ನು ನೀವೇ ನನಗೆ ಹೇಳಬೇಕು.' ತಂದೆಯು 'ಒಳ್ಳೇದು,' ಎಂದು ಒಪ್ಪಿದನು.

೧ನೆಯ ಖಂಡವು ಸಮಾಪ್ತವು

ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ತದ್ಧೈಕ ಆಹು-
ರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾ-
ಯತ ॥ ೧ ॥

ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ ಕಥಮಸತಃ ಸಜ್ಜಾ-
ಯೇತೇತಿ ಸತ್ತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ॥ ೨ ॥

ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ
ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ ತಸ್ಮಾದ್ಯತ್ರ
ಕ್ವಚ ಶೋಚತಿ ಸ್ವೇದತೇ ವಾ ಪುರುಷಸ್ತೇಜಸ ಏವ ತದಧ್ಯಾಪೋ
ಜಾಯಂತೇ ॥ ೩ ॥

(೧) 'ಸೋಮ್ಯನೇ, ಮೊಟ್ಟಮೊದಲು 'ಸತ್' ಎಂಬುದು ಒಂದೇ ಒಂದು ಇತ್ತು. ಎರಡನೆಯದೇನೂ ಆಗ ಇರಲಿಲ್ಲ. ಮೊಟ್ಟಮೊದಲು 'ಅಸತ್' ಎಂಬುದೊಂದೇ ಇತ್ತು, ಎಂದು ಕೆಲವರು ಅನ್ನುವರು.

(೨) ಸೋಮ್ಯನೇ, ಅದು ಹೇಗೆ ಆಗಬಲ್ಲದು? ಅಸತ್ತಿನಿಂದ ಸತ್ ಎಂಬುದು ಹೇಗೆ ಹುಟ್ಟಬಲ್ಲದು? ಸತ್ ಎಂಬುದೊಂದೇ ಮೊಟ್ಟಮೊದಲು ಇತ್ತು, ಎರಡನೆಯದೇನೂ ಇರಲಿಲ್ಲ.

(೩) ಅದು (ಸತ್) 'ನಾನು ಬಹಳ ಆಗಬೇಕು' ಎಂದು ಸಂಕಲ್ಪ-ಮಾಡಿತು. ಅದರಿಂದ (ಈ ಸಂಕಲ್ಪದಿಂದ) ತೇಜವನ್ನು ಹುಟ್ಟಿಸಿತು. ಬಳಿಕ ಆ ತೇಜವು 'ನಾನು ಬಹಳ ಆಗಬೇಕು' ಎಂದು ವಿಚಾರಿಸಿತು. ಅದರಿಂದ ಆಪವನ್ನು ಹುಟ್ಟಿಸಿತು. ಆದುದರಿಂದ ಪುರುಷನು ಯಾವಾಗ ಮತ್ತು ಎಲ್ಲಿ ಸಂತಪ್ತನಾಗುವನೊ ಅಥವಾ ಬೆಂವರುವನೊ ಆಗ ಮತ್ತು ಅಲ್ಲಿ ತೇಜದಿಂದಲೆ ಆಪ ಹುಟ್ಟುವದು.

ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜಂತ ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತ್ಯದ್ಭ್ಯ ಏವ ತದಧ್ಯನ್ನಾದ್ಯಂ ಜಾಯತೇ ॥ ೪ ॥

॥ ಇತಿ ದ್ವಿತೀಯಃ ಖಂಡಃ ॥

(೪) ಆಪಗಳು 'ನಾವು ಬಹಳ ಆಗಬೇಕು' ಎಂದು ವಿಚಾರಿಸಿದವು. ಅದರಿಂದ ಅನ್ನವನ್ನು ಹುಟ್ಟಿಸಿದವು. ಆದುದರಿಂದ ಯಾವಾಗ ಮತ್ತು ಎಲ್ಲಿ ಮಳೆ ಆಗುವುದೊ ಆವಾಗ ಮತ್ತು ಅಲ್ಲಿ ಹೇರಳ ಅನ್ನವು ಉತ್ಪನ್ನವಾಗುವದು. ಆಪಗಳಿಂದಲೆ ತಿನ್ನಲಿಕ್ಕೆ ಯೋಗ್ಯವಾದ ಅನ್ನವು ಹುಟ್ಟುವದು.

೨ನೆಯ ಖಂಡವು ಸಮಾಪ್ತವು

ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತ್ಯಂಡಜಂ ಜೀವಜಮುದ್ಭಿಜ್ಜಮಿತಿ ॥ ೧ ॥

ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ॥ ೨ ॥

ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ॥ ೩ ॥

(೧) ಈ ಭೂತಮಂತ್ರಗಳು ಅಂಡಜ, ಜೀವಜ, ಮತ್ತು ಉದ್ಭಿಜ ಎಂದು ಮೂರು ಬಗೆಯಾಗಿ ಇರುವವು.

(೨) ಈ (ಸತ್ ಎಂಬ) ದೇವತೆಯು 'ನಾನು ಇನ್ನು ಜೀವಾತ್ಮ ರೂಪದಿಂದ ಈ ಮೂರು (ತೇಜ, ಆಪ, ಅನ್ನ) ದೇವತೆಗಳಲ್ಲಿ (ಶಕ್ತಿಗಳಲ್ಲಿ) ಪ್ರವೇಶಮಾಡಿ ನಾಮರೂಪಗಳನ್ನು (ವಿವಿಧ ದೃಷ್ಟಿಯನ್ನು) ವ್ಯಕ್ತ ಮಾಡ ಬೇಕು,' ಎಂದು ವಿಚಾರಿಸಿತು.

(೩) ಮತ್ತೆ 'ನಾನು ಈ ದೇವತೆಗಳ ತ್ರಿವೃತ್ಕರಣ (ಅರ್ಧ ತೇಜ + ಕಾಲು ಆಪ್ಪು, ಅರ್ಧ ಅಪ್ಪು + ಕಾಲು ತೇಜ + ಕಾಲು ಅನ್ನ, ಅರ್ಧ ಅನ್ನ + ಕಾಲು ತೇಜ + ಕಾಲು ಅಪ್ಪು ಈ ಪ್ರಕಾರ ಸಂಯೋಗಗಳನ್ನು ಮಾಡುವುದಕ್ಕೆ ತ್ರಿವೃತ್ಕರಣವೆಂಬ ಹೆಸರು) ಮಾಡಬೇಕು, ಎಂದು

ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋದ್ಯಥಾ ನು ಖಲು ಸೋಮ್ಯೇ-
ಮಾಸ್ತಿಸ್ರೋ ದೇವತಾಸ್ತ್ರಿವೃಂತಿವೃದೇಕೈಕಾ ಭವತಿ ತನ್ಮೇ ವಿಜಾನೀಹೀತಿ ‖ ೪ ‖

‖ ಇತಿ ತೃತೀಯಃ ಖಂಡಃ ‖

ಈ ( ಸತ್ ಎಂಬ ) ದೇವತೆಯು ಜೀವಾತ್ಮರೂಪದಿಂದ ಆ ಮೂರು ದೇವತೆಗಳಲ್ಲಿ ಪ್ರವೇಶಿಸಿ ನಾಮರೂಪಗಳನ್ನು ( ವಿವಿಧ ವಸ್ತುಗಳನ್ನು ) ವ್ಯಕ್ತ ಮಾಡಿತು.

( ೪ ) ಆ ಮೂರು ದೇವತೆಗಳಲ್ಲಿ ಒಂದೊಂದನ್ನು ಸತ್ ದೇವತೆಯು ತ್ರಿವೃತ್ ಮಾಡಿತು. ಸೋಮ್ಯನೇ, ಆ ಮೂರು ದೇವತೆಗಳು ತ್ರಿವೃತ್ ಹೇಗೆ ಆಗಿರುವವು, ಇದನ್ನು ಹೇಳುವೆನು ಕೇಳು.

೩ನೆಯ ಖಂಡವು ಸಮಾಪ್ತವು

ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ
ಯತ್ಕೃಷಂ ತದನ್ನಸ್ಯಾಪಾಗಾದಗ್ನೇರಗ್ನಿತ್ವಂ ವಾಚಾರಂಭಣಂ
ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ‖ ೧ ‖

ಯದಾದಿತ್ಯಸ್ಯ ರೋಹಿತಲ್ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ
ತದಪಾಂ ಯತ್ಕೃಷಂ್ಣ ತದನ್ನಸ್ಯಾಪಾಗಾದಾದಿತ್ಯಾದಾದಿತ್ಯತ್ವಂ
ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ
ಸತ್ಯಂ ‖ ೨ ‖

( ೧ ) ಅಗ್ನಿಯ ಕೆಂಪು ರೂಪವು ತೇಜದ್ದು, ಬಿಳಿಯ ರೂಪವು ಅಪ್ಪಿನದು, ಕಪ್ಪು ರೂಪವು ಅನ್ನದ್ದು, ( ಇವುಗಳನ್ನು ಬಿಟ್ಟರೆ ) ಅಗ್ನಿಯ ಅಗ್ನಿತ್ವವೆ ಇಲ್ಲದಂತಾಗುವದು. ಮಿಕ್ಕದ್ದೆಲ್ಲ ವಾಗ್ಜಾಲವು, ವಿಕಾರವು, ನಾಮಮಾತ್ರವು. ಮೂರು ರೂಪಗಳೆ ಸತ್ಯವು.

( ೨ ) ಆದಿತ್ಯನ ಕೆಂಪು ರೂಪವು ತೇಜದ್ದು, ಬಿಳಿಯ ರೂಪವು ಅಪ್ಪಿನದು, ಕಪ್ಪು ರೂಪವು ಅನ್ನದ್ದು, ( ಇವುಗಳನ್ನು ಬಿಟ್ಟರೆ ) ಆದಿತ್ಯನ ಆದಿತ್ಯತ್ವವೆ ಇಲ್ಲದಂತಾಗುವದು. ಮಿಕ್ಕದ್ದೆಲ್ಲ ವಾಗ್ಜಾಲವು, ವಿಕಾರವು, ನಾಮಮಾತ್ರವು ಮೂರು ರೂಪಗಳೆ ಸತ್ಯವು.

ಯಚ್ಚಂದ್ರಮಸೋ ರೋಹಿತꣳರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾಚ್ಚಂದ್ರಾಚ್ಚಂದ್ರತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥ ೩ ॥

ಯದ್ವಿದ್ಯುತೋ ರೋಹಿತꣳರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದ್ವಿದ್ಯುತೋ ವಿದ್ಯುತ್ತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥ ೪ ॥

ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುಃ ಪೂರ್ವೇ ಮಹಾಶಾಲಾ ಮಹಾಶ್ರೋತ್ರಿಯಾ ನ ನೋಽದ್ಯ ಕಶ್ಚನಾಶ್ರುತಮಮತಮವಿಜ್ಞಾತಮುದಾಹರಿಷ್ಯತೀತಿ ಹ್ಯೇಭ್ಯೋ ವಿದಾಂಚಕ್ರುಃ ॥ ೫ ॥

ಯದು ರೋಹಿತಮಿವಾಭೂದಿತಿ ತೇಜಸ್ತದ್ರೂಪಮಿತಿ ತದ್ವಿದಾಂಚಕ್ರುರ್ಯದು ಶುಕ್ಲಮಿವಾಭೂದಿತ್ಯಪಾꣳ ರೂಪಮಿತಿ ತದ್ವಿದಾಂಚಕ್ರುರ್ಯದು ಕೃಷ್ಣಮಿವಾಭೂದಿತ್ಯನ್ನಸ್ಯ ರೂಪಮಿತಿ ತದ್ವಿದಾಂಚಕ್ರುಃ ॥ ೬ ॥

( ೩ ) ಚಂದ್ರನ ಕೆಂಪು ರೂಪವು ತೇಜದ್ದು, ಬಿಳಿಯ ರೂಪವು ಅಪ್ಪಿನದು, ಕಪ್ಪುರೂಪವು ಅನ್ನದ್ದು ( ಇವುಗಳನ್ನು ಬಿಟ್ಟರೆ ) ಚಂದ್ರನ ಚಂದ್ರತ್ವವೆ ಇಲ್ಲದಂತಾಗುವದು. ಮಿಕ್ಕದ್ದೆಲ್ಲ ವಾಗ್ಜಾಲವು, ವಿಕಾರವು, ನಾಮಮಾತ್ರವು. ಮೂರು ರೂಪಗಳೆ ಸತ್ಯವು.

( ೪ ) ವಿದ್ಯುತ್ತಿನ ಕೆಂಪು ರೂಪವು ತೇಜದ್ದು, ಬಿಳಿಯ ರೂಪವು ಅಪ್ಪಿನದು, ಕಪ್ಪು ರೂಪವು ಅನ್ನದ್ದು, ( ಇವುಗಳನ್ನು ಬಿಟ್ಟರೆ ) ವಿದ್ಯುತ್ತಿನ ವಿದ್ಯುತ್ತ್ವವೆ ಇಲ್ಲದಂತಾಗುವದು. ಮಿಕ್ಕದ್ದೆಲ್ಲ ವಾಗ್ಜಾಲವು, ವಿಕಾರವು, ನಾಮಮಾತ್ರವು. ಮೂರು ರೂಪಗಳೆ ಸತ್ಯವು.

( ೫ ) ವಿದ್ವಾಂಸರು, ಮಹಾಗೃಹಸ್ಥರು, ವೇದಜ್ಞರು, ಪೂರ್ವಕಾಲದಲ್ಲಿ ಇದು ಹೀಗೆ ಇರುವದೆಂಬ ಜ್ಞಾನವನ್ನು ಪಡಕೊಂಡಿರುವದರಿಂದಲೆ ಇನ್ನು ನಮ್ಮ ಕುಲದಲ್ಲಿ ಯಾರಿಗೂ ( ಸತ್ಯವು ) ಕೇಳದಿದ್ದುದು, ವಿಚಾರಿಸದಿದ್ದುದು, ತಿಳಿಯದಿದ್ದುದು ಯಾವದೂ ಉಳಿಯಿತೆಂದು ಯಾರೂ ಅನ್ನಲಿಕ್ಕಿಲ್ಲ, ಎಂದು ತಿಳಿಯುತಿದ್ದರು.

( ೬ ) ಕೆಂಪು ಇದ್ದುದು ತೇಜದ ರೂಪವೆಂದು, ಬೆಳ್ಳಗಿದ್ದುದು ಅಪ್ಪಿನ ರೂಪವೆಂದು, ಕಪ್ಪು ಇದ್ದುದು ಅನ್ನದ ರೂಪವೆಂದು ಅವರು ಅರಿತುಕೊಂಡರು.

ಯದ್ವದ್ವಿಜ್ಞಾತಮಿವಾಭೂದಿತ್ಯೇತಾಸಾಮೇವ ದೇವತಾನಾꣳ ಸಮಾಸ
ಇತಿ ತದ್ವಿದಾಂಚಕ್ರುರ್ಯಥಾ ನ ಖಲು ಸೋಮ್ಯೇಮಾಸ್ತಿಸ್ರೋ
ದೇವತಾಃ ಪುರುಷಂ ಪ್ರಾಪ್ಯ ತ್ರಿವೃಂತ್ರಿವೃದೇಕೈಕಾಭವತಿ ತನ್ಮೇ
ವಿಜಾನೀಹೀತಿ ॥ ೭ ॥

॥ ಇತಿ ಚತುರ್ಥಃ ಖಂಡಃ ॥

(೭) ತಿಳಿಯದಂತೆ ಇದ್ದ ರೂಪವು ಈ ದೇವತೆಗಳ (ತೇಜಾದಿ) ಸಂಯೋಗದಿಂದ ಆದುದೆಂದು ಅವರು ಅರಿತುಕೊಂಡರು. ಇನ್ನು ಸೋಮ್ಯನೆ, ಈ ಮೂರು ದೇವತೆಗಳು ಪುರುಷನಲ್ಲಿ ಸೇರಿ ಹೇಗೆ ತ್ರಿವೃತ್ ಆಗುವವು ಇದನ್ನು ನನ್ನಿಂದ ಅರಿತುಕೊ.

೪ ನೆಯ ಖಂಡವು ಸಮಾಪ್ತವು

ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತ-
ತ್ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾꣳಸಂ ಯೋಽಣಿಷ್ಠಸ್ತನ್ಮನಃ ॥ ೧ ॥

ಆಪಃ ಪೀತಾಸ್ತ್ರೇಧಾ ವಿಧೀಯಂತೇ ತಾಸಾಂ ಯಃ ಸ್ಥವಿಷ್ಠೋ
ಧಾತುಸ್ತನ್ಮೂತ್ರಂ ಭವತಿ ಯೋ ಮಧ್ಯಮಸ್ತಲ್ಲೋಹಿತಂ
ಯೋಽಣಿಷ್ಠಃ ಸ ಪ್ರಾಣಃ ॥ ೨ ॥

ತೇಜೋಽಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋಧಾತುಸ್ತದಸ್ಥಿ
ಭವತಿ ಯೋ ಮಧ್ಯಮಃ ಸ ಮಜ್ಜಾ ಯೋಽಣಿಷ್ಠಃ ಸಾ ವಾಕ್ ॥ ೩ ॥

(೧) ತಿಂದ ಅನ್ನ ಮೂರು ಭಾಗವಾಗುವದು. ಅದರ ಅತ್ಯಂತ ಸ್ಥೂಲ ಭಾಗವು ಮಲವಾಗುವದು, ಮಧ್ಯಮ ಭಾಗವು ಮಾಂಸವಾಗುವದು, ಅತ್ಯಂತ ಸೂಕ್ಷ್ಮಭಾಗವು ಮನಸು ಆಗುವದು.

(೨) ಕುಡಿದ ನೀರು ಮೂರು ಭಾಗವಾಗುವದು. ಅದರ ಅತ್ಯಂತ ಸ್ಥೂಲ ಭಾಗವು ಮೂತ್ರವಾಗುವದು, ಮಧ್ಯಮ ಭಾಗವು ರಕ್ತವಾಗುವದು, ಅತ್ಯಂತ ಸೂಕ್ಷ್ಮ ಭಾಗವು ಪ್ರಾಣವಾಗುವದು.

(೩) ತಿಂದ ಎಣ್ಣೆಯು (ತೇಜವು) ಮೂರು ಭಾಗವಾಗುವದು. ಅದರ ಅತ್ಯಂತ ಸ್ಥೂಲ ಭಾಗವು ಎಲುಬು ಆಗುವದು, ಮಧ್ಯಮ ಭಾಗವು ಮಜ್ಜಾ ಆಗುವದು, ಅತ್ಯಂತ ಸೂಕ್ಷ್ಮ ಭಾಗವು ವಾಣಿಯಾಗುವದು.

ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇ-
ಜೋಮಯೀ ವಾಗಿತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ
ತಥಾ ಸೋಮ್ಯೇತಿ ಹೋವಾಚ ॥ ೪ ॥

॥ ಇತಿ ಪಂಚಮಃ ಖಂಡಃ ॥

( ೪ ) ಸೋಮ್ಯನೇ, ಮನವು ಅನ್ನಮಯವು, ಪ್ರಾಣವು ಆಪೋಮಯವು, ವಾಣಿಯು ತೇಜೋಮಯವು.' 'ನನಗೆ ಇನ್ನೂ ಹೆಚ್ಚು ಜ್ಞಾನವನ್ನು ಹೇಳಬೇಕು, ಭಗವನ್' ಎಂದು ಮಗನು ಅಂದನು. ಆಗ 'ಒಳ್ಳೇದು ಮಗನೇ' ಎಂದು ತಂದೆಯು ಹೇಳಿದನು.

೫ ನೆಯ ಖಂಡವು ಸಮಾಪ್ತವು

ದಧ್ನಃ ಸೋಮ್ಯ ಮಥ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮು-
ದೀಷತಿ ತತ್ಸರ್ಪಿರ್ಭವತಿ ॥ ೧ ॥

ಏವಮೇವ ಖಲು ಸೋಮ್ಯಾನ್ನಸ್ಯಾಶ್ಯಮಾನಸ್ಯ ಯೋಽಣಿಮಾ ಸ
ಊರ್ಧ್ವಃ ಸಮುದೀಷತಿ ತನ್ಮನೋ ಭವತಿ ॥ ೨ ॥

ಅಪಾಂ ಸೋಮ್ಯ ಪೀಯಮಾನಾನಾಂ ಯೋಽಣಿಮಾ ಸ ಊರ್ಧ್ವಃ
ಸಮುದೀಷತಿ ಸ ಪ್ರಾಣೋ ಭವತಿ ॥ ೩ ॥

ತೇಜಸಃ ಸೋಮ್ಯಾಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀ-
ಷತಿ ಸಾ ವಾಗ್ಭವತಿ ॥ ೪ ॥

( ೧ ) 'ಸೋಮ್ಯನೇ, ಕಡೆಯಲ್ಪಡುವ ಮೊಸರಿನ ಸೂಕ್ಷ್ಮ ಅಂಶವು ( ಕೆನೆಯಂತೆ ) ಮೇಲೆ ಕೂಡಿ ಬರುವದು. ಅದು ತುಪ್ಪವಾಗುವದು.

( ೨ ) ಸೋಮ್ಯನೇ, ಅದೇ ರೀತಿ ತಿನ್ನಲ್ಪಟ್ಟ ಅನ್ನದ ಅತ್ಯಂತ ಸೂಕ್ಷ್ಮ ಭಾಗವು ಮೇಲೆ ಕೂಡಿ ಬರುವದು. ಅದು ಮನಸು ಆಗುವದು.

( ೩ ) ಸೋಮ್ಯನೇ, ಕುಡಿಯಲ್ಪಡುವ ನೀರಿನ ಅತ್ಯಂತ ಸೂಕ್ಷ್ಮ ಭಾಗವು ಮೇಲೆ ಕೂಡಿಬರುವದು. ಅದು ಪ್ರಾಣ ಆಗುವದು.

( ೪ ) ಸೋಮ್ಯನೇ, ತಿನ್ನಲ್ಪಡುವ ತೇಜದ ( ಎಣ್ಣೆಯ ) ಅತ್ಯಂತ ಸೂಕ್ಷ್ಮ ಭಾಗವು ಮೇಲೆ ಕೂಡಿಬರುವದು. ಅದು ವಾಣಿ ಆಗುವದು.

ಅನ್ನಮಯಗ್ಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋ-
ಮಯೀ ವಾಗಿತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ
ಸೋಮ್ಯೇತಿ ಹೋವಾಚ ॥ ೫ ॥

॥ ಇತಿ ಷಷ್ಠಃ ಖಂಡಃ ॥

( ೫ ) ಸೋಮ್ಯನೇ, ಮನವು ಅನ್ನಮಯವು, ಪ್ರಾಣವು ಆಪೋಮಯವು, ವಾಣಿಯು ತೇಜೋಮಯವು.' 'ಭಗವನ್, ನನಗೆ ಇನ್ನೂ ಹೆಚ್ಚು ಜ್ಞಾನ ವನ್ನು ಹೇಳಬೇಕು' ಎಂದು ಮಗನು ಅಂದನು. 'ಒಳ್ಳೇದು ಮಗನೇ' ಎಂದು ತಂದೆಯು ಒಪ್ಪಿದನು.

೬ ನೆಯ ಖಂಡವು ಸಮಾಪ್ತವು

ಷೋಡಶಕಲಃ ಸೋಮ್ಯ ಪುರುಷಃ ಪಂಚದಶಾಹಾನಿ ಮಾಶೀಃ
ಕಾಮಮಪಃ ಪಿಬಾಪೋಮಯಃ ಪ್ರಾಣೋ ನ ಪಿಬತೋ
ವಿಚ್ಛೇತ್ಸ್ಯತ ಇತಿ ॥ ೧ ॥

ಸ ಹ ಪಂಚದಶಾಹಾನಿ ನಾಶಾಥ ಹೈನಮುಪಸಸಾದ ಕಿಂ ಬ್ರವೀಮಿ
ಭೋ ಇತ್ಯೃಚಃ ಸೋಮ್ಯ ಯಜೂಗ್ಂಷಿ ಸಾಮಾನೀತಿ ಸ ಹೋವಾಚ
ನ ವೈ ಮಾ ಪ್ರತಿಭಾಂತಿ ಭೋ ಇತಿ ॥ ೨ ॥

( ೧ ) 'ಸೋಮ್ಯನೇ, ಪುರಷನು ೧೬ ಕಲೆಗಳುಳ್ಳವನು. ಹದಿನೈದು ದಿನಗಳವರೆಗೆ ಏನೂ ಉಣ್ಣದೆ ಇರು. ನೀರು ಮಾತ್ರ ಬೇಕಾದಷ್ಟು ಕುಡಿ. ಪ್ರಾಣವು ಆಪೋಮಯವಿರುವದು. ನೀರು ಕುಡಿಯದೆ ಹೋದರೆ ಪ್ರಾಣವು ನಷ್ಟವಾಗುವದು.'

( ೨ ) ಮಗನು ಹದಿನೈದು ದಿನಗಳವರೆಗೆ ಉಪವಾಸ ಮಾಡಿದನು. ಬಳಿಕ ತಂದೆಯ ಬಳಿಗೆ ಹೋಗಿ, 'ಹಿರಿಯರೇ, ಏನು ಹೇಳಲಿ,' ಎಂದು ಕೇಳಿದನು. 'ಋಕ್, ಯಜುಸ್, ಸಾಮಗಳನ್ನು ಅನ್ನು' ಎಂದು ತಂದೆಯು ಹೇಳಿದನು. 'ಅವು ನನಗೆ ನೆನಪಾಗುವದಿಲ್ಲ ಸ್ವಾಮೀ,' ಎಂದು ಶ್ವೇತ-ಕೇತವು ಹೇಳಿದನು.

ತಂ ಹೋವಾಚ ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕೋಽಂ-
ಗಾರಃ ಖದ್ಯೋತಮಾತ್ರಃ ಪರಿಶಿಷ್ಟಃ ಸ್ಯಾತ್ತೇನ ತತೋಽಪಿ ನ
ಬಹು ದಹೇದೇವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ
ಕಲಾತಿಶಿಷ್ಟಾ ಸ್ಯಾತ್ತಯೈತರ್ಹಿ ವೇದಾನ್ನಾನುಭವಸ್ಯಶಾನಾಥ ಮೇ
ವಿಜ್ಞಾಸ್ಯಸೀತಿ ॥ ೩ ॥

ಸ ಹಾಶಾಥ ಹೈನಮುಪಸಸಾದ ತಂ ಹ ಯತ್ಕಿಂಚ ಪಪ್ರಚ್ಛ ಸರ್ವಂ
ಹ ಪ್ರತಿಪೇದೇ ॥ ೪ ॥

ತಂ ಹೋವಾಚ ಯಥಾ ಸೋಮ್ಯ ಮಹತೋಽಭ್ಯಾಹತಸ್ಯೈಕ-
ಮಂಗಾರಂ ಖದ್ಯೋತಮಾತ್ರಂ ಪರಿಶಿಷ್ಟಂ ತಂ ತೃಣೈರುಪಸಮಾ-
ಧಾಯ ಪ್ರಾಜ್ವಲಯೇತ್ತೇನ ತತೋಽಪಿ ಬಹು ದಹೇತ್ ॥ ೫ ॥

ಏವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾತಿಶಿಷ್ಟಾ-
ಭೂತ್ಸಾಽನ್ನೇನೋಪಸಮಾಹಿತಾ ಪ್ರಾಜ್ವಾಲೀತ್ತಯೈತರ್ಹಿ ವೇದಾನ-
ನುಭವಸ್ಯನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣ-
ಸ್ತೇಜೋಮಯೀ ವಾಗಿತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ॥ ೬ ॥

॥ ಇತಿ ಸಪ್ತಮಃ ಖಂಡಃ ॥

( ೩ ) ತಂದೆಯು ಅಂದದ್ದು, ‘ ಮಗನೇ, ಪ್ರಜ್ವಲಿತವಾದ ಅಗ್ನಿಯು ಆರಿ ಅದರ ಒಂದೇ ಕಿಡಿಯು ಉಳಿಯಿತೆಂದರೆ ಅದು ಹೇಗೆ ವಿಶೇಷ ಸುಡಲಾರದೊ ಅದರಂತೆ ನಿನ್ನ ೧೬ ಕಲೆಗಳಲ್ಲಿ ಒಂದೇ ಅವಶಿಷ್ಟ ಉಳಿದಿರುವುದರಿಂದ ನಿನಗೆ ವೇದಗಳು ನೆನಪಾಗಲೊಲ್ಲವು ; ಇನ್ನು ನಾನು ಹೇಳಿದಂತೆ ಉಣ್ಣು ಅಂದರೆ ಪುನಃ ಎಲ್ಲ ನೆನಪಾಗುವದು. ’

( ೪ ) ಮಗನು ಉಂಡನು ಮತ್ತು ತಂದೆಯ ಬಳಿಗೆ ಹೋದನು. ಅವನು ಕೇಳಿದ್ದನ್ನೆಲ್ಲ ಹೇಳಲು ಸಮರ್ಥನಾದನು.

( ೫ ) ತಂದೆಯು ಮಗನಿಗೆ ಅಂದದ್ದು, ‘ ಸೋಮ್ಯನೇ, ದೊಡ್ಡ ಬೆಂಕಿಯು ಆರಿ ಒಂದೇ ಕಿಡಿಯು ಉಳಿಯಿತೆಂದರೆ ಅದನ್ನು ಪುನಃ ಹುಲ್ಲು ಹಾಕಿ ಹೊತ್ತಿಸುವಂತೆ ಮತ್ತು ಆ ಮೇಲೆ ಅದು ಬಹಳ ಸುಡಲು ಸಮರ್ಥವಾಗುವಂತೆ,

( ೬ ) ಸೋಮ್ಯನೇ, ನಿನ್ನ ಹದಿನಾರು ಕಲೆಗಳಲ್ಲಿ ಅವಶಿಷ್ಟವಾದ ಒಂದೇ ಕಲೆಯನ್ನು ನೀನು ಅನ್ನದಿಂದ ಪುನಃ ಹೊತ್ತಿಸಿರುವಿ. ಆದುದರಿಂದ ಈಗ ವೇದಗಳನ್ನು ಅನ್ನಬಲ್ಲಿ. ಸೋಮ್ಯನೇ, ಮನಸು ಅನ್ನಮಯವು, ಪ್ರಾಣವು

ಆಪ್ನೋಮಯವು, ವಾಣಿಯು ತೇಜೋಮಯವು ' ಹೀಗೆ ಹೇಳಲು ಶ್ವೇತಕೇತು ವಿಗೆ ತಿಳಿಯಿತು, ಅದೆಲ್ಲ ತಿಳಿಯಿತು.

೭ನೆಯ ಖಂಡವು ಸಮಾಪ್ತವು

ಉದ್ದಾಲಕೋ ಹಾರುಣಿಃ ಶ್ವೇತಕೇತುಂ ಪುತ್ರಮುವಾಚ ಸ್ವಪ್ನಾಂತಂ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾ- ದೇನಂ ಸ್ವಪಿತೀತ್ಯಾಚಕ್ಷತೇ ಸ್ವಂ ಹ್ಯಪೀತೋ ಭವತಿ || ೧ ||

ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ ಪತಿತ್ವಾನ್ಯ- ತ್ರಾಯತನಮಲಬ್ಧ್ವಾ ಬಂಧನಮೇವೋಪಶ್ರಯತ ಏವಮೇವ ಖಲು ಸೋಮ್ಯ ತನ್ಮನೋ ದಿಶಂ ದಿಶಂ ಪತಿತ್ವಾನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಶ್ರಯತೇ ಪ್ರಾಣಬಂಧನಂ ಹಿ ಸೋಮ್ಯ ಮನ ಇತಿ || ೨ ||

ಅಶನಾಪಿಪಾಸೇ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷೋಽ- ಶಿಶಿಷತಿ ನಾಮಾಪ ಏವ ತದಶಿತಂ ನಯಂತೇ ತದ್ಯಥಾ ಗೋನಾಯೋಽ- ಶ್ವನಾಯಃ ಪುರುಷನಾಯ ಇತ್ಯೇವಂ ತದಪ ಆಚಕ್ಷತೇಽಶನಾಯೇತಿ ತತ್ರೈತಚ್ಛುಂಗಮುತ್ಪತಿತಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತೀತಿ || ೩ ||

( ೧ ) ಉದ್ದಾಲಕ ಆರುಣಿಯು ಮಗನಾದ ಶ್ವೇತಕೇತುವಿಗೆ ಅಂದದ್ದು, ' ಸೋಮ್ಯನೇ, ನಿದ್ರೆಯ ಸ್ವರೂಪವನ್ನು ನನ್ನಿಂದ ಅರಿತುಕೊ. ಪುರುಷನು ಮಲಗಿದಾಗ ಸತ್‌ದೊಡನೆ ( ಮೂಲವಸ್ತುವಿನೊಡನೆ ) ಒಂದಾಗಿರುವನು, ತನ್ನಲ್ಲಿ (ಆತ್ಮನಲ್ಲಿ) ಲಯ ಹೊಂದಿರುವನು, ಆದುದರಿಂದ, ' ಮಲಗಿರುವನು ' ಎಂದು ಅನ್ನುವರು ; ಯಾಕಂದರೆ ( ಸ್ವಮ್ ಅಪೀತಃ ) ಅವನು ತನ್ನಲ್ಲಿ ಒಂದಾಗಿರುವನು.

( ೨ ) ಯಾವ ಪ್ರಕಾರ ದಾರದಿಂದ (ಬಲೆಗಾರನಿಂದ) ಕಟ್ಟಲ್ಪಟ್ಟ ಪಕ್ಷಿಯು ದಿಕ್ಕುದಿಕ್ಕಿಗೆ ಸುತ್ತಾಡಿದರೂ ಎಲ್ಲಿಯೂ ಆಶ್ರಯದೊರೆಯದೆ ಪುನಃ ತನ್ನ ಬಂಧನದ ಆಶ್ರಯದಿಂದಲೆ ಇರುವದೊ ಅದೇ ಪ್ರಕಾರ ಸೋಮ್ಯನೇ, ಮನಸು ದಿಕ್ಕುದಿಕ್ಕಿಗೆ ಹೋಗಿ ಎಲ್ಲಿಯೂ ಆಶ್ರಯದೊರೆಯದೆ ತನ್ನ ಪ್ರಾಣವನ್ನೆ ಆಶ್ರಯಿಸುವದು. ಸೋಮ್ಯನೇ, ಪ್ರಾಣವೇ ಮನಸಿನ ಬಂಧನವು.

( ೩ ) ಸೋಮ್ಯನೇ, ನನ್ನಿಂದ ಹಸಿವು ನೀರಡಿಕೆಗಳ ಸ್ವರೂಪವನ್ನು

ತಸ್ಯ ಕ್ವ ಮೂಲಂ ಸ್ಯಾದನ್ಯತ್ರಾನ್ನಾದೇವಮೇವ ಖಲು ಸೋಮ್ಯಾನ್ನೇನ ಶುಂಗೇನಾಪೋಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಂಗೇನ ತೇಜೋ-ಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ

ಅಥ ಯತ್ರೈತತ್ಪುರುಷಃ ಪಿಪಾಸತಿ ನಾಮ ತೇಜ ಏವ ತತ್ಪೀತಂ ನಯತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವಂ ತತ್ತೇಜ ಆಚಷ್ಟ ಉದನ್ಯೇತಿ ತತ್ರೈತದೇವ ಶುಂಗಮುತ್ಪ-ತಿತಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತೀತಿ ॥ ೫ ॥

ತಿಳಿದುಕೊ. ಪುರಷನು ತಿನ್ನುವ ಇಚ್ಛೆಯುಳ್ಳನಾದನೆಂದರೆ ನೀರೇ ಆ ತಿಂದ ಅನ್ನವನ್ನು ( ಯೋಗ್ಯವಾಗಿ ) ಒಯ್ಯುವರು. ಯಾವರೀತಿ ( ಅನುಕ್ರಮವಾಗಿ ಆಕಳು, ಕುದುರೆ, ಮನುಷ್ಯ ಇವರನ್ನು ಒಯ್ಯುವವರು ) ಗೋನಾಯ, ಅಶ್ವನಾಯ, ಪುರುಷನಾಯ ಎಂದೆನಿಸುವರೊ ಅದೇ ರೀತಿ ನೀರು ' ಅಶನಾಯ' ಎಂದೆನಿಸುವದು. ಹೀಗಿರುವುದರಿಂದ ಸೋಮ್ಯನೇ, ಮೊಳೆತ ಈ ಅಂಕುರವು ( ನೀರಿನಿಂದ ಬೆಳೆದ ದೇಹ ) ಬೇರು ಇಲ್ಲದೆ ಇಲ್ಲ, ಎಂದು ತಿಳಿ.

( ೪ ) ಇನ್ನು ಸೋಮ್ಯನೇ, ಅನ್ನದ ಹೊರ್ತು ಅದರ ( ದೇಹದ) ಮೂಲವು ಇನ್ನಾವುದು ಇರಬಲ್ಲದು ? ಅದೇ ರೀತಿ ಅನ್ನ ಎಂಬ ಅಂಕುರದಿಂದ ನೀರು ಎಂಬ ಬೇರನ್ನು, ನೀರು ಎಂಬ ಅಂಕುರದಿಂದ ತೇಜ ಎಂಬ ಬೇರನ್ನು, ತೇಜ ಎಂಬ ಅಂಕುರದಿಂದ ಸತ್ ಎಂಬ ಬೇರನ್ನು, ತಿಳಿದುಕೊ. ಸೋಮ್ಯನೇ, ಈ ಎಲ್ಲ ಪ್ರಜೆಗಳು ಸತ್ ಎಂಬ ಬೇರು ಉಳ್ಳವರು, ಸತ್ ಇದೇ ಅವರ ಆಶ್ರಯವು, ಅವರ ಆಧಾರವು.

( ೫ ) ಇನ್ನು ಪುರುಷನು ನೀರಡಿಸಿದನೆಂದರೆ ಕುಡಿದ ನೀರನ್ನು ತೇಜವೆ ಒಯ್ಯುವದು. ಯಾವರೀತಿ ಗೋನಾಯ, ಅಶ್ವನಾಯ, ಪುರುಷನಾಯ ಎಂಬ ಹೆಸರುಗಳಿರುವವೊ ಅದೇ ರೀತಿ ತೇಜಕ್ಕೆ ' ಉದನ್ಯ ' ( ನೀರನ್ನು ಒಯ್ಯುವ ) ಎಂಬ ಹೆಸರು ಇರುವದು. ಅದರಿಂದ ಸೋಮ್ಯನೇ, ಈ ಅಂಕುರವು ( ದೇಹವು ) ಉತ್ಪನ್ನವಾಗಿರುವದು. ಇದು ಬೇರು ಇಲ್ಲದ್ದು ಇಲ್ಲ ವೆಂಬುದನ್ನು ಅರಿತುಕೊ.

ತಸ್ಯ ಕ್ವ ಮೂಲꣳ ಸ್ಯಾದನ್ಯತ್ರಾದ್ಭ್ಯೋಽದ್ಭಿಃ ಸೋಮ್ಯ ಶುಂಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತದುಕ್ತಂ ಪುರಸ್ತಾದೇವ ಭವತ್ಯಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ॥ ೬ ॥

ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೭ ॥

॥ ಇತ್ಯಷ್ಟಮಃ ಖಂಡಃ ॥

( ೬ ) ಸೋಮ್ಯನೇ, ನೀರಿನ ಹೊರ್ತು ಇದರ ( ಈ ದೇಹದ ) ಮೂಲವು ಇನ್ನಾವುದು ಇರಬಲ್ಲದು ? ನೀರೆಂಬ ಅಂಕುರದಿಂದ ತೇಜ ಎಂಬ ಮೂಲವನ್ನು, ತೇಜ ಎಂಬ ಅಂಕುರದಿಂದ ಸತ್ ಎಂಬ ಮೂಲವನ್ನು ಅರಿತುಕೊ. ಸೋಮ್ಯನೆ, ಈ ಎಲ್ಲ ಪ್ರಜೆಗಳು ಸತ್ ಎಂಬ ಬೇರು ಉಳ್ಳವರು, ಸತ್ ಇದೇ ಅವರ ಆಶ್ರಯವು, ಆಧಾರವು. ಮಗನೇ, ಈ ಮೂರು ( ತೇಜಾದಿ ) ದೇವತೆಗಳು ಪುರುಷನಲ್ಲಿ ತ್ರಿವೃತ್ ಆಗಿ ಹೇಗೆ ಇರುವವು ಇದನ್ನು ನಾನು ಮೊದಲೇ ಹೇಳಿರುವೆನು. ಅದೇ ರೀತಿ ಸಾಯುವ ಮನುಷ್ಯನ ವಾಣಿಯು ಮನಸಿನಲ್ಲಿ, ಮನವು ಪ್ರಾಣದಲ್ಲಿ, ಪ್ರಾಣವು ತೇಜದಲ್ಲಿ, ತೇಜವು ಪರಾದೇವತೆಯಲ್ಲಿ ಲಯ ಹೊಂದುವದು.

( ೭ ) ಅದು ( ಆ ಪರಾದೇವತೆಯು ) ಅತ್ಯಂತ ಸೂಕ್ಷ್ಮವು. ಇದೆಲ್ಲವು ಆತ್ಮಸ್ವರೂಪವು, ಅದು ಸತ್ಯವು, ಅದು ಆತ್ಮವು ಶ್ವೇತಕೇತುವೇ, ನೀನು ಅದೇ ಇರುವಿ.' ಇದನ್ನು ಕೇಳಿ 'ನನಗೆ ಇನ್ನೂ ಜ್ಞಾನವನ್ನು ಹೇಳಬೇಕು, ಭಗವನ್.' ಎಂದು ಮಗನು ಅಂದನು, 'ಒಳ್ಳೇದು ಮಗನೇ.' ಎಂದು ತಂದೆಯು ಒಪ್ಪಿದನು.

೮ ನೆಯ ಖಂಡವು ಸಮಾಪ್ತವು

ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ ನಾನಾತ್ಯಯಾನಾಂ
ವೃಕ್ಷಾಣಾಂ ರಸಾನ್ಸಮವಹಾರಮೇಕತಾಂ ರಸಂ ಗಮಯಂತಿ ॥ ೧ ॥

ತೇ ಯಥಾ ತತ್ರ ನ ವಿವೇಕಂ ಲಭಂತೇಽಮುಷ್ಯಾಹಂ ವೃಕ್ಷಸ್ಯ
ರಸೋಽಸ್ಮ್ಯಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವಮೇವ ಖಲು
ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ
ಸಂಪದ್ಯಾಮಹ ಇತಿ ॥ ೨ ॥

ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ
ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯ-
ದ್ಭವಂತಿ ತದಾ ಭವಂತಿ ॥ ೩ ॥

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್
ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೪ ॥

॥ ಇತಿ ನವಮಃ ಖಂಡಃ ॥

( ೧–೨ ) 'ಪ್ರಿಯ ಮಗನೇ, ಜೇನ್ನೊಣಗಳು ನಾನಾ ದಿಕ್ಕುಗಳಿಂದ ಗಿಡಗಳ ರಸಗಳನ್ನು ಕೂಡಿಸಿ ಜೇನನ್ನು ಯಾವರೀತಿ ಸಿದ್ಧಪಡಿಸುವವೊ, ಆ ಜೇನಿನಲ್ಲಿ ಆ ರಸಗಳು ನಾನು ಇಂಥ ಗಿಡದ ರಸವು, ನಾನು ಇಂಥ ಗಿಡದ ರಸವು, ಎಂಬ ಭೇದವನ್ನು ಯಾವರೀತಿ ಅರಿತಿರುವದಿಲ್ಲವೊ ಅದೇ ರೀತಿ ಈ ಎಲ್ಲ ಪ್ರಜೆಗಳು 'ಸತ್' ದಲ್ಲಿ ಲೀನವಾಗಿ ನಾವು ಸತ್‌ದಲ್ಲಿ ಲೀನವಾಗಿರುವೆವು ಎಂಬುದನ್ನು ಅರಿಯುವದಿಲ್ಲ.

( ೩ ) ಆ ಪ್ರಜೆಗಳು ( ಪ್ರಾಣಿಮಾತ್ರಗಳು ) ಇಲ್ಲಿ ಮೊದಲು ಹುಲಿ, ಸಿಂಹ, ತೋಳ, ವರಾಹ, ಕೀಟ, ಜಿಟ್ಟೆ, ಸೊಳ್ಳೆ, ಇವುಗಳಲ್ಲಿ ಯಾವುದೇ ಒಂದು ಆಗಿ ಯಾವ ರೂಪದಿಂದ ಇದ್ದವೊ ಅದೇ ರೂಪವನ್ನು ಪುನಃ ಧರಿಸುವವು.

( ೪ ) ಆ ಸತ್ ( ಪರಾದೇವತೆಯು ) ಅತ್ಯಂತ ಸೂಕ್ಷ್ಮವು, ಇದೆಲ್ಲವೂ ಆತ್ಮಸ್ವರೂಪವು, ಅದು ಸತ್ಯವು, ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ.' ಇದನ್ನು ಕೇಳಿ, 'ಭಗವನ್, ನನಗೆ ಇನ್ನೂ ಜ್ಞಾನವನ್ನು ಹೇಳಬೇಕು.' ಎಂದು ಮಗನು ಅಂದನು. 'ಒಳ್ಳೇದು ಮಗನೆ.' ಎಂದು ತಂದೆಯು ಒಪ್ಪಿಕೊಂಡನು.

೯ ನೆಯ ಖಂಡವು ಸಮಾಪ್ತವು

ಇಮಾಃ ಸೋಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ಪ್ರತೀ-
ಚ್ಯಸ್ತಾಃ ಸಮುದ್ರಾತ್ಸಮುದ್ರಮೇವಾಪಿಯಂತಿ ಸಮುದ್ರ ಏವ
ಭವತಿ ತಾ ಯಥಾ ತತ್ರ ನ ವಿದುರಿಯಮಹಮಸ್ಮೀತಿ ॥ ೧ ॥

ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗತ್ಯ ನ
ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ
ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ
ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತದಾ ಭವಂತಿ ॥ ೨ ॥

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್
ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತಿ ದಶಮಃ ಖಂಡಃ ॥

(೧) ಸೋಮ್ಯನೇ, ಈ ಹೊಳೆಗಳು ಪೂರ್ವಕ್ಕೆ ಪೂರ್ವವಾಹಿನಿಗಳಾಗಿ ಪಶ್ಚಿಮಕ್ಕೆ ಪಶ್ಚಿಮವಾಹಿನಿಗಳಾಗಿ ಹರಿಯುವವು. ಅವು ಸಮುದ್ರದಿಂದ ಹೊರಟು ಸಮುದ್ರಕ್ಕೆಯೆ ಹೋಗಿ ಕೂಡುವವು, ಸಮುದ್ರವೆ ಆಗುವವು. ಅವು ಆ ಸಮುದ್ರದಲ್ಲಿ, 'ನಾನು ಇಂಥ ಹೊಳೆಯು, ನಾನು ಇಂಥ ಹೊಳೆಯು' ಎಂಬುದನ್ನು ಹೇಗೆ ಅರಿಯುವದಿಲ್ಲವೊ,

(೨) ಹಾಗೆಯೆ ಸೋಮ್ಯನೇ, ಈ ಪ್ರಜೆಗಳು 'ಸತ್' ದಿಂದ ಹುಟ್ಟಿ 'ಸತ್' ದಲ್ಲಿಯೆ ಹೋಗುತಿರುವವು, ಎಂಬುದನ್ನು ಅವು ಅರಿತಿರುವುದಿಲ್ಲ. ಅವು ಹುಲಿ, ಸಿಂಹ, ತೋಳ, ವರಾಹ, ಕೀಟ, ಜಿಟ್ಟೆ, ಸೊಳ್ಳೆ, ಇವುಗಳಲ್ಲಿ ಯಾವುದೇ ಒಂದು ಆಗಿ ಮೊದಲು ಯಾವ ರೂಪದಿಂದ ಇದ್ದವೊ ಅದೇ ರೂಪವನ್ನು ಪುನಃ ಧರಿಸುವವು.

(೩) ಆ ಸತ್ ಎಂಬುದು ಅತ್ಯಂತ ಸೂಕ್ಷ್ಮವು. ಇದೆಲ್ಲವೂ ಆತ್ಮ ಸ್ವರೂಪವು. ಅದು ಸತ್ಯವು, ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ.' ಇದನ್ನು ಕೇಳಿ, 'ಭಗವನ್, ನನಗೆ ಇನ್ನೂ ಜ್ಞಾನವನ್ನು ಹೇಳ ಬೇಕು.' ಎಂದು ಮಗನು ಅಂದನು. 'ಒಳ್ಳೇದು ಮಗನೇ.' ಎಂದು ತಂದೆಯು ಒಪ್ಪಿಕೊಂಡನು.

೧೦ ನೆಯ ಖಂಡವು ಸಮಾಪ್ತವು

ಅಸ್ಯ ಸೋಮ್ಯ ಮಹತೋ ವೃಕ್ಷಸ್ಯ ಯೋ ಮೂಲೇಽಭ್ಯಾಹನ್ಯಾಜ್ಜೀವ-
ನ್ಸ್ರವೇದ್ಯೋ ಮಧ್ಯೇಽಭ್ಯಾಹನ್ಯಾಜ್ಜೀವನ್ಸ್ರವೇದ್ಯೋಽಗ್ರೇಽ-
ಭ್ಯಾಹನ್ಯಾಜ್ಜೀವನ್ಸ್ರವೇತ್ಸ ಏಷ ಜೀವೇನಾತ್ಮನಾನುಪ್ರಭೂತಃ
ಪೇಪೀಯಮಾನೋ ಮೋದಮಾನಸ್ತಿಷ್ಠತಿ ॥ ೧ ॥

ಅಸ್ಯ ಯದೇಕಾꣳಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ
ದ್ವಿತೀಯಾಂ ಜಹಾತ್ಯಥ ಸಾ ಶುಷ್ಯತಿ ತೃತೀಯಾಂ ಜಹಾತ್ಯಥ ಸಾ
ಶುಷ್ಯತಿ ಸರ್ವಂ ಜಹಾತಿ ಸರ್ವಃ ಶುಷ್ಯತ್ಯೇವಮೇವ ಖಲು ಸೋಮ್ಯ
ವಿದ್ಧೀತಿ ಹೋವಾಚ ॥ ೨ ॥

ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ
ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್
ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತ್ಯೇಕಾದಶಃ ಖಂಡಃ ॥

(೧) 'ಸೋಮ್ಯನೇ, ಈ ಮಹಾನ್ ವೃಕ್ಷದ ಬೊಡ್ಡೆಗೆ ಪೆಟ್ಟು ಹಾಕಿದರೆ ಅದು ಜೀವಂತ ಉಳಿದು ರಸವನ್ನು ಸ್ರವಿಸುವದು; ನಡುವೆ ಪೆಟ್ಟು ಹಾಕಿದರೆ ಅದು ಜೀವಂತ ಉಳಿದು ರಸವನ್ನು ಸ್ರವಿಸುವದು. ಅದೇ ರೀತಿ ತುದಿಗೆ ಪೆಟ್ಟು ಹಾಕಿದರೆ ಅದು ಜೀವಂತ ಉಳಿದು ರಸವನ್ನು ಸ್ರವಿಸುವದು. ಈ ವೃಕ್ಷವು ಜೀವದಿಂದ ಅಂದರೆ ಆತ್ಮನಿಂದ ವ್ಯಾಪ್ತವಿರುವದು. ಅದು ನೀರನ್ನು ಕುಡಿಯುತ್ತ ಆ ನಂದಿಸುತ್ತ ನಿಂತಿರುವದು

(೨) ಜೀವವು ಇದರ ಒಂದು ಟೊಂಗೆಯನ್ನು ಬಿಟ್ಟು ಹೋಯಿತೆಂದರೆ ಆ ಟೊಂಗೆಯು ಒಣಗುವದು. ಎರಡನೆಯ ಟೊಂಗೆಯನ್ನು ಬಿಟ್ಟು ಹೋಯಿತೆಂದರೆ ಆ ಟೊಂಗೆಯು ಒಣಗುವದು, ಮೂರನೆಯ ಟೊಂಗೆಯನ್ನು ಬಿಟ್ಟು ಹೋಯಿತೆಂದರೆ ಆ ಟೊಂಗೆಯು ಒಣಗುವದು; ಇಡೀ ಗಿಡವನ್ನು ಬಿಟ್ಟು ಹೋಯಿತೆಂದರೆ ಇಡೀ ಗಿಡವು ಒಣಗಿ ಹೋಗುವದು. ಸೋಮ್ಯನೇ, ಇದು ಹೀಗೆಯೆ ಇರುವದೆಂಬದನ್ನು ತಿಳಿ.

(೩) ಜೀವದಿಂದ ರಹಿತವಾಯಿತೆಂದರೆ ಇದು (ದೇಹವು) ಸಾಯುವದು. ಆದರೆ ಜೀವವು ಸಾಯುವದಿಲ್ಲ. ಅದು ಅತ್ಯಂತ ಸೂಕ್ಷ್ಮವು. ಇದೆಲ್ಲವೂ ಆತ್ಮಮಯವು. ಅದು ಸತ್ಯವು. ಅದು ಆತ್ಮವು. ಶ್ವೇತಕೇತುವೇ, ನೀನು

ಆದೇ ಇರುವಿ.' ಇದನ್ನು ಕೇಳಿ, 'ಭಗವನ್ ನನಗೆ ಇನ್ನೂ ಜ್ಞಾನವನ್ನು ಹೇಳಬೇಕು,' ಎಂದು ಮಗನು ಅಂದನು. 'ಒಳ್ಳೇದು ಮಗನೇ.' ಎಂದು ತಂದೆಯು ಒಪ್ಪಿಕೊಂಡನು.

೧೧ ನೆಯ ಖಂಡವು ಸಮಾಪ್ತವು

ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ ಭಿಂಧೀತಿ ಭಿನ್ನಂ ಭಗವ ಇತಿ ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾ ಧಾನಾ ಭಗವ ಇತ್ಯಾಸಾಮಂಗೈಕಾಂ ಭಿಂಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ॥ ೧ ॥

ತಂ ಹೋವಾಚ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯೈಷೋಽಣಿಮ್ನ ಏವಂ ಮಹಾನ್ಯಗ್ರೋಧಸ್ತಿಷ್ಠತಿ ॥ ೨ ॥

ಶ್ರದ್ಧತ್ಸ್ವ ಸೋಮ್ಯೇತಿ ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತಿ ದ್ವಾದಶಃ ಖಂಡಃ ॥

( ೧ ) ( ತಂದೆ ಮಗನ ಸಂವಾದವು ಈ ಕೆಳಗಿನಂತೆ ನಡೆಯುವದು. ) 'ಒಂದು ಆಲದ ಹಣ್ಣನ್ನು ಇಲ್ಲಿ ತಾ.' 'ಇಕೋ ಇಲ್ಲಿರುವದು ಭಗವನ್.' 'ಅದನ್ನು ಒಡೆ.' 'ಇಕೋ ಒಡೆದೆನು ಭಗವನ್.' 'ಇದರಲ್ಲಿ ಏನು ಕಾಣುವದು ?' 'ಅತ್ಯಂತ ಸೂಕ್ಷ್ಮವಾದ ಬೀಜದ ಕಾಳುಗಳಿರುವವು ಭಗವನ್.' 'ಇವುಗಳಲ್ಲಿ ಒಂದನ್ನು ಸೀಳು ಮಗುವೇ, 'ಇಕೋ ಸೀಳಿದೆನು ಭಗವನ್.' 'ಅದರಲ್ಲಿ ಏನು ಕಾಣುವದು ?' 'ಏನೂ ಇಲ್ಲ ಭಗವನ್.' ( ಈ ಪ್ರಕಾರ ಸಂವಾದವಾಗುವದು ).

( ೨ ) ಆಗ ತಂದೆಯು ಅಂದದ್ದು, 'ಸೋಮ್ಯನೇ, ಯಾವ ಅತ್ಯಂತ ಸೂಕ್ಷ್ಮವಸ್ತುವನ್ನು ನೀನು ಇಲ್ಲಿ ಕಾಣಲಾರಿಯೊ ಅದರಿಂದಲೆ ಈ ದೊಡ್ಡ ಆಲದ ಮರವು ಆಗಿದೆ. ಸೋಮ್ಯನೇ, ಈ ಸತ್ಯದಲ್ಲಿ ಶ್ರದ್ಧೆಯನ್ನಿಡು.

( ೩ ) ಅದು (ಸತ್) ಅತ್ಯಂತ ಸೂಕ್ಷ್ಮವು. ಇದೆಲ್ಲವೂ ಆತ್ಮಸ್ವರೂಪವು. ಅದು ಸತ್ಯವು, ಅದು ಆತ್ಮವು, ಶ್ವೇತಕೇತುವೇ, ನೀನು ಆದೇ ಇರುವಿ' ಇದನ್ನು ಕೇಳಿ 'ಭಗವನ್, ನನಗೆ ಇನ್ನೂ ಜ್ಞಾನವನ್ನು ಹೇಳಬೇಕು' ಎಂದು ಮಗನು ಅಂದನು. 'ಒಳ್ಳೇದು ಮಗನೇ' ಎಂದು ತಂದೆಯು ಒಪ್ಪಿಕೊಂಡನು.

೧೨ ನೆಯ ಖಂಡವು ಸಮಾಪ್ತವು

ಲವಣಮೇತದುದಕೇಽವಧಾಯಾಥ ಮಾ ಪ್ರಾತರುಪಸೀದಥಾ ಇತಿ ಸ
ಹ ತಥಾ ಚಕಾರ ತꣳ ಹೋವಾಚ ಯದ್ದೋಷಾ ಲವಣಮುದ-
ಕೇಽವಾಧಾ ಅಂಗ ತದಾಹರೇತಿ ತದ್ಧಾವಮೃಶ್ಯ ನ ವಿವೇದ ॥ ೧ ॥

ಯಥಾ ವಿಲೀನಮೇವಾಂಗಾಸ್ಯಾಂತಾದಾಚಾಮೇತಿ ಕಥಮಿತಿ ಲವಣ-
ಮಿತಿ ಮಧ್ಯಾದಾಚಾಮೇತಿ ಕಥಮಿತಿ ಲವಣಮಿತ್ಯಂತಾದಾಚಾ-
ಮೇತಿ ಕಥಮಿತಿ ಲವಣಮಿತ್ಯಭಿಪ್ರಾಸ್ಯೈನದಥ ಮೋಪಸೀದಥಾ ಇತಿ
ತದ್ಧ ತಥಾ ಚಕಾರ ತಚ್ಛಶ್ವತ್ಸಂವರ್ತತೇ ತꣳ ಹೋವಾಚಾತ್ರ
ವಾವ ಕಿಲ ಸತ್ಸೋಮ್ಯ ನ ನಿಭಾಲಯಸೇಽತ್ರೈವ ಕಿಲೇತಿ ॥ ೨ ॥

ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್
ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತಿ ತ್ರಯೋದಶಃ ಖಂಡಃ ॥

(೧) 'ಈ ಉಪ್ಪನ್ನು ಈಗ ನೀರಲ್ಲಿ ಹಾಕಿ ಬೆಳಿಗ್ಗೆ ನನ್ನ ಬಳಿಗೆ ಬಾ' (ಎಂದು ತಂದೆಯು ಸಂಜೆಯಲ್ಲಿ ಒಂದು ಉಪ್ಪಿನ ಹರಳನ್ನು ಕೊಟ್ಟು ಮಗನಿಗೆ ಹೇಳಿದನು.) ಆವನು ಅದರಂತೆ ಮಾಡಿದನು 'ಮಗನೇ, ರಾತ್ರಿ ನೀನು ನೀರಲ್ಲಿ ಹಾಕಿಟ್ಟ ಉಪ್ಪನ್ನು ತೆಗೆದುಕೊಡು' ಎಂದು ತಂದೆಯು ಅನ್ನಲು ಮಗನು ಅದನ್ನು ಹುಡುಕಿದನು; ಆದು ದೊರೆಯಲಿಲ್ಲ

(೨) 'ಮಗನೇ, ಆದು ಬೆರೆತು ಹೋಗಿರುವದು. ನೀನು ನೀರಿನ ಮೇಲ್ಭಾಗದ ರುಚಿ ನೋಡು. ಆದು ಹೇಗೆ ಇದೆ?' 'ಅದು ಉಪ್ಪುಪ್ಪು ಇರುವದು.' 'ನೀರಿನ ಮಧ್ಯಭಾಗದ ರುಚಿ ನೋಡು, ಅದು ಹೇಗೆ ಇದೆ?' 'ಅದೂ ಉಪ್ಪುಪ್ಪು ಇರುವದು.' 'ನೀರಿನ ಕೆಳಭಾಗದ ರುಚಿ ನೋಡು, ಆದು ಹೇಗೆ ಇದೆ?' 'ಆದೂ ಉಪ್ಪುಪ್ಪು ಇರುವದು.' 'ಈ ನೀರು ಚಲ್ಲಿ ನನ್ನ ಬಳಿಗೆ ಬಾ' (ಹೀಗೆ ತಂದೆ-ಮಗನ ಸಂವಾದವಾದ ಬಳಿಕ) ಮಗನು ನೀರು ಚಲ್ಲಿ, ಆದು ನೀರಲ್ಲಿ ಎಲ್ಲೆಲ್ಲಿಯೂ ಬೆರೆತಿದೆ, ಎಂದುಕೊಂಡನು. ಮಗನಿಗೆ ತಂದೆಯು ಅಂದದ್ದು, 'ಮಗನೇ, ಆದು (ಉಪ್ಪು) ನೀರಲ್ಲಿ ಇದ್ದರೂ ನೀನು ಯಾವ ಪ್ರಕಾರವಾಗಿ ಕಾಣದೆ ಹೋದೆಯೊ ಆದೇ ಪ್ರಕಾರ ಆದು (ಸತ್) ಇಲ್ಲಿ (ಶರೀರದಲ್ಲಿ) ಇರುವದು. (ಇದಾದರೂ ಕಾಣದು.)

(೩) ಆದು ಅತ್ಯಂತ ಸೂಕ್ಷ್ಮವು, ಇದೆಲ್ಲವೂ ಆತ್ಮಮಯವು, ಆದು

ಸತ್ಯವು. ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ, ಇದನ್ನು ಕೇಳಿ 'ಭಗವನ್, ನನಗೆ ಇನ್ನೂ ಜ್ಞಾನವನ್ನು ಹೇಳಬೇಕು.' ಎಂದು ಮಗನು ಅಂದನು. 'ಒಳ್ಳೇದು ಮಗನೇ.' ಎಂದು ತಂದೆಯು ಒಪ್ಪಿದನು.

೧೩ ನೆಯ ಖಂಡವು ಸಮಾಪ್ತವು

ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋಽಭಿನದ್ಧಾಕ್ಷಮಾನೀಯ ತಂ
ತತೋಽತಿಜನೇ ವಿಸೃಜೇತ್ಸ ಯಥಾ ತತ್ರ ಪ್ರಾಂಗ್ವೋದಂಗ್ವಾಽ-
ಧರಾಂಗ್ವಾ ಪ್ರತ್ಯಂಗ್ವಾ ಪ್ರಧ್ಮಾಯೀತಾಽಭಿನದ್ಧಾಕ್ಷ ಆನೀತೋಽಭಿನ-
ದ್ಧಾಕ್ಷೋ ವಿಸೃಷ್ಟಃ ॥ ೧ ॥

ತಸ್ಯ ಯಥಾಭಿನಹನಂ ಪ್ರಮುಚ್ಯ ಪ್ರಬ್ರೂಯಾದೇತಾಂ ದಿಶಂ
ಗಂಧಾರಾ ಏತಾಂ ದಿಶಂ ವ್ರಜೇತಿ ಸ ಗ್ರಾಮಾದ್ಗ್ರಾಮಂ ಪೃಚ್ಛನ್
ಪಂಡಿತೋ ಮೇಧಾವೀ ಗಂಧಾರಾನೇವೋಪಸಂಪದ್ಯೇತೈವಮೇ
ವೇಹಾಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ
ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯ ಇತಿ ॥ ೨ ॥

(೧) 'ಮಗನೇ ಒಬ್ಬ ಪುರುಷನ ಕಣ್ಣು ಕಟ್ಟಿ ಅವನನ್ನು ಗಂಧಾರ ದೇಶದಿಂದ ತಂದು ನಿರ್ಜನ ಅರಣ್ಯದಲ್ಲಿ ಬಿಟ್ಟರೆ ಪೂರ್ವ ಪಶ್ಚಿಮ ದಕ್ಷಿಣ ಉತ್ತರ ದಿಕ್ಕುಗಳ ಕಡೆಗೆ ಮೋರೆ ಮಾಡಿ, 'ನನ್ನನ್ನು ಕಣ್ಣು ಕಟ್ಟಿ ತಂದಿರುವರು, ನನ್ನನ್ನು ಕಣ್ಣು ಕಟ್ಟಿ ಬಿಟ್ಟಿರುವರು. ನನ್ನನ್ನು ಕಟ್ಟಿ ಬಿಟ್ಟಿರುವರು,' ಎಂದು ಅವನು ಕೂಗುವನು.

(೨) (ಅದನ್ನು ಕೇಳಿದವರಾರಾದರೂ) ಅವನ ಕಣ್ಣು ಕಟ್ಟನ್ನು ಬಿಚ್ಚಿ, 'ಈ ದಿಕ್ಕಿಗೆ ಗಂಧಾರ ದೇಶವಿರುವದು, ಈ ದಿಕ್ಕಿಗೆ ಹೋಗು,' ಎಂದು ಹೇಳಿದರೆ, ಆ ಪಂಡಿತನು, ಬುದ್ಧಿವಂತನು ಕೇಳುತ್ತ ಕೇಳುತ್ತ ಗ್ರಾಮದಿಂದ ಗ್ರಾಮಕ್ಕೆ ಸಾಗಿ ಗಂಧಾರ ದೇಶವನ್ನು ಮುಟ್ಟುವಂತೆ, ಆಚಾರ್ಯನು (ಗುರುವು) ಭೆಟ್ಟಿಯಾದ ಪುರಷನು ಸತ್ಯವನ್ನು ಅರಿಯುವನು. ಅವನು ಮುಕ್ತಿಯನ್ನು ಪಡೆಯುವದೊಂದೇ ತಡವು, ಸತ್‌ದಲ್ಲಿ ಒಂದಾಗುವನು.

ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪ-
ಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತಿ ಚತುರ್ದಶಃ ಖಂಡಃ ॥

( ೩ ) ಅದು ಅತ್ಯಂತ ಸೂಕ್ಷ್ಮವು. ಇದೆಲ್ಲವೂ ಆತ್ಮಮಯವು. ಅದು ಸತ್ಯವು, ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ ' ಇದನ್ನು ಕೇಳಿ ' ಭಗವನ್, ನನಗೆ ಜ್ಞಾನವನ್ನು ಹೇಳಬೇಕು, ' ಎಂದು ಮಗನು ಅಂದನು. ' ಒಳ್ಳೇದು ಮಗನೇ. ' ಎಂದು ತಂದೆಯು ಒಪ್ಪಿದನು.

೧೪ ನೆಯ ಖಂಡವು ಸಮಾಪ್ತವು

ಪುರುಷꣳ ಸೋಮ್ಯೋತೋಪತಾಪಿನಂ ಜ್ಞಾತಯಃ ಪರ್ಯುಪಾಸತೇ
ಜಾನಾಸಿ ಮಾಮ್ ಜಾನಾಸಿ ಮಾಮಿತಿ ತಸ್ಯ ಯಾವನ್ನ ವಾಂಙ್ಮನಸಿ
ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ
ದೇವತಾಯಾಂ ತಾವಜ್ಜಾನಾತಿ ॥ ೧ ॥

ಅಥ ಯದಾಸ್ಯ ವಾಂಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ
ತೇಜಃ ಪರಸ್ಯಾಂ ದೇವತಾಯಾಮಥ ನ ಜಾನಾತಿ ॥ ೨ ॥

ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯಂ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್
ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥

॥ ಇತಿ ಪಂಚದಶಃ ಖಂಡಃ ॥

( ೧ ) ' ಸೋಮ್ಯನೇ, ರೋಗದಿಂದ ಪೀಡಿತನಾದ ( ಆಸನ್ನಮರಣ ) ಪುರುಷನ ಸುತ್ತಲು ಅವನ ಜ್ಞಾತಿಬಾಂಧವರು ಕೂಡುವರು, ಮತ್ತು ' ನನ್ನ ಗುರ್ತು ಇದೆಯೊ, ನನ್ನ ಗುರ್ತು ಇದೆಯೊ ' ಎಂದು ಕೇಳುವರು. ಅವನ ವಾಣಿಯು ಮನಸಿನಲ್ಲಿ, ಮನಸು ಪ್ರಾಣದಲ್ಲಿ, ಪ್ರಾಣವು ತೇಜದಲ್ಲಿ, ತೇಜವು ಪರದೇವತೆಯಲ್ಲಿ ಲೀನವಾಗುವವರೆಗೆ ಅವನು ಅವರನ್ನು ಗುರುತಿಸುವನು.

( ೨ ) ಅವನ ವಾಣಿಯು ಮನದಲ್ಲಿ, ಮನವು ಪ್ರಾಣದಲ್ಲಿ, ಪ್ರಾಣವು ತೇಜದಲ್ಲಿ, ತೇಜವು ಪರದೇವತೆಯಲ್ಲಿ ಲೀನವಾಯಿತೆಂದರೆ ಅವನು ಯಾರನ್ನೂ ಗುರುತಿಸುವದಿಲ್ಲ.

( ೩ ) ಅದು ಅತ್ಮಂತ ಸೂಕ್ಷ್ಮವು. ಇದೆಲ್ಲವೂ ಆತ್ಮಮಯವು. ಅದು

ಸತ್ಯವು, ಅದು ಆತ್ಮವು. ಶ್ವೇತಕೇತುವೇ ನೀನು ಅದೇ ಇರುವಿ' ಇದನ್ನು ಕೇಳಿ, 'ಭಗವನ್, ನನಗೆ ಇನ್ನೂ ಜ್ಞಾನವನ್ನು ಹೇಳಬೇಕು,' ಎಂದು ಮಗನು ಅಂದನು. 'ಒಳ್ಳೇದು ಮಗನೇ.' ಎಂದು ತಂದೆಯು ಒಪ್ಪಿಕೊಂಡನು.

೧೫ ನೆಯ ಖಂಡವು ಸಮಾಪ್ತವು

ಪುರುಷꣳ ಸೋಮ್ಯೋತ ಹಸ್ತಗೃಹೀತಮಾನಯಂತ್ಯಪಹಾರ್ಷೀತ್ಸ್ತೇಯಮಕಾರ್ಷೀತ್ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽನೃತೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ ॥ ೧ ॥

ಅಥ ಯದಿ ತಸ್ಯಾಃ ಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ ॥ ೨ ॥

(೧) 'ಸೋಮ್ಯನೇ, ಕೈಕಟ್ಟಿ ಪುರಷನನ್ನು ತರುವರು, ಇವನು ಧನಾಪಹಾರ ಮಾಡಿರುವನು, ಕಳವು ಮಾಡಿರುವನು. ಕೊಡಲಿಯನ್ನು ಕಾಸಿರಿ ಎಂದು ಅನ್ನುವರು. ಅವನು ಆ ಕಳವು ಮಾಡಿದ್ದರೆ, ಮತ್ತು (ನಾನು ಮಾಡಿಲ್ಲವೆಂದು) ಸುಳ್ಳು ಹೇಳಿದರೆ ಅವನು ತನ್ನನ್ನೆ ಸುಳ್ಳು ಮಾಡುವನು. ಅವನು ಸುಳ್ಳಿನಿಂದ ಆವೃತನಾಗಿ, ತಾನು ಸುಳ್ಳಿನ ನಡುವೆ ನಿಂತು ಕಾಸಿದ ಕೊಡಲಿಯನ್ನು (ತಪ್ತ ಪರಶು) ಹಿಡಿಯುವನು. ಅವನ ಕೈ ಸುಡುವದು. (ಹೀಗೆ ಅವನು ಕಳ್ಳನೆಂಬುದು ಸಿದ್ಧವಾದುದರಿಂದ) ಅವನು ಕೊಲ್ಲಲ್ಪಡುವನು.

(೨) ಅವನು ಅದನ್ನು (ಕಳವನ್ನು) ಮಾಡದೆ ಇದ್ದದ್ದಾರೆ (ನಾನು ಮಾಡಿಲ್ಲ ಎಂದು ನಿಜ ಹೇಳಿ) ತಾನು ಸತ್ಯ ಎಂದು ಸಿದ್ಧಮಾಡುವನು. ಸತ್ಯದಿಂದ ಆವೃತನಾಗಿ, ಸತ್ಯದ ನಡುವೆ ನಿಂತು, ಕಾಸಿದ ಕೊಡಲಿಯನ್ನು ಹಿಡಿಯುವನು. ಅವನ ಕೈ ಸುಡದೆ ಹೋಗುವದು. ಅವನನ್ನು ಬಿಟ್ಟು ಬಿಡುವರು.

ಸ ಯಥಾ ತತ್ರ ನಾದಾಹ್ಯೇತೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ॥ ೩ ॥

॥ ಇತಿ ಷೋಡಶಃ ಖಂಡಃ ॥

ಇತಿ ಷಷ್ಠಃ ಪ್ರಪಾಠಕಃ

( ೩ ) ಆವನು ( ಸತ್ಯವಂತನು ) ಅಲ್ಲಿ ಸುಡದೆ ಇರುವಂತೆ ( ಸತ್ಯವನ್ನರಿತವನು ದುಃಖದಿಂದ ಅಲಿಪ್ತನಿರುವನು. ) ಇದೆಲ್ಲವೂ ಆತ್ಮಮಯವು. ಅದು ಸತ್ಯವು. ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ' ಹೀಗೆ ತಂದೆಯು ಹೇಳಿದ್ದು ಅವನಿಗೆ (ಮಗನಿಗೆ) ತಿಳಿಯಿತು, ಪೂರಾ ತಿಳಿಯಿತು.

೧೬ ನೆಯ ಖಂಡವು ಸಮಾಪ್ತವು

೬ನೆಯ ಅಧ್ಯಾಯವು ಸಮಾಪ್ತವು

# ೭ ನೆಯ ಅಧ್ಯಾಯದ ಸಾರಾಂಶವು

ಆರನೆಯ ಅಧ್ಯಾಯದಲ್ಲಿದ್ದಂತೆ ಈ ಅಧ್ಯಾಯದಲ್ಲಿಯೂ ಒಂದೇ ವಿಷಯವು ಇರುವದು. ನಿರಾಲಂಬ ಆತ್ಮನ ಜ್ಞಾನ, ಆತ್ಮನ ಸಾಕ್ಷಾತ್ಕಾರವಾಯಿತೆಂದರೆ ಮನುಷ್ಯನು ಶೋಕಾತೀತನಾಗುವನು; ದುಃಖ ಮೃತ್ಯು ರೋಗ ಇವುಗಳಾಚೆಗೆ ಹೋಗುವನು, ಎಂದು ಉಪನಿಷತ್ಕಾರರು ಮೇಲಿಂದ ಮೇಲೆ ಹೇಳಿದ್ದಾರೆ. ಮಿಕ್ಕ ಜ್ಞಾನವು ನಮಗೆ ಬೇರೆ ಬೇರೆ ಫಲಗಳನ್ನು ಕೊಡಬಹುದು, ಆದರೆ ಆತ್ಯಂತಿಕ ನಿತ್ಯಾನಂದ ಸ್ಥಿತಿಯನ್ನು ನಮಗೆ ಪ್ರಾಪ್ತಮಾಡಿ ಕೊಡಲಾರದು. ಈ ಎರಡು ಮಾತುಗಳನ್ನು ಈ ಅಧ್ಯಾಯದಲ್ಲಿ ಉಪನಿಷತ್ಕಾರರು ಒತ್ತಿ ಒತ್ತಿ ಹೇಳಿರುವರು.

ಮೊದಲು ನಾರದನು ಜ್ಞಾನಿಯಾದ ಸನತ್ಕುಮಾರನ ಬಳಿಗೆ ಹೋಗಿ ಜ್ಞಾನ-ಭಿಕ್ಷೆಯನ್ನು ಬೇಡುವನು. ಆಗ ನಿನಗೆ ಗೊತ್ತಿದ್ದುದನ್ನು ಮೊದಲು ಹೇಳು, ಅಂದರೆ ಮುಂದಿನ ಜ್ಞಾನವನ್ನು ಹೇಳುವೆನು, ಎಂದು ಸನತ್ಕುಮಾರನು ಅನ್ನುವನು. ಆಗ ನಾರದನು ತನಗೆ ವೇದವೇದಾಂಗ, ವಿವಿಧ ಶಾಸ್ತ್ರಮುಂತಾದವುಗಳ ಜ್ಞಾನವಿರುವದು, ಆದರೆ ಆತ್ಮಜ್ಞಾನವಿಲ್ಲದ್ದರಿಂದ ತಾನು ಶೋಕಾಕುಲನಿರುವನು, ಎಂದು ಹೇಳುವನು. ಆಗ ಸನತ್ಕುಮಾರನು, ಇದೆಲ್ಲ ನಾಮದ ಜ್ಞಾನವಾಯಿತು, ಇದಕ್ಕೂ ಹೆಚ್ಚಿನದು ವಾಣಿಯು ಎಂದು ಹೇಳಿ ಅದರ ಜ್ಞಾನವಿದ್ದವನು ವಾಣಿಯ ಸೀಮೆ ಇದ್ದಮಟ್ಟಿಗೆ ಅದರಲ್ಲಿ ಜ್ಞಾನ ಪಡೆಯಲು ಸಮರ್ಥನಾಗುವನು, ಎಂದು ಎರಡನೆಯ ಖಂಡದಲ್ಲಿ ಹೇಳುವನು. ಮುಂದೆ ೩-೧೫ ಖಂಡದ ವರೆಗೆ ಕ್ರಮವಾಗಿ ಮನಸು, ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ, ನೀರು, ತೇಜ, ಆಕಾಶ, ಸ್ಮರಣ, ಆಶೆ, ಪ್ರಾಣ ಇವು ಉತ್ತರೋತ್ತರ ಹೆಚ್ಚಿನವು, ಎಂದು ಹೇಳಿ ಸನತ್ಕುಮಾರನು ಅವುಗಳ ಜ್ಞಾನವಿದ್ದವನು ಆಯಾ ಶಕ್ತಿಗಳ ಸೀಮೆಯಲ್ಲಿ ಪೂರ್ಣ ಸಮರ್ಥನಾಗುವನು, ಎಂದು ಜ್ಞಾನ-ಫಲವನ್ನು ಹೇಳುವನು.

ಇನ್ನು ಪ್ರಾಣವೆ ಹೆಚ್ಚಿನದೆಂದು ಹೇಳಿದ ಬಳಿಕ ಸನತ್ಕುಮಾರನು ೧೬ನೆಯ ಖಂಡದಲ್ಲಿ ಸತ್ಯಜ್ಞಾನದ ಮಹತಿಯನ್ನು ಹೊಗಳುವನು. ಆ ಮೇಲೆ ೧೭ ನೆಯ ಖಂಡದಲ್ಲಿ, ಸತ್ಯಜ್ಞಾನವು ವಿಜ್ಞಾನದಿಂದ ಆಗುವದು, ಎಂದು ಹೇಳುವನು. ಬಳಿಕ ೧೮ ನೆಯ ಖಂಡದಿಂದ ೨೨ ನೆಯದರ ವರೆಗೆ ಮನನವಿದ್ದರೆ ವಿಜ್ಞಾನವಾಗುವದು, ಶ್ರದ್ಧೆಯಿದ್ದರೆ ಮನನವಾಗುವದು, ನಿಷ್ಠೆ ಇದ್ದರೆ ಶ್ರದ್ಧೆಯುಂಟಾಗುವದು, ಕರ್ಮ ಮಾಡಿದರೆ ನಿಷ್ಠೆಯುಂಟಾಗುವದು, ಸುಖವು ದೊರೆಯುವಂತೆ ಇದ್ದರೆ ಮನುಷ್ಯನು ಕರ್ಮ ಮಾಡುವನು, ಎಂದು ಪ್ರತಿಪಾದನೆ ಇರುವದು.

ಹಾಗಾದರೆ ಸುಖವೆಂಬುದು ಎಲ್ಲಿ ಇರುವದು, ಅದು ಯಾತರಿಂದ ಪ್ರಾಪ್ತವಾಗಲ್ಲದು, ಎಂಬದು ನಾರದನು ಕೇಳುವನು. ಅದಕ್ಕೆ ಉತ್ತರ ಕೊಡುವಾಗ ೨೩-೨೫ ಈ

ಮೂರು ಖಂಡಗಳಲ್ಲಿ ಸುಖವು ಅನಂತದಲ್ಲಿದೆ, ಅಲ್ಪವಿದ್ದರೆ ಸುಖವು ಉಂಟಾಗದು, ಅದಕ್ಕೆ "ಭೂಮಾ" ಎನ್ನುವರು, ಎಂದು ಸನತ್ಕುಮಾರನು ಹೇಳಿರುವನು. ಆ ಭೂಮಾ ಎಂಬುದು ಸ್ವಾವಲಂಬಿಯು ಅಥವಾ ನಿರಾವಲಂಬಿಯು ಇರುವದು ಎಂದು ಹೇಳಬಹುದು. ಅದು ಯಾವದೇ ಸಂಪತ್ತನ್ನವಲಂಬಿಸಿಲ್ಲ. ಯಾವದೇ ಬಾಹ್ಯ ವಸ್ತುಗಳನ್ನವಲಂಬಿಸಿಲ್ಲ, ಅತ್ಯಂತ ತುಷ್ಟ ಅಂತರಾತ್ಮನೆ ಆ ಭೂಮಾ ಎಂಬುದರ ಆಶ್ರಯಸ್ಥಾನವು.

೨೬ನೆಯ ಖಂಡದಲ್ಲಿ ಆ ಭೂಮಾ ಅಥವಾ ಆ ಆತ್ಮನ ಆದೇಶವು ಹೇಳಲ್ಪಟ್ಟಿದೆ. ಅದು ಸರ್ವವ್ಯಾಪಿ ಇರುವದು, ಎಲ್ಲೆಲ್ಲಿಯೂ ಅದೇ ಇರುವದು, ಅದರಿಂದಲೆ ಎಲ್ಲವೂ ಹುಟ್ಟಿರುವದು. ಇದನ್ನರಿತವನು, ನಾನೇ ಎಲ್ಲೆಲ್ಲಿಯೂ ಇರುವೆನು, ಅಥವಾ ಆತ್ಮನೆ ಎಲ್ಲೆಲ್ಲಿಯೂ ಇರುವನು, ಎಂಬ ಆತ್ಮಸಾಕ್ಷಾತ್ಕಾರದಿಂದ ಸದೈವ ಸಂತುಷ್ಟನಿರುವನು. ಅದೇ ಆತ್ಮಸ್ಥಿತಿಯು, ಆಪ್ತಕಾಮ ಅಥವಾ ಅಕಾಮ ಅಥವಾ ನಿಷ್ಕಾಮ ಸ್ಥಿತಿಯು, ಅರ್ಥಾತ್ ಅತ್ಯಂತ ಸುಖಸ್ಥಿತಿಯು. ಆ ಸ್ಥಿತಿಯೊಳಗೆ ಸ್ಥಿರನಾದವನಿಗೆ ಜರಾ ಮೃತ್ಯು ಮುಂತಾದವುಗಳು ತೊಂದರೆ ಕೊಡಲರಿಯವು.

## ಅಥ ಸಪ್ತಮೋಽಧ್ಯಾಯಃ

ಓಂ॥ ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಸ್ತꣳ
ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ
ವಕ್ಷ್ಯಾಮೀತಿ ॥ ೧ ॥

ಸ ಹೋವಾಚರ್ಗ್ವೇದಂ ಭಗವೋಽಧ್ಯೇಮಿ ಯಜುರ್ವೇದꣳ ಸಾಮ-
ವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ
ವೇದಾನಾಂ ವೇದಂ ಪಿತ್ರ್ಯꣳ ರಾಶಿಂ ದೈವಂ ನಿಧಿಂ ವಾಕೋವಾಕ್ಯ-
ಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರ-
ವಿದ್ಯಾಂ ನಕ್ಷತ್ರವಿದ್ಯಾꣳ ಸರ್ಪದೇವಜನವಿದ್ಯಾಮೇತದ್ಭಗವೋಽಧ್ಯೇಮಿ ॥ ೨ ॥

(೧) 'ಭಗವನ್, ನನಗೆ ಜ್ಞಾನವನ್ನು ಉಪದೇಶಿಸಿರಿ,' ಎಂದು ನಾರದನು ಸನತ್ಕುಮಾರನ ಬಳಿಗೆ ಬಂದನು. ಸನತ್ಕುಮಾರನು ಅಂದದ್ದು. 'ನಿನಗೆ ಈಗ ಗೊತ್ತಿದ್ದುದನ್ನು ನನಗೆ ಹೇಳು. ನಾನು ಅದಕ್ಕೂ ಮುಂದೆ ನಿನಗೆ ಜ್ಞಾನವನ್ನು ಹೇಳುವೆನು.' ನಾರದನು ಅಂದದ್ದು,

(೨) 'ಭಗವನ್, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ

ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಗ್ಂ ಹ್ಯೇವ
ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ
ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತ್ವಿತಿ
ತಂ ಹೋವಾಚ ಯದ್ವೈ ಕಿಂಚೈತದಧ್ಯಗೀಷ್ಠಾ ನಾಮೈವೈತತ್ ॥ ೩ ॥

ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದ ಆಥರ್ವಣಶ್ಚತುರ್ಥ
ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಪಿತ್ರ್ಯೋ
ರಾಶಿರ್ದೈವೋ ನಿಧಿರ್ವಾಕೋವಾಕ್ಯಮೇಕಾಯನಂ ದೇವವಿದ್ಯಾ
ಬ್ರಹ್ಮವಿದ್ಯಾ ಭೂತವಿದ್ಯಾ ಕ್ಷತ್ರವಿದ್ಯಾ ನಕ್ಷತ್ರವಿದ್ಯಾ ಸರ್ಪದೇವ-
ಜನವಿದ್ಯಾ ನಾಮೈವೈತನ್ನಾಮೋಪಾಸ್ಸ್ವೇತಿ ॥ ೪ ॥

ವೇದ, ಐದನೆಯ ವೇದವೆನಿಸುವ ಇತಿಹಾಸ ಪುರಾಣ, ವೇದಗಳ ವೇದವಾದ ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ದೈವಜ್ಞಾನ, ( ಉತ್ಪಾತಜ್ಞಾನ, ಶಕುನ-ಶಾಸ್ತ್ರ, ) ನಿಧಿಶಾಸ್ತ್ರ ( ಕಾಲಶಾಸ್ತ್ರ ), ತರ್ಕ, ನೀತಿಶಾಸ್ತ್ರ, ನಿರುಕ್ತ, ಬ್ರಹ್ಮ-ವಿದ್ಯೆ, ( ಶಿಕ್ಷಾಕಲ್ಪಾದಿ ವೇದಾಂಗ ), ಭೂತತಂತ್ರ ( ಪಂಚಭೂತಾದಿ ), ಧನುರ್ವೇದ, ಜ್ಯೋತಿಷ, ಗಾರುಡ, ದೇವಜನವಿದ್ಯೆ ( ನೃತ್ಯಗೀತಾದಿ ಲಲಿತ ಕಲೆಗಳು ) ಈ ಮುಂತಾದ ವಿದ್ಯೆಗಳನ್ನು ನಾನು ಬಲ್ಲೆನು.

( ೩ ) ಭಗವನ್, ನಾನು ಮಂತ್ರಜ್ಞಾನಿಯು ಮಾತ್ರ, ನಾನು ಆತ್ಮ ಜ್ಞಾನಿಯಲ್ಲ, ಆದರೆ ಆತ್ಮಜ್ಞಾನವಿಲ್ಲದವನು ದುಃಖಾತೀತನಾಗಲಾರನು, ಎಂಬ ಮಾತನ್ನು ನಾನು ನಿಮ್ಮಂಥವರ ಕಡೆಯಿಂದ ಕೇಳಿರುವೆನು, ನಾನು ಆತ್ಮಜ್ಞಾನಿಯಲ್ಲದ್ದರಿಂದ ಶೋಕಾಕುಲನಿರುವೆನು. ಆದುದರಿಂದ ನೀವು ನನ್ನನ್ನು ಶೋಕದಾಚೆಗೆ ಒಯ್ಯಬೇಕು' ಇದನ್ನು ಕೇಳಿ ಸನತ್ಕುಮಾರನು ಅಂದದ್ದು, ' ನೀನು ಅಭ್ಯಸಿಸಿದ್ದೆಲ್ಲ ನಾಮವು ( ವ್ಯಕ್ತಸೃಷ್ಟಿಯ ಜ್ಞಾನವು ).

( ೪ ) ಋಗ್ವೇದ, ಯಜುರ್ವೇದ, ಸಾಮವೇದ, ಆಥರ್ವಣ, ಪಂಚಮ ವೇದವಾದ ಇತಿಹಾಸ ಪುರಾಣ, ವೇದಗಳ ವೇದವಾದ ವ್ಯಾಕರಣ, ಶ್ರಾದ್ಧ ಕಲ್ಪ, ಗಣಿತ, ದೈವಜ್ಞಾನ, ನಿಧಿಶಾಸ್ತ್ರ, ತರ್ಕ, ನೀತಿಶಾಸ್ತ್ರ, ನಿರುಕ್ತ, ಬ್ರಹ್ಮವಿದ್ಯೆ, ಭೂತತಂತ್ರ, ಧನುರ್ವೇದ, ಜ್ಯೋತಿಷ, ಗಾರುಡ, ದೇವಜನ ವಿದ್ಯೆ, ಇವೆಲ್ಲ ನಾಮವು. ಈ ನಾಮದ ಉಪಾಸನೆ ಮಾಡು.

ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ನಾಮ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ನಾಮ್ನೋ ಭೂಯ ಇತಿ ನಾಮ್ನೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ || ೫ ||

|| ಇತಿ ಪ್ರಥಮಃ ಖಂಡಃ ||

( ೫ ) ಈ ನಾಮವು ಬ್ರಹ್ಮವೆಂದು ಉಪಾಸಿಸುವವನು ನಾಮದ ವಿಷಯದಲ್ಲಿ ( ನಾಮದ ಸೀಮೆಯಲ್ಲಿ ) ಯಥೇಷ್ಟ ಜ್ಞಾನಪಡೆದು ಅವುಗಳಲ್ಲಿ ವಿಹಾರ ಮಾಡಬಲ್ಲನು. ( ಪೂರ್ಣ ಫಲವನ್ನು ಪಡೆಯುವನು ) ' 'ಭಗವನ್, ನಾಮಕ್ಕಿಂತ ಹೆಚ್ಚಿನ ಜ್ಞಾನವು ಇರುವುದೊ?' ಎಂದು ನಾರದನು ಕೇಳಿದನು, 'ಅಹುದು. ಅದಕ್ಕೂ ಹೆಚ್ಚಿನ ಸತ್ಯವು ಇರುವದು,' ಎಂದು ಸನತ್ಕುಮಾರನು ನುಡಿದನು. 'ಅದನ್ನು ನನಗೆ ಹೇಳಬೇಕು, ಭಗವನ್' ಎಂದು ನಾರದನು ಬೇಡಿಕೊಂಡನು.

೧ ನೆಯ ಖಂಡವು ಸಮಾಪ್ತವು

ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪಯತಿ ಯಜುರ್ವೇದꣳ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯꣳ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾꣳ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ ದೇವಾꣳಶ್ಚ ಮನುಷ್ಯಾꣳಶ್ಚ ಪಶೂꣳಶ್ಚ ವಯಾꣳಸಿ ಚ ತೃಣವನಸ್ಪತೀಂಛ್ವಾಪದಾನ್ಯಾಕೀಟಪತಂಗಪಿಪೀಲಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚ ಯದ್ವೈ ವಾಂಗ್ನಾಭವಿಷ್ಯನ್ನ ಧರ್ಮೋ ನಾಧರ್ಮೋ ವ್ಯಜ್ಞಾಪಯಿಷ್ಯನ್ನ ಸತ್ಯಂ ನಾನೃತಂ ನ ಸಾಧು ನಾಸಾಧು ನ ಹೃದಯಜ್ಞೋ ನಾಹೃದಯಜ್ಞೋ ವಾಗೇವೈತತ್ಸರ್ವಂ ವಿಜ್ಞಾಪಯತಿ ವಾಚಮುಪಾಸ್ಸ್ವೇತಿ || ೧ ||

( ೧ ) ವಾಣಿಯು ನಾಮಕ್ಕಿಂತ ಹೆಚ್ಚಿನದು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಪಂಚಮವೇದವೆನಿಸಿದ ಇತಿಹಾಸ ಪುರಾಣ, ವೇದಗಳ ವೇದವಾದ ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ದೈವಜ್ಞಾನ, ನಿಧಿಶಾಸ್ತ್ರ, ತರ್ಕ, ನೀತಿಶಾಸ್ತ್ರ, ನಿರುಕ್ತ, ಬ್ರಹ್ಮವಿದ್ಯೆ, ಭೂತತಂತ್ರ, ಧನುರ್ವೇದ, ಜ್ಯೋತಿಷ, ಗಾರುಡ, ದೇವಜನವಿದ್ಯೆ, ದ್ಯುಲೋಕ ಮತ್ತು ಪೃಥಿವಿ

ಸ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ಯಾವದ್ವಾಚೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಾಚೋ ಭೂಯ ಇತಿ ವಾಚೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ದ್ವಿತೀಯಃ ಖಂಡಃ ॥

ವಾಯು ಮತ್ತು ಆಕಾಶ, ನೀರು ಮತ್ತು ತೇಜ, ದೇವತೆಗಳು ಮತ್ತು ಮನುಷ್ಯರು, ಪಶುಗಳು ಮತ್ತು ಪಕ್ಷಿಗಳು, ಹುಲ್ಲುಗಳು ಮತ್ತು ಗಿಡಗಳು, ಕೀಟಗಳು, ಜಿಟ್ಟೆ ಮತ್ತು ಇರಿವೆ ಮೊದಲು ಮಾಡಿ ಎಲ್ಲ ಶ್ವಾಪದಗಳು, ಧರ್ಮ ಮತ್ತು ಅಧರ್ಮ, ಸತ್ಯ ಮತ್ತು ಅಸತ್ಯ, ಒಳಿತು ಮತ್ತು ಕೆಡಕು, ಪ್ರಿಯ ಮತ್ತು ಅಪ್ರಿಯ, ಇವುಗಳನ್ನು ವಾಣಿಯು ತಿಳಿಸಬಲ್ಲದು. ವಾಣಿಯು ಇಲ್ಲದಿದ್ದರೆ ಧರ್ಮ ಅಧರ್ಮ, ಸತ್ಯ ಅಸತ್ಯ, ಒಳಿತು ಕೆಡಕು, ಪ್ರಿಯ ಅಪ್ರಿಯ, ಇವುಗಳನ್ನು ತಿಳಿಸಲಿಕ್ಕೆ ಬರುತಿರಲಿಲ್ಲ. ವಾಣಿಯೆ ಇವೆಲ್ಲವುಗಳನ್ನು ತಿಳಿಸುವದು, ವಾಣಿಯನ್ನು ಉಪಾಸಿಸು.

( ೨ ) ವಾಣಿಯು ಬ್ರಹ್ಮವೆಂದು ಉಪಾಸಿಸುವವನು ವಾಣಿಯ ವಿಷಯದಲ್ಲಿ ವಾಣಿಯ ಸೀಮೆಯ ಮಟ್ಟಿಗೆ ಯಥೇಷ್ಟವಾಗಿ ಜ್ಞಾನಪಡೆದು ವಿಹರಿಸ ಬಲ್ಲನು' ಇದನ್ನು ಕೇಳಿ 'ವಾಣಿಗಿಂತಲೂ ಹೆಚ್ಚಿನ ಜ್ಞಾನವು ಇರುವುದೊ,' ಎಂದು ನಾರದನು ಕೇಳಿದನು. 'ಅಹುದು ಇರುವದು' ಎಂದು ಸನತ್ಕುಮಾರನು ಉತ್ತರ ಕೊಟ್ಟನು. 'ಅದನ್ನು ನನಗೆ ಹೇಳಬೇಕು ಭಗವನ್,' ಎಂದು ನಾರದನು ಹೇಳಿಕೊಂಡನು.

೨ ನೆಯ ಖಂಡವು ಸಮಾಪ್ತವು

ಮನೋ ವಾವ ವಾಚೋ ಭೂಯೋ ಯಥಾ ವೈ ದ್ವೇ ವಾಮಲಕೇ ದ್ವೇ ವಾ ಕೋಲೇ ದ್ವೌ ವಾಕ್ಷೌ ಮುಷ್ಟಿರನುಭವತ್ಯೇವಂ ವಾಚಂ ಚ ನಾಮ ಚ ಮನೋಽನುಭವತಿ ಸ ಯದಾ ಮನಸಾ ಮನಸ್ಯತಿ ಮಂತ್ರಾನಧೀಯೀಯೇತ್ಯಥಾಧೀತೇ ಕರ್ಮಾಣಿ ಕುರ್ವೀತೇತ್ಯಥ ಕುರುತೇ ಪುತ್ರಾಂಶ್ಚ ಪಶೂಂಶ್ಚೇಚ್ಛೇಯೇತ್ಯಥೇಚ್ಛತ ಇಮಂ ಚ ಲೋಕಮಮುಂ ಚೇಚ್ಛೇಯೇತ್ಯಥೇಚ್ಛತೇ ಮನೋ ಹ್ಯಾತ್ಮಾ ಮನೋ ಹಿ ಲೋಕೋ ಮನೋ ಹಿ ಬ್ರಹ್ಮ ಮನ ಉಪಾಸ್ಸ್ವೇತಿ ॥ ೧ ॥

( ೧ ) ಮನಸು ವಾಣಿಗಿಂತ ಹೆಚ್ಚಿನದು. ಎರಡು ನೆಲ್ಲೀಕಾಯಿ, ಎರಡು

ಸ ಯೋ ಮನೋ ಬ್ರಹ್ಮೇತ್ಯುಪಾಸ್ತೇ ಯಾವನ್ಮನಸೋ ಗತಂ ತತ್ರಾಸ್ಯ
ಯಥಾ ಕಾಮಚಾರೋ ಭವತಿ ಯೋ ಮನೋ ಬ್ರಹ್ಮೇತ್ಯುಪಾಸ್ತೇಽಸ್ತಿ
ಭಗವೋ ಮನಸೋ ಭೂಯ ಇತಿ ಮನಸೋ ವಾವ ಭೂಯೋಽಸ್ತೀತಿ
ತನ್ಮೇ ಭಗವಾನ್ಬ್ರವೀತ್ವಿತಿ || ೨ ||

|| ಇತಿ ತೃತೀಯಃ ಖಂಡಃ ||

ಬಾರೀಕಾಯಿ, ಎರಡು ಕೇರು ಹಣ್ಣು ಒಂದೇ ಮುಷ್ಟಿಯಲ್ಲಿ ಹಿಡಿಸುವಂತೆ ಮನಸಿನಲ್ಲಿ ನಾಮ ಮತ್ತು ವಾಣಿಗಳು ಅಂತರ್ಭೂತವಾಗಿರುವವು. ಮಂತ್ರಗಳನ್ನು ಅನ್ನಬೇಕು, ಎಂದು ಮನುಷ್ಯನು ಮನಸಿನಿಂದ ಯಾವಾಗ ಇಚ್ಛಿಸುವನೊ ಆಗ ಅವನು ಮಂತ್ರಗಳನ್ನು ಅನ್ನುವನು, ಕರ್ಮಗಳನ್ನು ಮಾಡಬೇಕೆಂದು ಯಾವಾಗ ಸಂಕಲ್ಪಿಸುವನೊ ಆಗ ಕರ್ಮ ಮಾಡುವನು, ಪುತ್ರ ಪಶುಗಳನ್ನು ಯಾವಾಗ ಇಚ್ಛಿಸಬೇಕೆನ್ನುವನೊ ಆಗ ಅವುಗಳನ್ನು ಇಚ್ಛಿಸುವನು. ಈ ಲೋಕ ಮತ್ತು ಆ ( ಪರ ) ಲೋಕ ಇವುಗಳನ್ನು ಯಾವಾಗ ಇಚ್ಛಿಸಬೇಕೆನ್ನುವನೊ ಆಗ ಅವುಗಳನ್ನು ಇಚ್ಛಿಸುವನು. ಮನವೇ ಆತ್ಮವು, ಮನವೇ ಲೋಕವು, ಮನವೇ ಬ್ರಹ್ಮವು, ಮನಸ್ಸಿನ ಉಪಾಸನೆ ಮಾಡು.

( ೨ ) ಮನಸ್ಸು ಬ್ರಹ್ಮವೆಂದು ಉಪಾಸಿಸುವವನು ಮನಸ್ಸಿನ ವಿಷಯದಲ್ಲಿ ಯಥೇಷ್ಟ ವಿಹಾರಮಾಡಬಲ್ಲನು.' ' ಭಗವನ್, ಮನಸ್ಸಿಗಿಂತಲೂ ಹೆಚ್ಚಿನದು ಏನಾದರೂ ಇರುವದೊ, ' ಎಂದು ನಾರದನು ಕೇಳಿದನು. ' ಆಹುದು ಇರುವದು ' ಎಂದು ಸನತ್ಕುಮಾರನು ಹೇಳಿದನು. ' ನನಗೆ ತಾವು ಅದನ್ನು ಹೇಳಬೇಕು, ' ಎಂದು ನಾರದನು ಬೇಡಿಕೊಂಡನು.

೩ ನೆಯ ಖಂಡವು ಸಮಾಪ್ತವು

ಸಂಕಲ್ಪೋ ವಾವ ಮನಸೋ ಭೂಯಾನ್ಯದಾ ವೈ ಸಂಕಲ್ಪಯತೇಽಥ
ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮಂತ್ರಾ
ಏಕಂ ಭವಂತಿ ಮಂತ್ರೇಷು ಕರ್ಮಾಣಿ || ೧ ||

( ೧ ) ಸಂಕಲ್ಪವೆಂಬುದು ಮನಸಿಗಿಂತ ಹೆಚ್ಚಿನದು. ಮನುಷ್ಯನು ಸಂಕಲ್ಪಿಸಿದಾಗ ಮನಸಿನಿಂದ ಇಚ್ಛಿಸುವನು, ವಾಣಿಗೆ ಪ್ರೇರಣೆ ಮಾಡುವನು, ವಾಣಿಯನ್ನು ನಾಮದಲ್ಲಿ ಪ್ರೇರಿಸುವನು. ನಾಮದಲ್ಲಿ ಮಂತ್ರಗಳು, ಮಂತ್ರಗಳಲ್ಲಿ ಕರ್ಮಗಳು ಸೇರಿಕೊಂಡಿರುವವು.

ತಾನಿ ಹ ವಾ ಏತಾನಿ ಸಂಕಲ್ಪೈಕಾಯನಾನಿ ಸಂಕಲ್ಪಾತ್ಮಕಾನಿ ಸಂಕಲ್ಪೇ ಪ್ರತಿಷ್ಠಿತಾನಿ ಸಮಕ್ಲೃಪತಾಂ ದ್ಯಾವಾಪೃಥಿವೀ ಸಮಕಲ್ಪೇತಾಂ ವಾಯುಶ್ಚಾಕಾಶಂ ಚ ಸಮಕಲ್ಪಂತಾಮಾಪಶ್ಚ ತೇಜಶ್ಚ ತೇಷಾಂ ಸಂಕ್ಲೃಪ್ತ್ಯೈ ವರ್ಷಂ ಸಂಕಲ್ಪತೇ ವರ್ಷಸ್ಯ ಸಂಕ್ಲೃಪ್ತ್ಯಾ ಅನ್ನಂ ಸಂಕಲ್ಪತೇಽನ್ನಸ್ಯ ಸಂಕ್ಲೃಪ್ತ್ಯೈ ಪ್ರಾಣಾಃ ಸಂಕಲ್ಪಂತೇ ಪ್ರಾಣಾನಾಂ ಸಂಕ್ಲೃಪ್ತ್ಯೈ ಮಂತ್ರಾಃ ಸಂಕಲ್ಪಂತೇ ಮಂತ್ರಾಣಾಂ ಸಂಕ್ಲೃಪ್ತ್ಯೈ ಕರ್ಮಾಣಿ ಸಂಕಲ್ಪಂತೇ ಕರ್ಮಣಾಂ ಸಂಕ್ಲೃಪ್ತ್ಯೈ ಲೋಕಃ ಸಂಕಲ್ಪತೇ ಲೋಕಸ್ಯ ಸಂಕ್ಲೃಪ್ತ್ಯೈ ಸರ್ವಂ ಸಂಕಲ್ಪತೇ ಸ ಏಷ ಸಂಕಲ್ಪಃ ಸಂಕಲ್ಪಮುಪಾಸ್ಸ್ವೇತಿ ॥ ೨ ॥

ಸ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ ಕ್ಲೃಪ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವತ್ಸಂಕಲ್ಪಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸಂಕಲ್ಪಾದ್ಭೂಯ ಇತಿ ಸಂಕಲ್ಪಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೩ ॥

॥ ಇತಿ ಚತುರ್ಥಃ ಖಂಡಃ ॥

( ೨ ) ಅವು ( ನಾಮಾದಿಗಳು ) ಸಂಕಲ್ಪವೆ ಕೊನೆಯ ಆಶ್ರಯಸ್ಥಾನವಾದವುಗಳು, ಅವು ಸಂಕಲ್ಪಾತ್ಮಕವಾದವುಗಳು, ಸಂಕಲ್ಪದ ಆಧಾರದಿಂದ ಇದ್ದವುಗಳು. ದ್ಯಾವಾಪೃಥಿವಿಗಳು, ವಾಯು ಆಕಾಶಗಳು, ಅಪ್ಪು ತೇಜಗಳು ಸಂಕಲ್ಪ ಮಾಡುವವು. ಅವುಗಳ ಸಂಕಲ್ಪದ ಮೂಲಕ ಅನ್ನವು ಸಂಕಲ್ಪಿಸುವದು ( ಹುಟ್ಟುವದು ). ಅನ್ನದ ಸಂಕಲ್ಪದ ಮೂಲಕ ಪ್ರಾಣಗಳು ಸಂಕಲ್ಪಿಸುವವು. ಪ್ರಾಣಗಳ ಸಂಕಲ್ಪದ ಮೂಲಕ ಮಂತ್ರಗಳು ಸಂಕಲ್ಪಿಸುವವು, ಮಂತ್ರಗಳ ಸಂಕಲ್ಪದ ಮೂಲಕ ಲೋಕಗಳು ( ಆಯಾ ಕರ್ಮದ ಫಲ ) ಸಂಕಲ್ಪಿಸುವವು ( ಪ್ರಾಪ್ತವಾಗುವವು ). ಲೋಕಗಳ ಸಂಕಲ್ಪದ ಮೂಲಕ ಎಲ್ಲವೂ ಸಂಕಲ್ಪಿಸುವದು ( ಆಗುವದು ). ಅದೇ ಸಂಕಲ್ಪವೆಂಬುದು, ಸಂಕಲ್ಪದ ಉಪಾಸನೆ ಮಾಡು.

( ೩ ) ಸಂಕಲ್ಪವು ಬ್ರಹ್ಮವೆಂದು ಉಪಾಸಿಸುವವನು ನಿರ್ಮಿಸಲ್ಪಟ್ಟ ಧ್ರುವಲೋಕಗಳಿಗೆ ತಾನು ಧ್ರುವನಾಗಿ, ಪ್ರತಿಷ್ಠಿತ ಲೋಕಗಳಿಗೆ ತಾನು ಪ್ರತಿಷ್ಠಿತನಾಗಿ ವ್ಯಥಾರಹಿತ ಲೋಕಗಳಿಗೆ ತಾನು ವ್ಯಥಾರಹಿತನಾಗಿ

ಹೋಗುವನು. ಸಂಕಲ್ಪವು ಬ್ರಹ್ಮವೆಂದು ಉಪಾಸಿಸುವವನು, ಸಂಕಲ್ಪದ ವಿಷಯಗಳಲ್ಲಿ ಯಥೇಷ್ಟವಾಗಿ ವಿಹರಿಸುವನು.' 'ಸಂಕಲ್ಪಕ್ಕಿಂತ ಹೆಚ್ಚಿನ ದೇನಾದರೂ ಇರುವದೊ' ಎಂದು ನಾರದನು ಕೇಳಿದನು. 'ಅಹುದು ಇರುವದು' ಎಂದು ಸನತ್ಕುಮಾರನು ಅನ್ನಲು 'ಅದನ್ನು ನನಗೆ ತಾವು ಹೇಳಬೇಕು,' ಎಂದು ನಾರದನು ಕೇಳಿಕೊಂಡನು.

೪ ನೆಯ ಖಂಡವು ಸಮಾಪ್ತವು

ಚಿತ್ತಂ ವಾವ ಸಂಕಲ್ಪಾದ್ಭೂಯೋ ಯದಾ ವೈ ಚೇತಯತೇಽಥ ಸಂಕಲ್ಪತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯ-ತಿ ನಾಮ್ನಿ ಮಂತ್ರಾ ಏಕಂ ಭವಂತಿ ಮಂತ್ರೇಷು ಕರ್ಮಾಣಿ ॥ ೧ ॥

ತಾನಿ ಹ ವಾ ಏತಾನಿ ಚಿತ್ತೈಕಾಯನಾನಿ ಚಿತ್ತಾತ್ಮಾನಿ ಚಿತ್ತೇ ಪ್ರತಿಷ್ಠಿತಾನಿ ತಸ್ಮಾದ್ಯದ್ಯಪಿ ಬಹುವಿದಚಿತ್ತೋ ಭವತಿ ನಾಯಮಸ್ತೀತ್ಯೇವೈನ-ಮಾಹುರ್ಯದಯಂ ವೇದ ಯದ್ವಾ ಅಯಂ ವಿದ್ವಾನ್ನೇತ್ಥಮಚಿತ್ತಃ ಸ್ಯಾದಿತ್ಯಥ ಯದ್ಯಲ್ಪವಿಚ್ಚಿತ್ತವಾನ್ಭವತಿ ತಸ್ಮಾ ಏವೋತ ಶುಶ್ರೂಷಂತೇ ಚಿತ್ತಂ ಹ್ಯೇವೈಷಾಮೇಕಾಯನಂ ಚಿತ್ತಮಾತ್ಮಾ ಚಿತ್ತಂ ಪ್ರತಿಷ್ಠಾ ಚಿತ್ತಮುಪಾಸ್ಸ್ವೇತಿ ॥ ೨ ॥

(೧) 'ಚಿತ್ತವು ಸಂಕಲ್ಪಕ್ಕಿಂತ ಹೆಚ್ಚಿನದು. ಮನುಷ್ಯನು ಸಚಿತ್ತನಿರು-ವಾಗಲೆ ಸಂಕಲ್ಪಮಾಡುವನು, ಇಚ್ಛಿಸುವನು, ವಾಗಿಂದ್ರಿಯವನ್ನು ಪ್ರೇರಿಸುವನು, ವಾಣಿಯನ್ನು ನಾಮದಲ್ಲಿ ಪ್ರೇರಿಸುವನು. ನಾಮದಲ್ಲಿ ಮಂತ್ರಗಳು ಒಂದಾಗುವವು, ಮಂತ್ರಗಳಲ್ಲಿ ಕರ್ಮಗಳು ಒಂದಾಗುವವು.

(೨) ಅವು (ನಾಮಾದಿ) ಎಲ್ಲ ಚಿತ್ತವೆ ಕೊನೆಯ ಆಶ್ರಯವುಳ್ಳವುಗಳು, ಚಿತ್ತವೆ ಅವುಗಳ ಆತ್ಮವು, ಅವು ಚಿತ್ತದಲ್ಲಿ ಪ್ರತಿಷ್ಠಿತವಿರುವವು. ಆದುದರಿಂದ ಬಹಳ ಅರಿತವನು ಸಹ ಅಚಿತ್ತನಾದನೆಂದರೆ (ಏಕಾಗ್ರತೆ ಇಲ್ಲವಾದರೆ) ಅವನು ಅರಿತವನಿರುವನೆಂದು ಯಾರೂ ಅನ್ನುವದಿಲ್ಲ. ಇವನು ಬಲ್ಲವನಿದ್ದರೆ, ಇವನು ವಿದ್ವಾಂಸನಿದ್ದರೆ ಇವನು ಹೀಗೆ ಅಚಿತ್ತನಿರುತಿರಲಿಲ್ಲ, ಎಂದು ಅನ್ನುವರು. ಸ್ವಲ್ಪ ಅರಿತವನು ಸಹ ಸಚಿತ್ತನಿದ್ದರೆ ಜನರು ಅವನ ಮಾತನ್ನೆ ಕೇಳಲಿಚ್ಛಿಸುವರು. ಆದುದರಿಂದ ಚಿತ್ತವೆ ಎಲ್ಲವುಗಳ ಕೊನೆಯ ಆಶ್ರಯವು, ಆತ್ಮವು, ಆಧಾರವು, ಚಿತ್ತವನ್ನುಪಾಸಿಸು.

ಸ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇ ಚಿತ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವಚ್ಚಿತ್ತಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಶ್ಚಿತ್ತಾದ್ಭೂಯ ಇತಿ ಚಿತ್ತಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೩ ॥

॥ ಇತಿ ಪಂಚಮಃ ಖಂಡಃ ॥

( ೩ ) ಚಿತ್ತವು ಬ್ರಹ್ಮವೆಂದು ಉಪಾಸಿಸುವವನು ತಾನು ಧ್ರುವನಾಗಿ ಚಿತ್ತವಾನ್ ಧ್ರುವಲೋಕಗಳಿಗೆ, ತಾನು ಪ್ರತಿಷ್ಠಿತನಾಗಿ ಪ್ರತಿಷ್ಠಾವಾನ್ ಲೋಕಗಳಿಗೆ, ತಾನು ವ್ಯಥಾರಹಿತನಾಗಿ ವ್ಯಥಾರಹಿತ ಲೋಕಗಳಿಗೆ ಹೋಗುವನು. ಚಿತ್ತವು ಬ್ರಹ್ಮವೆಂದುಪಾಸಿಸುವವನು ಚಿತ್ತದ ವಿಷಯಗಳಲ್ಲಿ ಯಥೇಷ್ಟನಾಗಿ ವಿಹಾರಮಾಡುವಂಥವನಾಗುವನು '' ಭಗವನ್, ಚಿತ್ತಕ್ಕಿಂತ ಹೆಚ್ಚಿನದೇನಾದರೂ ಇರುವದೋ, ? ' ಎಂದು ನಾರದನು ಕೇಳಿದನು. ' ಅಹುದು ಇರುವದು ' ಎಂದು ಸನತ್ಕುಮಾರನು ಹೇಳಿದನು. ' ಅದನ್ನು ನನಗೆ ತಾವು ಹೇಳಬೇಕು ' ಎಂದು ನಾರದನು ಬೇಡಿಕೊಂಡನು.

೫ ನೆಯ ಖಂಡವು ಸಮಾಪ್ತವು

ಧ್ಯಾನಂ ವಾವ ಚಿತ್ತಾದ್ಭೂಯೋ ಧ್ಯಾಯತೀವ ಪೃಥಿವೀ ಧ್ಯಾಯತೀವಾಂತರಿಕ್ಷಂ ಧ್ಯಾಯತೀವ ದ್ಯೌರ್ಧ್ಯಾಯಂತೀವಾಪೋ ಧ್ಯಾಯಂತೀವ ಪರ್ವತಾ ಧ್ಯಾಯಂತೀವ ದೇವಮನುಷ್ಯಾಸ್ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವಂತಿ ಧ್ಯಾನಾಪಾದಾಂಶಾ ಇವೈವ ತೇ ಭವಂತ್ಯಥ ಯೇಽಲ್ಪಾಃ ಕಲಹಿನಃ ಪಿಶುನಾ ಉಪವಾದಿನಸ್ತೇಽಥ ಯೇ ಪ್ರಭವೋ ಧ್ಯಾನಾಪಾದಾಂಶಾ ಇವೈವ ತೇ ಭವಂತಿ ಧ್ಯಾನಮುಪಾಸ್ಸ್ವೇತಿ ॥ ೧ ॥

(೧) ' ಧ್ಯಾನವು ಚಿತ್ತಕ್ಕಿಂತ ಹೆಚ್ಚಿನದು. ಪೃಥಿವಿ, ಅಂತರಿಕ್ಷ, ದ್ಯುಲೋಕ, ನೀರುಗಳು, ಪರ್ವತ, ದೇವತೆಗಳು, ಮನುಷ್ಯರು, ಇವೆಲ್ಲ ಧ್ಯಾನ ಮಾಡುತ್ತಿರುವಂತೆಯೆ ಇರುವವು. ಆದುದರಿಂದ ಇಲ್ಲಿ ಮನುಷ್ಯರಲ್ಲಿ ಪಡೆಯತಕ್ಕ ಹೆಚ್ಚಿನ ಯೋಗ್ಯತೆಯನ್ನು ಪಡೆಯುವವರು ಧ್ಯಾನದ ಫಲಾಂಶ ದಿಂದಲೆ ಆ ಸ್ಥಿತಿಯನ್ನು ಪಡೆಯುವರು. ಮಿಕ್ಕವರ, ಕ್ಷುದ್ರರು, ಜಗಳ ಗಂಟರು, ಪರದೋಷಶೋಧಕರು, ಪರದೋಷಗಳನ್ನು ಹೇಳುವವರು,

ಸ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇ ಯಾವದ್ಧ್ಯಾನಸ್ಯ ಗತಂ ತತ್ರಾಸ್ಯ
ಯಥಾಕಾಮಚಾರೋ ಭವತಿ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ
ಭಗವೋ ಧ್ಯಾನಾದ್ಭೂಯ ಇತಿ ಧ್ಯಾನಾದ್ವಾವ ಭೂಯೋಽಸ್ತೀತಿ ತನ್ಮೇ
ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ಷಷ್ಠಃ ಖಂಡಃ ॥

ಆಗುವರು. ಪ್ರಭಾವಶಾಲಿಗಳು ಧ್ಯಾನಫಲದಿಂದಲೆ ಹಾಗೆ ಆಗುವರು. ಧ್ಯಾನದ ಉಪಾಸನೆಮಾಡು.

( ೨ ) ಧ್ಯಾನವು ಬ್ರಹ್ಮವೆಂದು ಉಪಾಸಿಸುವವನು ಧ್ಯಾನದ ವಿಷಯಗಳಲ್ಲಿ ಯಥೇಷ್ಟ ವಿಹಾರ ಮಾಡುವವನಾಗುವನು' 'ಭಗವನ್, ಧ್ಯಾನಕ್ಕಿಂತ ಹೆಚ್ಚಿನದೇನಾದರೂ ಇರುವದೊ, ' ಎಂದು ನಾರದನು ಕೇಳಿದನು. ' ಅಹುದು ಇರುವದು. ' ಎಂದು ಸನತ್ಕುಮಾರನು ಹೇಳಿದನು ' ಅದನ್ನು ನನಗೆ ಹೇಳಬೇಕು ' ಎಂದು ನಾರದನು ಅಂದನು.

೬ ನೆಯ ಖಂಡವು ಸಮಾಪ್ತವು

ವಿಜ್ಞಾನಂ ವಾವ ಧ್ಯಾನಾದ್ಭೂಯೋ ವಿಜ್ಞಾನೇನ ವಾ ಋಗ್ವೇದಂ
ವಿಜಾನಾತಿ ಯಜುರ್ವೇದꣳ ಸಾಮವೇದಮಾಥರ್ವಣಂ ಚತುರ್ಥಮಿತಿ-
ಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯꣳ ರಾಶಿಂ ದೈವಂ
ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ
ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾꣳ ಸರ್ಪದೇವಜನವಿದ್ಯಾಂ
ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ
ದೇವಾꣳಶ್ಚ ಮನುಷ್ಯಾꣳಶ್ಚ ಪಶೂꣳಶ್ಚ ವಯಾꣳಸಿ ಚ ತೃಣವನಸ್ಪತೀ-
ಞ್ಛ್ವಾಪದಾನ್ಯಾಕೀಟಪತಂಗಪಿಪೀಲಕಂ ಧರ್ಮಂ ಚಾಧರ್ಮಂ ಚ ಸತ್ಯಂ
ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ
ಚಾನ್ನಂ ಚ ರಸಂ ಚೇಮಂ ಚ ಲೋಕಮಮುಂ ಚ ವಿಜ್ಞಾನೇನೈವ
ವಿಜಾನಾತಿ ವಿಜ್ಞಾನಮುಪಾಸ್ಸ್ವೇತಿ ॥ ೧ ॥

( ೧ ) ' ವಿಜ್ಞಾನವು ( ಜ್ಞಾನವು ) ಧ್ಯಾನಕ್ಕಿಂತ ಹೆಚ್ಚಿನದು. ವಿಜ್ಞಾನದಿಂದಲೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಪಂಚಮವೇದವಾದ ಇತಿಹಾಸ ಪುರಾಣ, ವೇದಗಳ ವೇದವಾದ ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ದೈವಜ್ಞಾನ, ನಿಧಿಶಾಸ್ತ್ರ, ತರ್ಕ, ನೀತಿಶಾಸ್ತ್ರ, ನಿರುಕ್ತ, ಬ್ರಹ್ಮವಿದ್ಯೆ, ಭೂತವಿದ್ಯೆ, ಧನುರ್ವಿದ್ಯೆ, ಜ್ಯೋತಿಷ, ಗಾರುಡ, ನೃತ್ಯ

ಸ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ ವಿಜ್ಞಾನವತೋ ವೈ ಸ ಲೋಕಾನ್
ಜ್ಞಾನವತೋಽಭಿಸಿಧ್ಯತಿ ಯಾವದ್ವಿಜ್ಞಾನಸ್ಯ ಗತಂ ತತ್ರಾಸ್ಯ ಯಥಾ-
ಕಾಮಚಾರೋ ಭವತಿ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ
ಭಗವೋ ವಿಜ್ಞಾನಾದ್ಭೂಯ ಇತಿ ವಿಜ್ಞಾನಾದ್ವಾವ ಭೂಯೋಽಸ್ತೀತಿ
ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ಸಪ್ತಮಃ ಖಂಡಃ ॥

ಸಂಗೀತಾದಿ ವಿದ್ಯೆ, ದ್ಯುಲೋಕ, ಪೃಥಿವಿ, ವಾಯು ಆಕಾಶಗಳು, ಆಪ ತೇಜಗಳು, ದೇವತೆಗಳು, ಮನುಷ್ಯರು, ಪಶುಪಕ್ಷಿಗಳು, ಹುಲ್ಲು ವನಸ್ಪತಿಗಳು, ಹುಳಗಳು, ಜಿಟ್ಟೆ ಇರಿವೆಗಳು ಮೊದಲು ಮಾಡಿ ಎಲ್ಲ ಶ್ವಾಪದಗಳು, ಧರ್ಮ ಅಧರ್ಮ, ಸತ್ಯ ಅನೃತಗಳು, ಒಳಿತು ಕೆಡಕು, ಪ್ರಿಯ ಅಪ್ರಿಯ, ಅನ್ನ, ರಸ, ಈ ಲೋಕ, ಆ ಲೋಕ, ಇವೆಲ್ಲ ವಿಜ್ಞಾನದಿಂದಲೆ ತಿಳಿಯುವವು. ವಿಜ್ಞಾನವನ್ನುಪಾಸಿಸು.

(೨) ವಿಜ್ಞಾನವು ಬ್ರಹ್ಮವೆಂದುಪಾಸಿಸುವವನು ವಿಜ್ಞಾನಪೂರ್ಣ ಮತ್ತು ಜ್ಞಾನಪೂರ್ಣ ಲೋಕಗಳನ್ನು ಪಡೆಯುವನು. ವಿಜ್ಞಾನವು ಬ್ರಹ್ಮವೆಂದು ಉಪಾಸಿಸುವವನು ವಿಜ್ಞಾನದ ವಿಷಯಗಳಲ್ಲಿ ಯಥೇಷ್ಟ ಸಂಚಾರ ಮಾಡುವಂಥವನಾಗುವನು'. 'ಭಗವನ್, ವಿಜ್ಞಾನಕ್ಕಿಂತ ಹೆಚ್ಚಿನದೇನಾದರೂ ಇರುವದೊ,' ಎಂದು ನಾರದನು ಕೇಳಿದನು. 'ಆಹುದು ಇರುವದು' ಎಂದು ಸನತ್ಕುಮಾರನು ಹೇಳಲು 'ಅದನ್ನು ನನಗೆ ಹೇಳಬೇಕು' ಎಂದು ನಾರದನು ಅಂದನು.

೭ ನೆಯ ಖಂಡವು ಸಮಾಪ್ತವು

ಬಲಂ ವಾವ ವಿಜ್ಞಾನಾದ್ಭೂಯೋಽಪಿ ಹ ಶತಂ ವಿಜ್ಞಾನವತಾಮೇಕೋ
ಬಲವಾನಾಕಂಪಯತೇ ಸ ಯದಾ ಬಲೀ ಭವತ್ಯಥೋತ್ಥಾತಾ ಭವ-
ತ್ಯುತ್ತಿಷ್ಠನ್ಪರಿಚರಿತಾ ಭವತಿ ಪರಿಚರನ್ನುಪಸತ್ತಾ ಭವತ್ಯುಪಸೀ-
ದಂದ್ರಷ್ಟಾ ಭವತಿ ಶ್ರೋತಾ ಭವತಿ ಮಂತಾ ಭವತಿ ಬೋದ್ಧಾ ಭವತಿ
ಕರ್ತಾ ಭವತಿ ವಿಜ್ಞಾತಾ ಭವತಿ ಬಲೇನ ವೈ ಪೃಥಿವೀ ತಿಷ್ಠತಿ
ಬಲೇನಾಂತರಿಕ್ಷಂ ಬಲೇನ ದ್ಯೌರ್ಬಲೇನ ಪರ್ವತಾ ಬಲೇನ ದೇವ-
ಮನುಷ್ಯಾ ಬಲೇನ ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ
ಶ್ವಾಪದಾನ್ಯಾಕೀಟಪತಂಗಪಿಪೀಲಕಂ ಬಲೇನ ಲೋಕಸ್ತಿಷ್ಠತಿ ಬಲ-
ಮುಪಾಸ್ಸ್ವೇತಿ ॥ ೧ ॥

(೧) 'ಬಲವು ವಿಜ್ಞಾನಕ್ಕಿಂತ ಹೆಚ್ಚಿನದು, ಒಬ್ಬ ಬಲವಂತನು ನೂರು

ಸ ಯೋ ಬಲಂ ಬ್ರಹ್ಮೇತ್ಯುಪಾಸ್ತೇ ಯಾವದ್ಬಲಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಬಲಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಬಲಾದ್ಭೂಯ ಇತಿ ಬಲಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ‖ ೨ ‖

‖ ಇತ್ಯಷ್ಟಮಃ ಖಂಡಃ ‖

ವಿದ್ಯಾವಂತರನ್ನು ನಡುಗಿಸುವನು. ಮನುಷ್ಯನು ಬಲವುಳ್ಳವನಾದನೆಂದರೆ ಎದ್ದು ನಿಲ್ಲುವನು. (ಉದ್ಯೋಗಕ್ಕಾಗಿ ಟೊಂಕ ಕಟ್ಟುವನು, ಎಂದರ್ಥ), ಗಟ್ಟಿಯಾಗಿ ನಿಂತವನು (ಗುರುಗಳ) ಪರಿಚಯ ಮಾಡಬಲ್ಲನು, ಪರಿಚಯ ಮಾಡುವವನು (ಗುರುಗಳ) ಬಳಿಗೆ ಹೋಗುವನು, ಬಳಿಗೆ ಹೋಗುವವನು ದ್ರಷ್ಟಾ (ಜ್ಞಾನವನ್ನರಿತುಕೊಳ್ಳುವವನು) ಆಗುವನು, ಶ್ರೋತಾ (ಜ್ಞಾನ ಕೇಳುವವನು) ಆಗುವನು, ವಿಚಾರ ಮಾಡುವವನಾಗುವನು, ಬುದ್ಧಿಯುಳ್ಳವನಾಗುವನು, ಕರ್ಮಗಳನ್ನು ಮಾಡಲು ಸಮರ್ಥನಾಗುವನು, ವಿಜ್ಞಾನವಾನ್ ಆಗುವನು, ಪೃಥಿವಿ, ಅಂತರಿಕ್ಷ, ದ್ಯುಲೋಕ, ಪರ್ವತಗಳು, ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಹಾಲು, ವನಸ್ಪತಿಗಳು, ಹುಳ, ಜಿಟ್ಟೆ, ಇರಿವೆಗಳು ಮೊದಲು ಮಾಡಿ ಎಲ್ಲ ಶ್ವಾಪದಗಳು, ಲೋಕಗಳು, ಇವೆಲ್ಲ ಬಲದ ಮೂಲಕ ನಿಂತಿರುವವು. ಬಲವನ್ನು ಉಪಾಸಿಸು.

(೨) ಬಲವು ಬ್ರಹ್ಮವೆಂದು ಉಪಾಸಿಸುವವನು ಬಲದ ವಿಷಯಗಳಲ್ಲಿ ಯಥೇಷ್ಟ ವಿಹಾರ ಮಾಡುವಂಥವನಾಗುವನು' 'ಭಗವನ್ ಬಲಕ್ಕಿಂತ ಹೆಚ್ಚಿನದೇನಾದರೂ ಇರುವದೊ' ಎಂದು ನಾರದನು ಕೇಳಿದನು. 'ಅಹುದು ಇರುವದು' ಎಂದು ಸನತ್ಕುಮಾರನು ಅಂದನು. 'ಅದನ್ನು ನನಗೆ ನೀವು ಹೇಳಬೇಕು,' ಎಂದು ನಾರದನು ಕೇಳಿಕೊಂಡನು.

೮ ನೆಯ ಖಂಡವು ಸಮಾಪ್ತವು

ಅನ್ನಂ ವಾವ ಬಲಾದ್ಭೂಯಸ್ತಸ್ಮಾದ್ಯದ್ಯಪಿ ದಶರಾತ್ರೀರ್ನಾಶ್ನೀಯಾದ್ಯದ್ಯುಹ ಜೀವೇದಥವಾಽದ್ರಷ್ಟಾಽಶ್ರೋತಾಽಮಂತಾಽಬೋದ್ಧಾಽಕರ್ತಾಽವಿಜ್ಞಾತಾ ಭವತ್ಯಥಾನ್ನಸ್ಯಾಯೈ ದ್ರಷ್ಟಾ ಭವತಿ ಶ್ರೋತಾ ಭವತಿ ಮಂತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತ್ಯನ್ನಮುಪಾಸ್ಸ್ವೇತಿ ‖ ೧ ‖

(೧) 'ಅನ್ನವು ಬಲಕ್ಕಿಂತ ಹೆಚ್ಚಿನದು. ಆದುದರಿಂದ ಹತ್ತು ದಿನ

ಸ ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽನ್ನವತೋ ವೈ ಸ ಲೋಕಾನ್ಪಾನವತೋಽ-
ಭಿಸಿದ್ಧ್ಯತಿ ಯಾವದನ್ನಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ
ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽನ್ನಾದ್ಭೂಯ ಇತ್ಯನ್ನಾ-
ದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ನವಮಃ ಖಂಡಃ ॥

ಯಾವನಾದರೂ ಅನ್ನ ಬಿಟ್ಟರೆ ಅವನು ಸಾಯುವನು. ಬದುಕಿದರೂ ಅವನು ನೋಡಲು, ಕೇಳಲು, ವಿಚಾರಿಸಲು, ಬುದ್ಧಿಯನ್ನುಪಯೋಗಿಸಲು, ಕರ್ಮಮಾಡಲು, ತಿಳಿದುಕೊಳ್ಳಲು ಅಸಮರ್ಥನಾಗುವನು. ಅನ್ನವು ಪ್ರಾಪ್ತವಾಯಿತೆಂದರೆ ನೋಡಬಲ್ಲನು, ಕೇಳಬಲ್ಲನು, ವಿಚಾರಿಸಬಲ್ಲನು, ಬುದ್ಧಿಯ ಉಪಯೋಗ ಮಾಡಬಲ್ಲನು, ಕರ್ಮ ಮಾಡಬಲ್ಲನು, ವಿಜ್ಞಾನ-ವುಳ್ಳವನಾಗುವನು, ಅನ್ನವನ್ನುಪಾಸಿಸು.

( ೨ ) ಅನ್ನವು ಬ್ರಹ್ಮವೆಂದುಪಾಸಿಸುವವನು ಅನ್ನ ನೀರುಗಳುಳ್ಳ ಲೋಕಗಳನ್ನು ಪಡೆಯುವನು. ಅನ್ನವು ಬ್ರಹ್ಮವೆಂದುಪಾಸಿಸುವವನು ಅನ್ನದ ವಿಷಯಗಳಲ್ಲಿ ಯಥೇಷ್ಟ ವಿಹಾರಮಾಡುವಂಥವನಾಗುವನು.' 'ಭಗವನ್ ಅನ್ನಕ್ಕಿಂತ ಹೆಚ್ಚಿನದೇನಾದರೂ ಇರುವದೊ' ಎಂದು ನಾರದನು ಕೇಳಿದನು. 'ಅಹುದು ಇರುವದು,' ಎಂದು ಸನತ್ಕುಮಾರನು ನುಡಿಯಲು 'ಅದನ್ನು ನನಗೆ ಹೇಳಬೇಕು ಭಗವನ್,' ಎಂದು ನಾರದನು ಅಂದನು.

೯ ನೆಯ ಖಂಡವು ಸಮಾಪ್ತವು

ಆಪೋ ವಾವಾನ್ನಾದ್ಭೂಯಸ್ತಸ್ಮಾದ್ಯದಾ ಸುವೃಷ್ಟಿರ್ನ ಭವತಿ
ವ್ಯಾಧೀಯಂತೇ ಪ್ರಾಣಾ ಅನ್ನಂ ಕನೀಯೋ ಭವಿಷ್ಯತೀತ್ಯಥ ಯದಾ
ಸುವೃಷ್ಟಿರ್ಭವತ್ಯಾನಂದಿನಃ ಪ್ರಾಣಾ ಭವಂತ್ಯನ್ನಂ ಬಹು ಭವಿಷ್ಯ-
ತೀತ್ಯಾಪ ಏವೇಮಾ ಮೂರ್ತಾ ಯೇಯಂ ಪ್ರಥಿವೀ ಯದಂತರಿಕ್ಷಂ
ಯದ್ ದ್ಯೌರ್ಯತ್ಪರ್ವತಾ ಯದ್ದೇವಮನುಷ್ಯಾ ಯತ್ಪಶವಶ್ಚ
ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟಪತಂಗ
ಪಿಪೀಲಕಮಾಪ ಏವೇಮಾ ಮೂರ್ತಾ ಅಪ ಉಪಾಸ್ಸ್ವೇತಿ ॥ ೧ ॥

( ೧ ) 'ನೀರು ಅನ್ನಕ್ಕಿಂತ ಹೆಚ್ಚಿನದು. ಆದುದರಿಂದ ಮಳೆಯು ಕಡಿಮೆಯಾಯಿತೆಂದರೆ, ಇನ್ನು ಅನ್ನವು ಕಡಿಮೆಯಾಗುವದು, ಎಂದು ಪ್ರಾಣಿಗಳು

ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ಕಾಮಾಂಸ್ತೃಪ್ತಿ-
ಮಾನ್ಭವತಿ ಯಾವದಪಾಂ ಗತಂ ತತ್ರಾಸ್ಯ ಯಥಾ ಕಾಮಚಾರೋ
ಭವತಿ ಯೋಽಪೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽದ್ಭ್ಯೋ
ಇತ್ಯದ್ಭ್ಯೋ ವಾ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ದಶಮಃ ಖಂಡಃ ॥

ದುಃಖಬಡುವವು. ಮಳೆಯು ಚನ್ನಾಗಿ ಆಯಿತೆಂದರೆ ಇನ್ನು ಅನ್ನವು ಹೇರಳ ವಾಗುವದು, ಎಂದು ಪ್ರಾಣಿಗಳು ಆನಂದಿಸುವವು. ಈ ಮೂರ್ತ (ರೂಪವುಳ್ಳ) ವಸ್ತುಗಳಲ್ಲಿ ಆಪವೆ (ನೀರೆ) ಇರುವದು, ಇವು ಆಪಮೂಲಕವೆ ಇರುವವು. ಈ ಪೃಥಿವಿ, ಅಂತರಿಕ್ಷ, ದ್ಯುಲೋಕ, ಪರ್ವತಗಳು, ದೇವತೆಗಳು, ಮನುಷ್ಯರು, ಪಶುಪಕ್ಷಿಗಳು, ಹುಲ್ಲು ವನಸ್ಪತಿಗಳು, ಕೀಟ, ಜಿಟ್ಟೆ, ಇರುವೆ ಮೊದಲು ಮಾಡಿಕೊಂಡು ಎಲ್ಲ ಶ್ವಾಪದಗಳು, ಈ ಮೂರ್ತ ವಸ್ತುಗಳೆಲ್ಲ ಆಪವೆ ಇರುವವು. ಆಪದ ಉಪಾಸನೆ ಮಾಡು.

(೨) ಆಪವು ಬ್ರಹ್ಮವೆಂದು ಉಪಾಸಿಸುವನು ಎಲ್ಲ ಕಾಮನೆಗಳನ್ನು ಪಡೆಯುವನು, ಪೂರ್ಣ ತೃಪ್ತನಾಗುವನು. ಆಪವು ಬ್ರಹ್ಮವೆಂದುಪಾಸಿಸುವವನು ಆಪದ ವಿಷಯಗಳಲ್ಲಿ ಯಥೇಷ್ಟ ವಿಹಾರಮಾಡುವವನಾಗುವನು' 'ಭಗವನ್, ಇದಕ್ಕೂ ಹೆಚ್ಚಿನದೇನಾದರೂ ಇರುವದೊ' ಎಂದು ನಾರದನು ಕೇಳಿದನು. 'ಅಹುದು ಇರುವದು.' ಎಂದು ಸನತ್ಕುಮಾರನು ಹೇಳಿದನು. 'ಅದನ್ನು ನೀವು ನನಗೆ ಹೇಳಬೇಕು' ಎಂದು ನಾರದನು ಬೇಡಿಕೊಂಡನು.

೧೦ ನೆಯ ಖಂಡವು ಸಮಾಪ್ತವು

ತೇಜೋ ವಾವಾದ್ಭ್ಯೋ ಭೂಯಸ್ತದ್ವಾ ಏತದ್ವಾಯುಮಾಗೃಹ್ಯಾಕಾಶ-
ಮಭಿತಪತಿ ತದಾಹುರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ
ತೇಜ ಏವ ತತ್ಪೂರ್ವಂ ದರ್ಶಯಿತ್ವಾಽಥಾಪಃ ಸೃಜತೇ ತದೇತ-
ದೂರ್ಧ್ವಾಭಿಶ್ಚ ತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರಂತಿ ತಸ್ಮಾ-
ದಾಹುರ್ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ ಇತಿ ತೇಜ ಏವ
ತತ್ಪೂರ್ವಂ ದರ್ಶಯಿತ್ವಾಽಥಾಪಃ ಸೃಜತೇ ತೇಜ ಉಪಾಸ್ಸ್ವೇತಿ ॥ ೧ ॥

(೧) 'ತೇಜವು ನೀರಿಗಿಂತ ಹೆಚ್ಚಿನದು. ಆ ತೇಜವು ವಾಯುವನ್ನು ಗ್ರಹಿಸಿ (ನಿಶ್ಚಲಮಾಡಿ) ಆಕಾಶವನ್ನು ವ್ಯಾಪಿಸಿ ಕಾಯಿಸಿತೆಂದರೆ ಶಕೆ

ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ ತೇಜಸ್ವೀ ವೈ ಸ ತೇಜಸ್ವತೋ ಲೋಕಾನ್ಭಾಸ್ವತೋಽಪಹತತಮಸ್ಕಾನಭಿಸಿದ್ಧ್ಯತಿ ಯಾವತ್ತೇಜಸೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಸ್ತೇಜಸೋ ಭೂಯ ಇತಿ ತೇಜಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತ್ಯೇಕಾದಶಃ ಖಂಡಃ ॥

ಆಗುವದು. ಉಷ್ಣತೆಯು ಹೆಚ್ಚಿರುವದು, ಮಳೆಯಾಗುವದು ಎಂದು ಜನರು ಅನ್ನುವರು. ತೇಜವು ಮೊದಲು ವೃಗ್ಭೋಜರವಾಗಿ ನೀರನ್ನು ಹುಟ್ಟಿಸುವದು. ಊರ್ಧ್ವಗಾಮಿ ಮತ್ತು ತಿರ್ಯಕ್‌ಗಾಮಿ ಮಿಂಚಿನೊಡನೆ ಗಡಗಡಾಟವು ಸುಳಿದಾಡುವದು. ಆದುದರಿಂದ ಮಿಂಚುವದು, ಗಡಗಡಿಸುವದು, ಮಳೆಯಾಗುವದು ಎಂದು ಅನ್ನುವರು. ಹೀಗೆ ತೇಜವೆ ಮೊದಲು ವೈದೋರಿ ನೀರನ್ನು ನಿರ್ಮಿಸುವದು, ತೇಜವನ್ನು ಉಪಾಸಿಸು.

( ೨ ) ತೇಜವು ಬ್ರಹ್ಮವೆಂದುಪಾಸಿಸುವವನು ತೇಜಸ್ವಿಯಾಗಿ ತೇಜಸ್ವಿ ಲೋಕಗಳಿಗೆ, ಪ್ರಕಾಶಮಾನನಾಗಿ, ತಮೋರಹಿತ ಲೋಕಗಳಿಗೆ ಹೋಗುವನು, ತೇಜವು ಬ್ರಹ್ಮವೆಂದುಪಾಸಿಸುವವನು ತೇಜದ ವಿಷಯಗಳಲ್ಲಿ ಯಥೇಷ್ಟ ವಿಹಾರ ಮಾಡುವಂಥವನಾಗುವನು' 'ಭಗವನ್, ತೇಜಕ್ಕಿಂತ ಹೆಚ್ಚಿನದೇನಾದರೂ ಇರುವದೊ,' ಎಂದು ನಾರದನು ಕೇಳಿದನು. 'ಅಹುದು ಇರುವದು,' ಎಂದು ಸನತ್ಕುಮಾರನು ಹೇಳಲು, 'ಅದನ್ನು ನೀವು ನನಗೆ ಹೇಳಬೇಕು' ಎಂದು ನಾರದನು ಪ್ರಾರ್ಥಿಸಿದನು.

೧೧ ನೆಯ ಖಂಡವು ಸಮಾಪ್ತವು

ಆಕಾಶೋ ವಾವ ತೇಜಸೋ ಭೂಯಾನಾಕಾಶೇ ವೈ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣ್ಯಗ್ನಿರಾಕಾಶೇನಾಹ್ವಯತ್ಯಾಕಾಶೇನ ಶೃಣೋತ್ಯಾಕಾಶೇನ ಪ್ರತಿಶೃಣೋತ್ಯಾಕಾಶೇ ರಮತ ಆಕಾಶೇನ ರಮತ ಆಕಾಶೇ ಜಾಯತ ಆಕಾಶಮಭಿಜಾಯತ ಆಕಾಶಮುಪಾಸ್ಸ್ವೇತಿ ॥ ೧ ॥

( ೧ ) 'ಆಕಾಶವು ತೇಜಕ್ಕಿಂತ ಹೆಚ್ಚಿನದು, ಆಕಾಶದಲ್ಲಿಯೆ ಚಂದ್ರ. ಸೂರ್ಯರು, ವಿದ್ಯುತ್ತು, ನಕ್ಷತ್ರಗಳು, ಅಗ್ನಿ ಮುಂತಾದವು ಇರುವವು. ಮನುಷ್ಯನು ಆಕಾಶದ ಸಹಾಯದಿಂದಲೆ ಕರೆಯಬಲ್ಲನು, ಕೇಳಬಲ್ಲನು,

ಸ ಯ ಆಕಾಶಂ ಬ್ರಹ್ಮೇತ್ಯುಪಾಸ್ತ ಆಕಾಶವತೋ ವೈ ಸ ಲೋಕಾನ್ಪ್ರಕಾಶ-
ವತೋಽಸಂಬಾಧಾನುರುಗಾಯ ವತೋಽಭಿಸಿಧ್ಯತಿ ಯಾವದಾಕಾಶಸ್ಯ
ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯ ಆಕಾಶಂ
ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಕಾಶಾದ್ಭೂಯ ಇತ್ಯಾಕಾಶಾದ್ವಾವ
ಭೂಯೋಽಸ್ತೀತಿ ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ದ್ವಾದಶಃ ಖಂಡಃ ॥

ತಿರುಗಿ ಮಾತಾಡಿದ್ದನ್ನು ಕೇಳಬಲ್ಲನು, ಆಕಾಶದಲ್ಲಿಯೇ (ಮನುಷ್ಯನು) ಕ್ರೀಡೆ ಮಾಡುವನು ಹಾಗೂ ಕ್ರೀಡೆ ಮಾಡದಿರುವನು. ಆಕಾಶದಲ್ಲಿಯೇ ಹುಟ್ಟುವನು, ಅಂಕುರವು ಆಕಾಶದ ಕಡೆಗೆಯೆ ನೋಡುತ್ತ ಹುಟ್ಟುವದು. ಆಕಾಶದ ಉಪಾಸನೆ ಮಾಡು.

(೨) ಆಕಾಶವು ಬ್ರಹ್ಮವೆಂದು ಉಪಾಸಿಸುವವನು ಆಕಾಶವಾನ್, ಪ್ರಕಾಶವಾನ್ ಬಾಧೆಯಿಲ್ಲದ ವಿಸ್ತೀರ್ಣ ಲೋಕಗಳಿಗೆ ಹೋಗುವನು. ಆಕಾಶದ ವಿಷಯಗಳಲ್ಲಿ ಯಥೇಷ್ಟ ವಿಹಾರಮಾಡುವಂಥವನಾಗುವನು.' 'ಭಗವನ್, ಇದಕ್ಕೂ ಹೆಚ್ಚಿನದೇನಾದರೂ ಇರುವದೊ?' ಎಂದು ನಾರದನು ಕೇಳಿದನು. "ಅಹುದು ಇರುವದು," ಎಂದು ಸನತ್ಕುಮಾರನು ಹೇಳಿದನು. 'ಅದನ್ನು ನನಗೆ ತಾವು ಹೇಳಬೇಕು,' ಎಂದು ನಾರದನು ಬೇಡಿಕೊಂಡನು.

೧೨ ನೆಯ ಖಂಡವು ಸಮಾಪ್ತವು

ಸ್ಮರೋ ವಾವಾಕಾಶಾದ್ಭೂಯಸ್ತಸ್ಮಾದ್ಯದ್ಯಪಿ ಬಹವ ಆಸೀರನ್ನಸ್ಮರಂತೋ
ನೈವ ತೇ ಕಂಚನ ಶೃಣುಯುರ್ನ ಮನ್ವೀರನ್ನ ವಿಜಾನೀರನ್ ಯದಾ
ವಾವ ತೇ ಸ್ಮರೇಯುರಥ ಶೃಣುಯುರಥ ಮನ್ವೀರನ್ನಥ ವಿಜಾನೀರನ್
ಸ್ಮರೇಣ ವೈ ಪುತ್ರಾನ್ವಿಜಾನಾತಿ ಸ್ಮರೇಣ ಪಶೂನ್ ಸ್ಮರಮುಪಾಸ್ವೇತಿ ॥ ೧ ॥

(೧) 'ಸ್ಮರಣಶಕ್ತಿಯು ಆಕಾಶಕ್ಕಿಂತ ಹೆಚ್ಚಿನದು. ಆದುದರಿಂದ ಬಹಳ ಜನರಿದ್ದರೂ ಅವರು ಸ್ಮರಿಸದಿದ್ದರೆ, ಅವರು ಏನೂ ಕೇಳಲಾರರು, ವಿಚಾರಿಸಲಾರರು, ತಿಳಿದುಕೊಳ್ಳಲಾರರು. ಅವರು ಸ್ಮರಿಸಲಾರಂಭಿಸಿದರೆಂದರೆ ಪುನಃ ಕೇಳಬಲ್ಲರು, ವಿಚಾರಿಸಬಲ್ಲರು, ತಿಳಿದುಕೊಳ್ಳಬಲ್ಲರು. ಸ್ಮರಣದಿಂದಲೆ ಮನುಷ್ಯನು ಮಗನನ್ನು ಗುರುತಿಸುವನು, ಪಶುಗಳನ್ನು ಗುರುತಿಸುವನು, ಸ್ಮರಣಶಕ್ತಿಯನ್ನು ಉಪಾಸಿಸು.

ಸ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇ ಯಾವತ್ಸ್ಮರಸ್ಯ ಗತಂ ತತ್ರಾಸ್ಯ ಯಥಾ-
ಕಾಮಚಾರೋ ಭವತಿ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ
ಸ್ಮರಾದ್ಭೂಯ ಇತಿ ಸ್ಮರಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾ-
ನ್ಬ್ರವೀತ್ವಿತಿ ॥ ೨ ॥

॥ ಇತಿ ತ್ರಯೋದಶಃ ಖಂಡಃ ॥

( ೨ ) ಸ್ಮರಣವು ಬ್ರಹ್ಮವೆಂದು ಉಪಾಸಿಸುವವನು ಸ್ಮರಣಶಕ್ತಿಯ ವಿಷಯಗಳಲ್ಲಿ ಯಥೇಷ್ಟ ವಿಹಾರಮಾಡುವಂಥವನಾಗುವನು.' 'ಭಗವನ್, ಸ್ಮರಣಕ್ಕಿಂತ ಹೆಚ್ಚಿನದೇನಾದರೂ ಇರುವದೊ' ಎಂದು ನಾರದನು ಕೇಳಿದನು 'ಅಹುದು ಇರುವದು.' ಎಂದು ಸನತ್ಕುಮಾರನು ಹೇಳಲು, 'ಅದನ್ನು ತಾವು ನನಗೆ ಹೇಳಬೇಕು,' ಎಂದು ನಾರದನು ಅಂದನು.

೧೩ ನೆಯ ಖಂಡವು ಸಮಾಪ್ತವು

ಆಶಾ ವಾವ ಸ್ಮರಾದ್ಭೂಯಸ್ಯಾಶೇದ್ಧೋ ವೈ ಸ್ಮರೋ ಮಂತ್ರಾನಧೀತೇ
ಕರ್ಮಾಣಿ ಕುರುತೇ ಪುತ್ರಾಂಶ್ಚ ಪಶೂಂಶ್ಚೇಚ್ಛತ ಇಮಂ ಚ ಲೋಕ-
ಮಮುಂ ಚೇಚ್ಛತ ಆಶಾಮುಪಾಸ್ವೇತಿ ॥ ೧ ॥

ಸ ಯ ಆಶಾಂ ಬ್ರಹ್ಮೇತ್ಯುಪಾಸ್ತ ಆಶಯಾಸ್ಯ ಸರ್ವೇ ಕಾಮಾಃ ಸಮೃಧ್ಯಂ-
ತ್ಯಮೋಘಾ ಹಾಸ್ಯಾಶಿಷೋ ಭವಂತಿ ಯಾವದಾಶಾಯಾ ಗತಂ ತತ್ರಾಸ್ಯ
ಯಥಾಕಾಮಚಾರೋ ಭವತಿ ಯ ಆಶಾಂ ಬ್ರಹ್ಮೇತ್ಯುಪಾಸ್ತೇಽಸ್ತಿ
ಭಗವ ಆಶಾಯಾ ಭೂಯ ಇತ್ಯಾಶಾಯಾ ವಾವ ಭೂಯೋಽಸ್ತೀತಿ
ತನ್ಮೇ ಭಗವಾನ್ಬ್ರವೀತ್ವಿತಿ ॥ ೨ ॥

॥ ಇತಿ ಚತುರ್ದಶಃ ಖಂಡಃ ॥

( ೧ ) 'ಆಶೆಯು ಸ್ಮರಣಕ್ಕಿಂತ ಹೆಚ್ಚಿನದು. ಆಶೆಯಿಂದ ಪ್ರೇರಿತವಾದ ಸ್ಮರಣಶಕ್ತಿಯು ಮಂತ್ರಗಳನ್ನು ಅಭ್ಯಸಿಸುವದು, ಕರ್ಮಗಳನ್ನು ಮಾಡುವದು, ಪುತ್ರಪಶುಗಳನ್ನು ಇಚ್ಛಿಸುವದು, ಇಹಪರಲೋಕಗಳನ್ನು ಇಚ್ಛಿಸುವದು. ಆಶೆಯನ್ನು ಉಪಾಸಿಸು.

( ೨ ) ಆಶೆಯು ಬ್ರಹ್ಮವೆಂದು ಉಪಾಸಿಸುವವನ ಎಲ್ಲ ಕಾಮನೆಗಳು ಆ ಆಶೆಯ ಬಲದಿಂದಲೆ ಸಮೃದ್ಧವಾಗುವವು ( ಪೂರೈಸುವವು ), ಅವನ ಪ್ರಾರ್ಥನೆಗಳೆಲ್ಲ ಸಫಲವಾಗುವವು. ಆಶೆಯು ಬ್ರಹ್ಮವೆಂದು ಉಪಾಸಿಸು-ವವನು ಆಶೆಯ ವಿಷಯಗಳಲ್ಲಿ ಯಥೇಷ್ಟ ವಿಹಾರಮಾಡುವವನಾಗುವನು.'

' ಭಗವನ್ ಆಶೆಗಿಂತ ಹೆಚ್ಚಿನದೇನಾದರೂ ಇರುವದೊ ' ಎಂದು ನಾರದನು ಕೇಳಿದನು. ' ಆಹುದು ಇರುವದು. ' ಎಂದು ಸನತ್ಕುಮಾರನು ಹೇಳಿದನು. ' ಅದನ್ನು ತಾವು ನನಗೆ ಹೇಳಬೇಕು ' ಎಂದು ನಾರದನು ಅಂದನು.

೧೪ ನೆಯ ಖಂಡವು ಸಮಾಪ್ತವು

ಪ್ರಾಣೋ ವಾ ಆಶಾಯಾ ಭೂಯಾನ್ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಂ ಸಮರ್ಪಿತಂ ಪ್ರಾಣಃ ಪ್ರಾಣೇನ ಯಾತಿ ಪ್ರಾಣಃ ಪ್ರಾಣಂ ದದಾತಿ ಪ್ರಾಣಾಯ ದದಾತಿ ಪ್ರಾಣೋ ಹ ಪಿತಾ ಪ್ರಾಣೋ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ ॥ ೧ ॥

ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಚಾರ್ಯಂ ವಾ ಬ್ರಾಹ್ಮಣಂ ವಾ ಕಿಂಚಿದ್ ಭೃಶಮಿವ ಪ್ರತ್ಯಾಹ ಧಿಕ್ತ್ವಾಽಸ್ತ್ವಿತ್ಯೇ-ವೈನಮಾಹುಃ ಪಿತೃಹಾ ವೈ ತ್ವಮಸಿ ಮಾತೃಹಾ ವೈ ತ್ವಮಸಿ ಭ್ರಾತೃಹಾ ವೈ ತ್ವಮಸಿ ಸ್ವಸೃಹಾ ವೈ ತ್ವಮಸ್ಯಾಚಾರ್ಯಹಾ ವೈ ತ್ವಮಸಿ ಬ್ರಾಹ್ಮಣಹಾ ವೈ ತ್ವಮಸೀತಿ ॥ ೨ ॥

ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇನ್ನೈವೈನಂ ಬ್ರೂಯುಃ ಪಿತೃಹಾಸೀತಿ ನ ಮಾತೃಹಾಸೀತಿ ನ ಭ್ರಾತೃಹಾಸೀತಿ ನ ಸ್ವಸೃಹಾಸೀತಿ ನಾಚಾರ್ಯಹಾಸೀತಿ ನ ಬ್ರಾಹ್ಮಣ-ಹಾಸೀತಿ ॥ ೩ ॥

( ೧ ) ' ಪ್ರಾಣವೆ ಆಶೆಗಿಂತ ಹೆಚ್ಚಿನದು. ಗಾಲಿಯ ಗಡ್ಡೆಯಲ್ಲಿ ಅದರ ಹಲ್ಲುಗಳೆಲ್ಲ ಸಿಕ್ಕಿರುವಂತೆ ಈ ಪ್ರಾಣದಲ್ಲಿ ಎಲ್ಲವೂ ಸಮರ್ಪಿತವಿರುವದು. ಪ್ರಾಣವು ಪ್ರಾಣಬಲದಿಂದ ಸಾಗುವದು, ಪ್ರಾಣವು ಪ್ರಾಣವನ್ನು ಕೊಡುವದು, ಪ್ರಾಣಕ್ಕೆ ಕೊಡುವದು. ಪ್ರಾಣವೆ ತಂದೆ, ಪ್ರಾಣವೆ ತಾಯಿ, ಪ್ರಾಣವೆ ಅಣ್ಣ, ಪ್ರಾಣವೆ ಅಕ್ಕ, ಪ್ರಾಣವೆ ಆಚಾರ್ಯ, ಪ್ರಾಣವೆ ಬ್ರಾಹ್ಮಣ.

( ೨ ) ಯಾವನಾದರೂ ತಂದೆಗೆ, ತಾಯಿಗೆ, ಅಣ್ಣನಿಗೆ, ಅಕ್ಕನಿಗೆ, ಆಚಾರ್ಯನಿಗೆ, ಬ್ರಾಹ್ಮಣನಿಗೆ ಅಯೋಗ್ಯ ಉತ್ತರವನ್ನು ಕೊಟ್ಟರೆ ಎಲ್ಲರೂ ಧಿಕ್ಕಾರವಿರಲಿ, ಎಂದು ನುಡಿಯುವರು. ನೀನು ಪಿತೃಘಾತಕಿಯು, ಆಚಾರ್ಯ ಘಾತಕಿಯು, ಬ್ರಾಹ್ಮಣಘಾತಕಿಯು, ಎಂದು ಅನ್ನುವರು.

( ೩ ) ಆದರೆ ಅವರ ಪ್ರಾಣಗಳು ಹೋದಬಳಿಕ ಶೂಲದಿಂದ ತಿವಿದು,

ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ ಸ ವಾ ಏಷ ಏವಂಪಶ್ಯನ್ನೇವಂ
ಮನ್ವಾನ ಏವಂ ವಿಜಾನನ್ನತಿವಾದೀ ಭವತಿ ತಂ ಚೇದ್ಬ್ರೂಯುರತಿ-
ವಾದ್ಯಸೀತ್ಯತಿವಾದ್ಯಸ್ಮೀತಿ ಬ್ರೂಯಾನ್ನಾಪಹ್ನುವೀತ ॥ ೪ ॥

॥ ಇತಿ ಪಂಚದಶಃ ಖಂಡಃ ॥

ಒಟ್ಟುಕೂಡಿಸಿ, ಅಥವಾ ಅವರ ಒಂದೊಂದೆ ಅವಯುವಗಳನ್ನು ಸುಟ್ಟರೂ ನೀನು ಪಿತೃಘಾತಕಿಯು, ಮಾತೃಘಾತಕಿಯು, ಭ್ರಾತೃಘಾತಕಿಯು, ಸ್ವಸೃ ಘಾತಕಿಯು, ಆಚಾರ್ಯಘಾತಕಿಯು, ಬ್ರಾಹ್ಮಣಘಾತಕಿಯು ಇರುವಿ, ಎಂದು ಯಾರೂ ಅನ್ನುವದಿಲ್ಲ.

( ೪ ) ಪ್ರಾಣವೆ ಈ ಎಲ್ಲ (ಪಿತ್ರಾದಿ) ಆಗುವದು. ಅವನೇ (ಆ ಪ್ರಾಣನೆ) ಇದೆಲ್ಲ ಎಂದು ನೋಡುವವನು, ವಿಚಾರಿಸುವವನು, ತಿಳಿದುಕೊಳ್ಳುವವನು, ಅತಿವಾದಿಯಾಗುವನು ( ನಾಮಾದಿಗಳಾಚೆಗೆ ಇರುವ ಪ್ರಾಣವನ್ನು ಕುರಿತು ಮಾತಾಡುವನು ). ' ನೀನು ಅತಿವಾದಿ ಇರುವಿ, ' ಎಂದು ಜನರು ಅನ್ನುವರು. ಹೀಗೆ ಜನರು ಅಂದುದಕ್ಕೆ ' ನಾನು ಅತಿವಾದಿ ಇಲ್ಲ ' ಎಂದು ನಿರಾಕರಿಸ ಬಾರದು.

೧೫ ನೆಯ ಖಂಡವು ಸಮಾಪ್ತವು

ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ ಸೋಽಹಂ ಭಗವಃ
ಸತ್ಯೇನಾತಿವದಾನೀತಿ ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮಿತಿ ಸತ್ಯಂ
ಭಗವೋ ವಿಜಿಜ್ಞಾಸ ಇತಿ ॥ ೧ ॥

॥ ಇತಿ ಷೋಡಶಃ ಖಂಡಃ ॥

( ೧ ) ಸತ್ಯಜ್ಞಾನದ ಮೂಲಕ ಅತಿವಾದ ಮಾಡುವವನೆ ನಿಜವಾಗಿ ಅತಿವಾದ ಮಾಡುವನು (ಎಂದು ಸನತ್ಕುಮಾರನು ಹೇಳಿದನು), ' ಭಗವನ್ ನಾನು ಸತ್ಯಜ್ಞಾನವನ್ನು ಪಡೆದು ಅತಿವಾದ ಮಾಡುವವನಾಗುವೆನು, ' ಎಂದು ನಾರದನು ತನ್ನ ಇಚ್ಛೆಯನ್ನು ವ್ಯಕ್ತಮಾಡಿದನು) ಸತ್ಯವನ್ನೆ ತಿಳಿದು ಕೊಳ್ಳಲಿಚ್ಛಿಸಬೇಕು.' ಎಂದು ಸನತ್ಕುಮಾರನು ಅಂದನು. 'ಭಗವನ್, ನಾನು ಸತ್ಯವನ್ನೆ ಅರಿತುಕೊಳ್ಳಲಿಚ್ಛಿಸುವೆನು,' ಎಂದು ನಾರದನು ಹೇಳಿದನು.

೧೬ ನೆಯ ಖಂಡವು ಸಮಾಪ್ತವು

ಯದಾ ವೈ ವಿಜಾನಾತ್ಯಥ ಸತ್ಯಂ ವದತಿ ನಾವಿಜಾನನ್ ಸತ್ಯಂ ವದತಿ
ವಿಜಾನನ್ನೇವ ಸತ್ಯಂ ವದತಿ ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮಿತಿ
ವಿಜ್ಞಾನಂ ಭಗವೋ ವಿಜಿಜ್ಞಾಸ ಇತಿ ॥ ೧ ॥

॥ ಇತಿ ಸಪ್ತದಶಃ ಖಂಡಃ ॥

( ೧ ) 'ಮನುಷ್ಯನು ಅರಿತನೆಂದರೆ ಸತ್ಯವನ್ನು ಮಾತಾಡುವನು. ಅರಿಯದೆ ಇರುವವನು ಸತ್ಯವನ್ನು ಮಾತಾಡನು. ಸತ್ಯವನ್ನರಿತೇ ಸತ್ಯವನ್ನು ಮಾತಾಡುವನು. ವಿಜ್ಞಾನವನ್ನು ಅರಿತುಕೊಳ್ಳಲಿಚ್ಛಿಸಬೇಕು,' ಎಂದು ಸನತ್ಕುಮಾರನು ಅಂದನು. 'ಭಗವನ್ ವಿಜ್ಞಾನವನ್ನೆ ಅರಿತುಕೊಳ್ಳ-ಲಿಚ್ಛಿಸುವೆನು' ಎಂದು ನಾರದನು ಹೇಳಿದನು.

೧೭ ನೆಯ ಖಂಡವು ಸಮಾಪ್ತವು

ಯದಾ ವೈ ಮನುತೇಽಥ ವಿಜಾನಾತಿ ನಾಽಮತ್ವಾ ವಿಜಾನಾತಿ ಮತ್ವೈವ
ವಿಜಾನಾತಿ ಮತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಮತಿಂ ಭಗವೋ ವಿಜಿ-
ಜ್ಞಾಸ ಇತಿ ॥ ೧ ॥

॥ ಇತ್ಯಾಷ್ಟಾದಶಃ ಖಂಡಃ ॥

( ೧ ) 'ಮನುಷ್ಯನು ಮನನ ಮಾಡಿದನೆಂದರೆ ಅರಿತುಕೊಳ್ಳುವನು. ಮನನ ಮಾಡದೆ ಅರಿತುಕೊಳ್ಳಲಾರನು. ಮನನಶಕ್ತಿಯನ್ನೆ ಅರಿತುಕೊಳ್ಳ ತಕ್ಕದ್ದು' ಎಂದು ಸನತ್ಕುಮಾರನು ಅಂದನು. 'ಭಗವನ್, ಮನನಶಕ್ತಿ ಯನ್ನೆ ಅರಿಯಲಿಚ್ಛಿಸುವೆನು' ಎಂದು ನಾರದನು ಅಂದನು.

೧೮ ನೆಯ ಖಂಡವು ಸಮಾಪ್ತವು

ಯದಾ ವೈ ಶ್ರದ್ದಧಾತ್ಯಥ ಮನುತೇ ನಾಶ್ರದ್ದಧನ್ಮನುತೇ ಶ್ರದ್ದಧದೇವ
ಮನುತೇ ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯೇತಿ ಶ್ರದ್ಧಾಂ ಭಗವೋ ವಿಜಿ.
ಜ್ಞಾಸ ಇತಿ ॥ ೧ ॥

॥ ಇತ್ಯೇಕೋನವಿಂಶಃ ಖಂಡಃ ॥

( ೧ ) 'ಮನುಷ್ಯನು ಶ್ರದ್ಧಾಯುಕ್ತನಾದನೆಂದರೆ ಮನನ ಮಾಡಬಲ್ಲನು. ಶ್ರದ್ಧೆ ಇಲ್ಲದೆ ಮನನ ಮಾಡಲಾರನು. ಶ್ರದ್ಧೆಯನ್ನು ಅರಿತುಕೊಳ್ಳತಕ್ಕದ್ದು' ಎಂಪು ಸನತ್ಕುಮಾರನು ಅಂದನು. 'ಭಗವನ್, ನಾನು ಶ್ರದ್ಧೆಯನ್ನು ಅರಿಯಲಿಚ್ಛಿಸುವೆನು' ಎಂದು ನಾರದನು ಅಂದನು.

೧೯ ನೆಯ ಖಂಡವು ಸಮಾಪ್ತವು

ಯದಾ ವೈ ನಿಸ್ತಿಷ್ಠತ್ಯಥ ಶ್ರದ್ದಧಾತಿ ನಾನಿಸ್ತಿಷ್ಠನ್ ಶ್ರದ್ದಧಾತಿ
ನಿಸ್ತಿಷ್ಠನ್ನೇವ ಶ್ರದ್ದಧಾತಿ ನಿಷ್ಠಾ ತ್ವೇವ ವಿಜಿಜ್ಞಾಸಿತವ್ಯೇತಿ ನಿಷ್ಠಾಂ
ಭಗವೋ ವಿಜಿಜ್ಞಾಸ ಇತಿ ॥ ೧ ॥

॥ ಇತಿ ವಿಂಶಃ ಖಂಡಃ ॥

( ೧ ) 'ಮನುಷ್ಯನಲ್ಲಿ ನಿಷ್ಠೆ ಇದ್ದರೆ ಆವನು ಶ್ರದ್ಧಾಯುಕ್ತನಾಗುವನು. ನಿಷ್ಠೆ ಇಲ್ಲದಿದ್ದರೆ ಶ್ರದ್ಧೆಯು ಉಂಟಾಗದು. ನಿಷ್ಠೆಯನ್ನು ಆರಿತುಕೊಳ್ಳ ತಕ್ಕದ್ದು.' ಎಂದು ಸನತ್ಕುಮಾರನು ಅಂದನು. 'ಭಗವನ್, ನಾನು ನಿಷ್ಠೆಯನ್ನು ಅರಿಯಲಿಚ್ಛಿಸುವೆನು' ಎಂದು ನಾರದನು ಹೇಳಿದನು.

೨೦ ನೆಯ ಖಂಡವು ಸಮಾಪ್ತವು

ಯದಾ ವೈ ಕರೋತ್ಯಥ ನಿಸ್ತಿಷ್ಠತಿ ನಾಕೃತ್ವಾ ನಿಸ್ತಿಷ್ಠತಿ ಕೃತ್ವೈವ
ನಿಸ್ತಿಷ್ಠತಿ ಕೃತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಕೃತಿಂ ಭಗವೋ ವಿಜಿಜ್ಞಾಸ
ಇತಿ ॥ ೧ ॥

॥ ಇತ್ಯೇಕವಿಂಶಃ ಖಂಡಃ ॥

( ೧ ) 'ಮನುಷ್ಯನು ಕರ್ಮಮಾಡುವಾಗ ನಿಷ್ಠೆಯುಳ್ಳವನಾಗುವನು. ಕರ್ಮಮಾಡದೆ ನಿಷ್ಠೆಯುಳ್ಳವನಾಗನು. ಕರ್ಮವನ್ನು ಅರಿತುಕೊಳ್ಳತಕ್ಕದ್ದು.' ಎಂದು ಸನತ್ಕುಮಾರನು ಅಂದನು. 'ಭಗವನ್, ನಾನು ಕೃತಿಯನ್ನು ( ಕರ್ಮವನ್ನು ) ಅರಿತುಕೊಳ್ಳಲಿಚ್ಛಿಸುವೆನು, ಎಂದು ನಾರದನು ಹೇಳಿದನು.

೨೧ ನೆಯ ಖಂಡವು ಸಮಾಪ್ತವು

ಯದಾ ವೈ ಸುಖಂ ಲಭತೇಽಥ ಕರೋತಿ ನಾಸುಖಂ ಲಬ್ಧ್ವಾ ಕರೋತಿ
ಸುಖಮೇವ ಲಬ್ಧ್ವಾ ಕರೋತಿ ಸುಖಂ ತ್ವೇವ ವಿಜಿಜ್ಞಾಸಿತವ್ಯಮಿತಿ
ಸುಖಂ ಭಗವೋ ವಿಜಿಜ್ಞಾಸ ಇತಿ ॥ ೧ ॥

॥ ಇತಿ ದ್ವಾವಿಂಶಃ ಖಂಡಃ ॥

( ೧ ) 'ಸುಖವು ಪ್ರಾಪ್ತವಾಗುತ್ತಿದ್ದರೆ (ಆ ಉದ್ದೇಶದಿಂದ) ಮನುಷ್ಯನು ಕರ್ಮಮಾಡುವನು. ಸುಖವು ದೊರೆಯುವಂತಿಲ್ಲದಿದ್ದರೆ ಕರ್ಮವನ್ನು ಮಾಡುವದಿಲ್ಲ. ಸುಖವೆಂದರೇನು ಇದನ್ನು ಅರಿತುಕೊಳ್ಳತಕ್ಕದ್ದು,' ಎಂದು ಸನತ್ಕುಮಾರನು ಅಂದನು, 'ಭಗವನ್, ಸುಖವನ್ನು ಅರಿಯಲಿಚ್ಛಿಸುವೆನು' ಎಂದು ನಾರದನು ಹೇಳಿದನು.

೨೨ ನೆಯ ಖಂಡವು ಸಮಾಪ್ತವು

ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾ ತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ ॥ ೧ ॥

॥ ಇತಿ ತ್ರಯೋವಿಂಶಃ ಖಂಡಃ ॥

(೧) 'ಯಾವದು ಅತ್ಯಂತ ವಿಪುಲವೊ, ಅನಂತವೊ, ಅದು ಸುಖಮಯವು. ಭೂಮಾ ಅಂದರೆ ಅತ್ಯಂತ ವಿಪುಲ, ಎಂಬದನ್ನು ಅರಿತುಕೊಳ್ಳ ತಕ್ಕದು' ಎಂದು ಸನತ್ಕುಮಾರನು ಅಂದನು. 'ಭಗವನ್, ಭೂಮಾ ಎಂಬುದನ್ನು ಅರಿತುಕೊಳ್ಳಲಿಚ್ಛಿಸುವೆನು,' ಎಂದು ನಾರದನು ಹೇಳಿದನು.

೨೩ ನೆಯ ಖಂಡವು ಸಮಾಪ್ತವು

ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಽಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂತನ್ಮರ್ತ್ಯಁ್ ಸ ಭಗವಃ ಕಸ್ಮಿನ್ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ ॥ ೧ ॥

ಗೋ ಅಶ್ವಮಿಹ ಮಹಿಮೇತ್ಯಾಚಕ್ಷತೇ ಹಸ್ತಿ ಹಿರಣ್ಯಂ ದಾಸಭಾರ್ಯಂ ಕ್ಷೇತ್ರಾಣ್ಯಾಯತನಾನೀತಿ ನಾಹಮೇವಂ ಬ್ರವೀಮಿ ಬ್ರವೀಮೀತಿ ಹೋವಾಚಾನ್ಯೋ ಹ್ಯನ್ಯಸ್ಮಿನ್ಪ್ರತಿಷ್ಠಿತ ಇತಿ ॥ ೨ ॥

॥ ಇತಿ ಚತುರ್ವಿಂಶಃ ಖಂಡಃ ॥

(೧) 'ಯಾವ ಒಂದು ಸ್ಥಿತಿಯಲ್ಲಿ ಮನುಷ್ಯನು ತನ್ನಿಂದ ಬೇರೆ ಯಾವ ಎರಡನೆಯದನ್ನೂ ನೋಡುವದಿಲ್ಲ, ಕೇಳುವದಿಲ್ಲ, ಅರಿಯುವದಿಲ್ಲ, ಅದೇ ಭೂಮಾ ಎಂಬ ಸ್ಥಿತಿಯು, (ತಾನೊಬ್ಬನೇ ಇರುವನೆಂಬ ಅರಿವಿನ ಮೂಲಕ). ಯಾವ ಸ್ಥಿತಿಯಲ್ಲಿ ಎರಡನೆಯದನ್ನು ನೋಡುವನು, ಕೇಳುವನು, ಅರಿಯುವನು, ಅದು ಅಲ್ಪಸ್ಥಿತಿಯು. ಭೂಮಾ ಎಂಬುದೆ ಅಮೃತವು, ಅಲ್ಪ ಎಂಬುದೆ ಮರ್ತ್ಯವು,' ಎಂದು ಸನತ್ಕುಮಾರನು ಅಂದನು. 'ಭಗವನ್, ಆ ಭೂಮಾ ಎಂಬುದು ಯಾತರಲ್ಲಿ ಪ್ರತಿಷ್ಠಿತವಿರುವದು' ಎಂದು ನಾರದನು ಕೇಳಿದನು. 'ತನ್ನ ಮಹಿಮೆಯಲ್ಲಿ ಅಥವಾ ಅದರಲ್ಲಿಯೂ ಇಲ್ಲ (ಅದು ನಿರಾಲಂಬವು) ಎನ್ನಬಹುದು,' ಎಂದು ಸನತ್ಕುಮಾರನು ಹೇಳಿದನು.

(೨) 'ಆಕಳು, ಕುದುರೆ, ಆನೆ, ಚಿನ್ನ, ದಾಸರು, ಹೆಂಡತಿ, ಹೊಲಮನೆಗಳು, ಇವುಗಳಲ್ಲಿ ಮಹಿಮೆ ಇರುವದೆಂದು ಜನರು ಅನ್ನುವರು. ನಾನು

ಹೀಗೆ ಅನ್ನುವದಿಲ್ಲ. ಯಾಕಂದರೆ ಆತ್ಮನ ಮಹಿಮೆ ಇನ್ನಾತರ ಮೇಲೂ ಅವಲಂಬಿಸಿಲ್ಲ.

೨೪ ನೆಯ ಖಂಡವು ಸಮಾಪ್ತವು

ಸ ಏವಾಧಸ್ತಾತ್ಸ ಉಪರಿಷ್ಟಾತ್ಸ ಪಶ್ಚಾತ್ಸ ಪುರಸ್ತಾತ್ಸ ದಕ್ಷಿಣತಃ ಸ ಉತ್ತರತಃ ಸ ಏವೇದಂ ಸರ್ವಮಿತ್ಯಥಾತೋಽಹಂಕಾರಾದೇಶ ಏವಾಹಮೇವಾಧಸ್ತಾದಹಮುಪರಿಷ್ಟಾದಹಂ ಪಶ್ಚಾದಹಂ ಪುರಸ್ತಾ-ದಹಂ ದಕ್ಷಿಣತೋಽಹಮುತ್ತರತೋಽಹಮೇವೇದಂ ಸರ್ವಮಿತಿ ॥ ೧ ॥

ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈವೇದಂ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾ-ನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್ ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ । ಅಥ ಯೇಽನ್ಯಥಾತೋ ವಿದುರನ್ಯರಾಜಾನಸ್ತೇಽಕ್ಷಯ್ಯಲೋಕಾ ಭವಂತಿ ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ ॥ ೨ ॥

॥ ಇತಿ ಪಂಚವಿಂಶಃ ಖಂಡಃ ॥

( ೧ ) ಅವನೇ ( ಭೂಮಾ ) ಮೇಲೆ, ಕೆಳಗೆ, ಹಿಂದೆ, ಮುಂದೆ, ದಕ್ಷಿಣಕ್ಕೆ, ಉತ್ತರಕ್ಕೆ ಇರುವನು. ಅವನೇ ಇದೆಲ್ಲ ಇರುವನು. ಇನ್ನು ಅಹಂಕಾರಾ-ದೇಶವು ಹೇಳಲ್ಪಡುವದು. ' ನಾನೇ ಕೆಳಗೆ, ಮೇಲೆ, ಹಿಂದೆ, ಮುಂದೆ, ದಕ್ಷಿಣಕ್ಕೆ, ಉತ್ತರಕ್ಕೆ, ಇರುವೆನು. ನಾನೇ ಇದೆಲ್ಲ ಇರುವೆನು.'

( ೨ ) ಇನ್ನು ಆತ್ಮನ ಆದೇಶವು. ಆತ್ಮನೆ ಕೆಳಗೆ, ಮೇಲೆ, ಹಿಂದೆ, ಮುಂದೆ, ದಕ್ಷಿಣಕ್ಕೆ, ಉತ್ತರಕ್ಕೆ ಇರುವನು. ಅವನೇ ಇದೆಲ್ಲ ಇರುವನು. ಅವನೇ ಹೀಗೆ ನೋಡುವವನು, ಮನನಮಾಡುವವನು, ಅರಿತುಕೊಳ್ಳುವವನು, ಆತ್ಮನಲ್ಲಿ ರತನಾಗಿ, ಆತ್ಮನೊಡನೆ ಕ್ರೀಡಿಸುವವನಾಗಿ, ಆತ್ಮನೆ ತನ್ನ ಜೋಡು ಎಂದು ತಿಳಿದವನಾಗಿ, ಆತ್ಮಾನಂದವನ್ನು ಅನುಭವಿಸುತ್ತ ಸ್ವರಾಟ್ ನಾಗುವನು. ಅವನು ಎಲ್ಲ ಲೋಕಗಳಲ್ಲಿಯೂ ಯಥೇಷ್ಟ ವಿಹಾರಮಾಡುವವನಾಗುವನು. ಇದಕ್ಕೆ ವಿಪರೀತವಾದ ಜ್ಞಾನವಿದ್ದವರು ( ಅಂದರೆ ಈ ಜ್ಞಾನವಿಲ್ಲದವರು ) ಅನ್ಯರಿಗೆ ಅಧೀನರಾಗುವರು, ಅವರ ಲೋಕಗಳು ( ಪಡೆದ ಫಲಗಳು ) ಕ್ಷಯಹೊಂದುವವು, ಅವರು ಎಲ್ಲ ಲೋಕಗಳಲ್ಲಿ ಹೋಗಲು ಅಸಮರ್ಥರಾಗುವರು.

೨೫ ನೆಯ ಖಂಡವು ಸಮಾಪ್ತವು

ತಸ್ಯ ಹ ವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿಜಾನತ ಆತ್ಮತಃ ಪ್ರಾಣ ಆತ್ಮತ ಆಶಾಽತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವತಿರೋಭಾವಾವಾತ್ಮತೋಽನ್ನಮಾತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನಮಾತ್ಮತಶ್ಚಿತ್ತಮಾತ್ಮತಃ ಸಂಕಲ್ಪ ಆತ್ಮತೋ ಮನ ಆತ್ಮತೋ ವಾಗಾತ್ಮತೋ ನಾಮಾತ್ಮತೋ ಮಂತ್ರಾ ಆತ್ಮತಃ ಕರ್ಮಾಣ್ಯಾತ್ಮತ ಏವೇದಂ ಸರ್ವಮಿತಿ ॥ ೧ ॥

ತದೇಷ ಶ್ಲೋಕೋ ನ ಪಶ್ಯೋ ಮೃತ್ಯುಂ ಪಶ್ಯತಿ ನ ರೋಗಂ ನೋತ ದುಃಖತಾಂ ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶ ಇತಿ ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ನವಧಾ ಚೈವ ಪುನಶ್ಚೈಕಾದಶಸ್ಮೃತಃ ಶತಂ ಚ ದಶ ಚೈಕಶ್ಚ ಸಹಸ್ರಾಣಿ ಚ ವಿಂಶತಿರಾಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾಸ್ಮೃತಿಃ ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಸ್ತಸ್ಮೈ ಮೃತಕಷಾಯಾಯ ತಮಸಸ್ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಸ್ತಂ ಸ್ಕಂದ ಇತ್ಯಾಚಕ್ಷತೇ ತಂ ಸ್ಕಂದ ಇತ್ಯಾಚಕ್ಷತೇ ॥ ೨ ॥

ಇತಿ ಷಡ್ವಿಂಶಃ ಖಂಡಃ

ಇತಿ ಸಪ್ತಮಃ ಪ್ರಪಾಠಕಃ

( ೧ ) ' ಹೀಗೆ ( ಮೇಲಿನಂತೆ ) ನೋಡುವವನ, ಮನನ ಮಾಡುವವನ, ಅರಿತುಕೊಳ್ಳುವವನ ಆತ್ಮನಿಂದಲೆ ಪ್ರಾಣ, ಆಶೆ, ಸ್ಮರಣ, ಆಕಾಶ, ತೇಜ, ಆಪ, ಆವಿರ್ಭಾವ ತಿರೋಭಾವಗಳು, ಅನ್ನ, ಬಲ, ವಿಜ್ಞಾನ, ಧ್ಯಾನ, ಚಿತ್ತ, ಸಂಕಲ್ಪ, ಮನ, ವಾಣಿ, ನಾಮ, ಮಂತ್ರ, ಕರ್ಮ, ಇವೆಲ್ಲವುಗಳ ಉತ್ಪತ್ತಿಯು. ಆತ್ಮನಿಂದಲೆ ಇದೆಲ್ಲವೂ ಹುಟ್ಟುವದು.

( ೨ ) ಆ ಬಗ್ಗೆ ಈ ಶ್ಲೋಕವಿರುವದು— ' ಸಾಕ್ಷಾತ್ಕಾರಿಯು ಮೃತ್ಯು, ರೋಗ, ದುಃಖ, ಇವುಗಳನ್ನು ಅನುಭವಿಸುವದಿಲ್ಲ. ಅವನು ಎಲ್ಲವನ್ನೂ ತಿಳಿದುಕೊಳ್ಳುವನು, ಎಲ್ಲವನ್ನೂ ಪಡೆಯುವನು, ಎಲ್ಲಕಡೆಗೂ ಪಡೆಯುವನು. ಅವನು ( ಒಬ್ಬನೇ ಇದ್ದವನು ಅನೇಕನಾಗುವನು ಎಂದರ್ಥ ) ಒಮ್ಮಡಿ, ಮುಮ್ಮಡಿ, ಐಮಡಿ, ಏಳ್ಮಡಿ, ಒಂಭತ್ತು ಮಡಿ ಆಗುವನು, ಮತ್ತು ಅವನು ಹನ್ನೊಂದು ಮಡಿ ಎಂದು ಹೇಳಲ್ಪಟ್ಟಿರುವನು. ಅವನು ನೂರಾ ಹನ್ನೊಂದು ಮಡಿ, ಹಾಗೂ ಇಪ್ಪತ್ತುಸಾವಿರ ಮಡಿ ಆಗುವನು. ಆಹಾರಶುದ್ಧಿಯಾಯಿತೆಂದರೆ ಸತ್ವಶುದ್ಧಿಯಾಗುವದು ( ಜೀವಶುದ್ಧಿ ) ' ಸತ್ವಶುದ್ಧಿಯಾಯಿತೆಂದರೆ

ಸ್ಮರಣಶಕ್ತಿಯು ಸ್ಥಿರವಾಗುವದು, ಸ್ಮೃತಿಯು ದೃಢವಾಯಿತೆಂದರೆ ಎಲ್ಲ ಸಂಶಯಗಳ ಪರಿಹಾರವಾಗುವದು.' ಈ ಪ್ರಕಾರ, ದೋಷಗಳಿಂದ ಮುಕ್ತನಾದ ನಾರದನಿಗೆ ಭಗವಾನ್ ಸನತ್ಕುಮಾರನು ಅವಿದ್ಯೆಯ ಆಚೆಗಿರುವ ಜ್ಞಾನವನ್ನು ಹೇಳಿದನು. ಅವನಿಗೆ ಸ್ಕಂದನೆಂಬ ಹೆಸರು, ಸ್ಕಂದನೆಂಬ ಹೆಸರು. ( ಸ್ಕಂದ ಜಿಗಿದು ಅಥವಾ ದಾಟಿ ಹೋಗುವವ. )

೨೬ ನೆಯ ಖಂಡವು ಸಮಾಪ್ತವು

೭ ನೆಯ ಅಧ್ಯಾಯವು ಸಮಾಪ್ತವು

# ೮ನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಆತ್ಮಸ್ವರೂಪದ ಸ್ಪಷ್ಟೀಕರಣ ಮತ್ತು ಅದರ ಉಪಾಸನೆಯು ಸಾಧನ ಇವೆರಡೂ ಹೇಳಲ್ಪಟ್ಟಿವೆ. ಸಾಧಕನಿಗೆ ಬ್ರಹ್ಮೋಪಾಸನೆಯು ಸುಲಭವಾಗ ಬೇಕೆಂದು ಹೃದಯಾಂತರದಲ್ಲಿರುವ ಆಕಾಶವೆ ಬ್ರಹ್ಮನ ಸ್ಥಾನವೆಂದು, ಅದು ಅಮೃತವು, ಶೋಕ ಪಾಪಾದಿಗಳಿಂದ ವಿರಹಿತವು, ಸತ್ಯಕಾಮ ಮತ್ತು ಸತ್ಯಸಂಕಲ್ಪವು ಎಂದು ಉಪನಿಷತ್ಕಾರರು ಮೊದಲನೆಯ ಖಂಡದಲ್ಲಿ ಹೇಳಿರುವರು. ಈ ಜ್ಞಾನ ವಿದ್ದವನಿಗೆ ಮುಕ್ತಿಯು ದೊರೆಯುವದೆಂದು ಇಲ್ಲಿ ಆಶ್ವಾಸನವಿರುವದು.

ಈ ಜ್ಞಾನವಿದ್ದವನು ಸಂಕಲ್ಪಮಾತ್ರದಿಂದ ಪಿತ್ರಾದಿ ಎಲ್ಲ ಲೋಕಗಳ ಆನಂದವನ್ನು ಕುಳಿತಲ್ಲಿಯೇ ಪಡೆಯಬಲ್ಲನು. ಎಂದು ಈ ಜ್ಞಾನಿಯ ಸಾಮರ್ಥ್ಯವು ೨ನೆಯ ಖಂಡದಲ್ಲಿ ವರ್ಣಿತವಾಗಿದೆ.

ಆತ್ಮನು ಸತ್ಯಕಾಮನಿದ್ದರೆ, ಮತ್ತು ಆವನು ಈ ಹೃದಯಾಂತರದಲ್ಲಿ ಇದ್ದರೆ ಅವನ ಕಾಮನೆಗಳು ಯಾಕೆ ಪೂರ್ಣವಾಗುವುದಿಲ್ಲ, ಎಂದು ಯಾರಾದರೂ ಪ್ರಶ್ನೆಯನ್ನು ಕೇಳಬಹುದು. ಈ ಪ್ರಶ್ನೆಗೆ ಮೂರನೆಯ ಖಂಡವು ಉತ್ತರ ಕೊಡುವದು. ಅದೇನಂದರೆ, ಆ ಆತ್ಮನ ಸತ್ಯಕಾಮನೆಗಳು ಅಸತ್ಯದಿಂದ ಆವರಿಸಲ್ಪಟ್ಟಿರುವವು. ಉದಾಹರಣಾರ್ಥವಾಗಿ, ಆತ್ಮನು ನಿರಾಲಂಬ ನಿತ್ಯಾನಂದವನ್ನು ಕಾಮಿಸುವನು. ಆದರೆ ಈ ಸತ್ಯಕಾಮನೆಯು ವಿಷಯಾನಂದದ ಅಸತ್ಯಕಾಮನೆಯಿಂದ ಆವರಿಸಲ್ಪಟ್ಟಿರುವದು. ಆದುದರಿಂದ ಜೀವನು ದಿನಾಲು ಸುಷುಪ್ತಿಯ ಕಾಲಕ್ಕೆ ಸರ್ವಕಾಮನೆಗಳ ಪರಿಪೂರ್ತಿಮಾಡುವ ಸಾಮರ್ಥ್ಯವಿದ್ದ ಬ್ರಹ್ಮಲೋಕಕ್ಕೆ ಹೋಗುತ್ತಿದ್ದರೂ ಕಾಲ್ಕೆಳಗೆ ನಿಕ್ಷಿಪ್ತ ನಿಧಿಯು ಇದ್ದರೂ ಅಜ್ಞಾನದ ಮೂಲಕ ಅದು ಅಲ್ಲಿ ಅಡ್ಡಾಡುವವರಿಗೆ ತಿಳಿಯದೆ ಇರುವಂತೆ ಜೀವನಿಗೆ ಬ್ರಹ್ಮಾನಂದವು ಪ್ರಾಪ್ತವಾಗುವುದಿಲ್ಲ.

ಎಲ್ಲ ಪದಾರ್ಥಗಳಿಗೆ ಆಧಾರವನ್ನು ಕೊಡುವ ದೊಡ್ಡ ಒಡ್ಡಿನಂತೆ ಆತ್ಮನು ಇರುವನೆಂದು ನಾಲ್ಕನೆಯ ಖಂಡದಲ್ಲಿ ವರ್ಣನೆಯಿರುವದು. ಆತ್ಮನನ್ನು ಶೋಕ. ಪಾಪಾದಿ ದೋಷಗಳು ಮುಟ್ಟಲರಿಯವು. ಕತ್ತಲೆಯು ಸಹ ಅಲ್ಲಿ ಹೋದರೆ ಬೆಳಕಾಗುವದು! ಆತ್ಮಲೋಕದಲ್ಲಿ ಸದೈವ ಪ್ರಕಾಶದ ಸಾಮ್ರಾಜ್ಯವಿರುವದು.

ಆ ಆತ್ಮನನ್ನು ಅಥವಾ ಬ್ರಹ್ಮನನ್ನು ಪಡೆಯುವುದಕ್ಕಾಗಿ ಯಾವ ವ್ರತವನ್ನು ಆಚರಿಸಬೇಕಾಗುವುದೊ ಅದೇ ಬ್ರಹ್ಮಚರ್ಯವ್ರತವೆನಿಸುವದು. ನಿಜವಾಗಿ ನೋಡಿದರೆ ಯಜ್ಞ, ಸತ್ರಾಯಣ, ಅನಾಶಕಾಯನ, ಮುಂತಾದ ವ್ರತಗಳೆಲ್ಲ ಬ್ರಹ್ಮಚರ್ಯ ವ್ರತಗಳೇ. ಯಾಕಂದರೆ, ಇವುಗಳನ್ನಾಚರಿಸುವವರು ಕೊನೆಗೆ ಬ್ರಹ್ಮನನ್ನೆ ಪಡೆಯ ಲಿಚ್ಛಿಸುವರು. ಹೀಗೆ ಐದನೆಯ ಖಂಡದ ಆಶಯವಿರುವದು.

ಆರನೆಯ ಖಂಡದಲ್ಲಿ ಹೃದಯ ಮತ್ತು ಹೃದಯದ ನಾಡಿಗಳ ವರ್ಣನೆ ಇರುವದು. ಸೂರ್ಯನಿಂದ ಕಿರಣಗಳು ಹೊರಟು ಈ ಲೋಕ ಮತ್ತು ಸ್ವರ್ಲೋಕ ಈ ಎರಡನ್ನು ಬೆಳಗುವಂತೆ ಹೃದಯದಿಂದ ಹೊರಟ ನಾಡಿಗಳು ಇಹಪರ ಲೋಕಗಳನ್ನು, ಅಂತರ್ಬಾಹ್ಯ ಲೋಕಗಳನ್ನು ಪ್ರಕಾಶಿಸುವವು. ಮನುಷ್ಯನು ಮಲಗಿದಾಗ ಅವನ ಜೀವವು ಆ ನಾಡಿಗಳಲ್ಲಿ ಸೇರಿರುವದು. ಒಟ್ಟು ಮುಖ್ಯ ನಾಡಿಗಳ ಸಂಖ್ಯೆಯು ನೂರಾ ಒಂದು ಇರುವದು. ಅವುಗಳಲ್ಲಿ ಒಂದು ನಾಡಿಯು ಹೃದಯದಿಂದ ತಲೆಯ ಕಡೆಗೆ ಹೋಗಿರುವದು. ಯಾವನ ಜೀವವು ಅದರಗುಂಟ ಹೋಗುವದೊ ಅವನು ಅಮೃತನಾಗುವನು.

ಖಂಡ ೭-೧೨ ಇವುಗಳಲ್ಲಿ ಪ್ರಜಾಪತಿ ಮತ್ತು ಇಂದ್ರ ವಿರೋಚನರ ಕಥೆಯ ಮುಖಾಂತರ ಆತ್ಮಸ್ವರೂಪದ ಉಪದೇಶವು ಮಾಡಲ್ಪಟ್ಟಿರುವದು. 'ಶೋಕಪಾಪಾದಿ ರಹಿತನೂ ಅಮೃತನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆದ ಆತ್ಮನನ್ನು ಅರಿತು ಕೊಳ್ಳತಕ್ಕದ್ದು. ಅವನನ್ನರಿತುಕೊಂಡವನು ಸರ್ವಕಾಮನೆಗಳನ್ನೂ ಸರ್ವಲೋಕ ಗಳನ್ನೂ ಪಡೆಯುವನು' ಎಂದು ಒಮ್ಮೆ ಪ್ರಜಾಪತಿಯು ನುಡಿದನು. ಅದನ್ನು ಕೇಳಿ ದೇವತೆಗಳ ಪೈಕಿ ಇಂದ್ರನೂ ಅಸುರರ ಪೈಕಿ ವಿರೋಚನನೂ ಆತ್ಮಜ್ಞಾನವನ್ನರಿತು ಕೊಳ್ಳುವದಕ್ಕಾಗಿ ಪ್ರಜಾಪತಿಯ ಬಳಿಗೆ ಹೋದರು. ಅವನು ಇವರಿಗೆ ಬ್ರಹ್ಮಚರ್ಯ ವ್ರತದಿಂದ ತನ್ನ ಬಳಿ ಇರಹೇಳಿ ಮೂವತ್ತೆರಡು ವರ್ಷಗಳನಂತರ ನೀರಲ್ಲಿಯೂ ಕನ್ನಡಿಯಲ್ಲಿಯೂ ಕಾಣುವ ಛಾಯಾತ್ಮನ ಜ್ಞಾನವನ್ನು ಹೇಳಿ ಅವನೇ ನಿಜವಾದ ಆತ್ಮನು, ಎಂದು ಹೇಳಿ ಕಳುಹಿದನು.

ಅಸುರರು ಈ ಹೊತ್ತಿಗೂ ಅದೇ ನಿಜವೆಂದು ಆ ಅಜ್ಞಾನದಲ್ಲಿಯೆ ತೊಳಲಾಡು ತ್ತಿರುವರು. ಮತ್ತು ಈ ಶರೀರವೆ ಆತ್ಮವೆಂದು ತಿಳಿದು ನಡಕೊಳ್ಳುತ್ತಿರುವರು. ಇಂದ್ರನಿಗೆ ಮಾತ್ರ ಆ ಬಗ್ಗೆ ಸಂಶಯವುಂಟಾಯಿತು. ಆದುದರಿಂದ ಅವನು ತಿರುಗಿ ಪ್ರಜಾಪತಿಯ ಬಳಿಗೆ ಹೋಗಿ ಮತ್ತೆ ಮೂವತ್ತೆರಡು ವರ್ಷ ವ್ರತಸ್ಥನಾಗಿ ಇದ್ದನು. ಆಗ ಪ್ರಜಾಪತಿಯು ಅವನಿಗೆ ಸ್ವಪ್ನಾತ್ಮನ ಜ್ಞಾನವನ್ನು ಹೇಳಿ ಅವನೇ ಆತ್ಮನು ಎಂದು ನುಡಿದನು. ಇಂದ್ರನು ಇದನ್ನು ಕೇಳಿ ಹೊರಟು ಹೋದರೂ ಅವನು ಅದರಿಂದ ಸಮಾಧಾನಗೊಳ್ಳದೆ ಪುನಃ ಪ್ರಜಾಪತಿಯ ಬಳಿಗೆ ಬಂದು ಮೂವತ್ತೆರಡು ವರ್ಷ ವ್ರತಸ್ಥನಾಗಿದ್ದು ಪ್ರಶ್ನೆಮಾಡಿದನು. ಆಗ ಪ್ರಜಾಪತಿಯು ಅವನಿಗೆ ಸುಷುಪ್ತಾತ್ಮನ ಜ್ಞಾನವನ್ನು ಹೇಳಿದನು. ಅಗಿನ ಪೂರ್ತಿ ಸಮಾಧಾನ ಹೊಂದಿದ ಇಂದ್ರನು ಹೊರಟು ಹೋದನು. ಆದರೆ ಪುನಃ ಸಂಶಯಗೊಂಡು ಪ್ರಜಾಪತಿಯ ಬಳಿಗೆ ಬಂದು ಐದು ವರ್ಷ ಇದ್ದು ಮತ್ತೆ ಪ್ರಶ್ನೆ ಕೇಳಿದನು. ಆಗ 'ಈ ಶರೀರವು ಮರಣಶೀಲವಿರುವದು, ಇದು ಆತ್ಮನ ಅಧಿಷ್ಠಾನವಿರುವದು. ಆತ್ಮನು ಶರೀರದಿಂದ ಮುಕ್ತನಾದನೆಂದರೆ ಸುಖದುಃಖಾತೀತನಾಗುವನು. ಆ ಪ್ರಸನ್ನಾತ್ಮನು ಪರಮಜ್ಯೋತಿಯಲ್ಲಿ ಒಂದಾಗಿ

ಸ್ವಸ್ವರೂಪದಿಂದ ಕಂಗೊಳಿಸುವನು. ಇದನ್ನರಿತವನು ಸರ್ವಕಾಮನೆಗಳನ್ನು ಸರ್ವ ಲೋಕಗಳನ್ನು ಪಡೆಯುವನು' ಎಂದು ಪ್ರಜಾಪತಿಯು ಹೇಳಿದನು. ಈ ಪ್ರಕಾರ ಇದು ಆತ್ಮನ ಉಪದೇಶವಿರುವದು.

ನಾನು ಆತ್ಮನು ಏಕರೂಪದಿಂದಿರುವ ಬ್ರಹ್ಮಲೋಕದಿಂದ ವಿವಿಧ ಸೃಷ್ಟಿಯಲ್ಲಿ ಅವತರಿಸುವೆನು, ಪುನಃ ರಾಹುಮುಖಮುಕ್ತಚಂದ್ರನಂತೆ ಸರ್ವದೋಷಗಳಿಂದ ಮುಕ್ತನಾಗಿ ಶರೀರರಹಿತನಾಗಿ ಬ್ರಹ್ಮಲೋಕಕ್ಕೆ ಹೋಗುವೆನು, ಎಂದು ೧೩ನೆಯ ಖಂಡದಲ್ಲಿ ವಿಧಾನವಿರುವದು.

ಆಕಾಶದ ಮೂಲಕ ನಾಮರೂಪಗಳು ವ್ಯಕ್ತವಾಗುವವು. ಆದರೆ ಇದೆಲ್ಲ ಆತ್ಮನಲ್ಲಿ, ಬ್ರಹ್ಮನಲ್ಲಿಯೆ ಇರುವದು. ಮುಕ್ತನಾದ ಆತ್ಮನು ಪುನರ್ಜನ್ಮರಹಿತನಾಗಿ ಬ್ರಹ್ಮಲೋಕಕ್ಕೆ ಹೋಗುವನು, ಎಂದು ೧೪ನೆಯ ಖಂಡದ ವಿಷಯವಿರುವದು.

ಯೋಗ್ಯ ಗುರುಗಳ ಕಡೆಗೆ ಅವರ ಸೇವೆ ಮಾಡುತ್ತ ಇದ್ದು, ವೇದಾಭ್ಯಾಸ ಮಾಡಿ, ಬಳಿಕ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಸ್ವಾಧ್ಯಾಯವನ್ನು ಮಾಡುತ್ತ ಇದ್ದು, ಅಹಿಂಸಾವ್ರತವನ್ನು ಆಚರಿಸುತ್ತ ಇರುವವನು ಬ್ರಹ್ಮಲೋಕಕ್ಕೆ ಹೋಗುವನು, ಎಂದು ಉಪನಿಷತ್ಕಾರರ ಆಶ್ವಾಸನವಿರುವದು.

# ಅಷ್ಟಮೋಽಧ್ಯಾಯಃ

ಅಥ ಯದಿದಮಸ್ಮಿನ್ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽ-
ಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತ-
ವ್ಯಮಿತಿ ॥ ೧ ॥

ತಂ ಚೇದ್ಬ್ರೂಯುರ್ಯದಿದಮಸ್ಮಿನ್ಬ್ರಹ್ಮಪುರೇ ದಹರಂ ಪುಂಡರೀಕಂ
ವೇಶ್ಮ ದಹರೋಽಸ್ಮಿನ್ನಂತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇ-
ಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ॥ ೨ ॥

(೧) ಇನ್ನು ಈ ಬ್ರಹ್ಮಪುರದಲ್ಲಿ (ಮಾನವೀ ಹೃದಯದಲ್ಲಿ) ಚಿಕ್ಕದಾದ ಕಮಲವೊಂದಿದೆ. ಅದರಲ್ಲಿ ಸೂಕ್ಷ್ಮವಾದ ಅಂತರಾಕಾಶವಿರುವದು. ಅದರ ಅಂತರದಲ್ಲಿ ಏನಿರುವದು ಎಂಬುದನ್ನು ಶೋಧಿಸತಕ್ಕದ್ದು, ಅದನ್ನು ತಿಳಿದು ಕೊಳ್ಳತಕ್ಕದ್ದು.

(೨) ' ಈ ಬ್ರಹ್ಮಪುರದಲ್ಲಿರುವ ಚಿಕ್ಕಕಮಲದಲ್ಲಿ ಸೂಕ್ಷ್ಮವಾದ ಯಾವ ಆಕಾಶವಿರುವದೊ, ಅದರಲ್ಲಿ ಏನಿರುವದು, ಅದರಲ್ಲಿ ಏನು ಶೋಧಿಸತಕ್ಕದ್ದು,

ಸ ಬ್ರೂಯಾದ್ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ
ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ
ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ
ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ಸಮಾಹಿತಮಿತಿ ॥ ೩ ॥

ತಂ ಚೇದ್ಬ್ರೂಯುರಸ್ಮಿಂಶ್ಚೇದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಂ
ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾ ಯದೈನಜ್ಜರಾಪ್ನೋತಿ
ಪ್ರಧ್ವಂಸತೇ ವಾ ಕಿಂ ತತೋಽತಿಶಿಷ್ಯತ ಇತಿ ॥ ೪ ॥

ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತ ಏತತ್ಸತ್ಯಂ
ಬ್ರಹ್ಮಪುರಮಸ್ಮಿನ್ಕಾಮಾಃ ಸಮಾಹಿತಾ ಏಷ ಆತ್ಮಾಪಹತಪಾಪ್ಮಾ
ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ
ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ ಯಥಾನು-
ಶಾಸನಂ ಯಂ ಯಮಂತಮಭಿಕಾಮಾ ಭವಂತಿ ಯಂ ಜನಪದಂ
ಯಂ ಕ್ಷೇತ್ರಭಾಗಂ ತಂ ತಮೇವೋಪಜೀವಂತಿ ॥ ೫ ॥

ಏನು ಅರಿತುಕೊಳ್ಳತಕ್ಕದ್ದು' ಎಂದು ಜನರು ಕೇಳಿದರೆ, ಅವನು (ಜ್ಞಾನಿಯು) ಹೇಳಬೇಕು. ಏನಂದರೆ,

(೩) 'ಈ ಹೊರಗಿನ ಆಕಾಶವು ಎಷ್ಟು (ಅನಂತ) ಇರುವದೊ ಅಷ್ಟೇ ಈ ಹೃದಯದೊಳಗಿನ ಆಕಾಶವು ಇರುವದು. ದ್ಯುಲೋಕ ಮತ್ತು ಪೃಥಿವಿ ಇವು ಅದರಲ್ಲಿಯೆ ಇರುವವು. ಅಗ್ನಿವಾಯುಗಳು, ಸೂರ್ಯಚಂದ್ರರು, ವಿದ್ಯುತ್ತು ನಕ್ಷತ್ರಗಳು, ಇಲ್ಲಿ ಇದ್ದುದು ಮತ್ತು ಇಲ್ಲದ್ದು, ಎಲ್ಲವೂ ಅದರಲ್ಲಿ ಸ್ಥಿತವಿರುವದು.'

(೪) 'ಈ ಬ್ರಹ್ಮಪುರದಲ್ಲಿ ಇದೆಲ್ಲ, ಈ ಎಲ್ಲ ಭೂತಗಳು, ಎಲ್ಲ ಕಾಮನೆಗಳು, ಅಂತರ್ಭೂತವಾಗಿದ್ದರೆ, ಇದಕ್ಕೆ (ಶರೀರಕ್ಕೆ) ಮುಪ್ಪು ಉಂಟಾಯಿತೆಂದರೆ ಅಥವಾ ಮರಣವು ಒದಗಿತೆಂದರೆ ಮುಂದೆ ಏನು ಉಳಿಯುವದು?' ಎಂದು ಜನರು ಕೇಳಿದರೆ,

(೫) 'ಇದರ (ಶರೀರದ) ಮುಪ್ಪಿನಿಂದ ಅದು (ಅಂತರಾಕಾಶವು) ಮುಪ್ಪಾಗುವದಿಲ್ಲ, ಇದರ ವಧದಿಂದ ಅದು ಸಾಯುವದಿಲ್ಲ. ಈ ಬ್ರಹ್ಮಪುರವು ಸತ್ಯವಿರುವದು. ಇದರಲ್ಲಿ ಎಲ್ಲ ಕಾಮನೆಗಳು ಅಂತರ್ಭೂತವಾಗಿರುವವು. ಇದೇ (ಈ ಅಂತರಾಕಾಶವೇ) ಆತ್ಮನು. ಇವನು ಪಾಪರಹಿತನು, ಮುಪ್ಪು

ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯ-
ಜಿತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನಮನನುವಿದ್ಯ ವ್ರಜಂತ್ಯೇ-
ತಾಂಶ್ಚ ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷ್ವಸ್ಯ ಕಾಮ-
ಚಾರೋ ಭವತ್ಯಥ ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ
ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ
ಭವತಿ ॥ ೬ ॥

॥ ಇತಿ ಪ್ರಥಮಃ ಖಂಡಃ ॥

ಇಲ್ಲದವನು, ಸಾವಿಲ್ಲದವನು, ಶೋಕರಹಿತನು, ಹಸಿವೆನೀರಡಿಕೆಗಳಿಲ್ಲದವನು, ಸತ್ಯಕಾಮನು, ಸತ್ಯಸಂಕಲ್ಪನು. ಈ ಲೋಕದಲ್ಲಿ (ಅರಸನ) ಅಪ್ಪಣೆಯ ಮೇರೆಗೆ ಪ್ರಜೆಗಳು ನಡೆಯುವಂತೆ, ತಮ್ಮ ತಮ್ಮ ಇಚ್ಛೆಗನುಸಾರವಾಗಿ ಆಯಾ ದೇಶ ಮತ್ತು ಭೂಮಿಭಾಗಗಳನ್ನು ಆಶ್ರಯಿಸಿ ಜೀವಿಸುವಂತೆ (ಆತ್ಮಜ್ಞಾನವಿಲ್ಲದವರು ತಮ್ಮ ಕಾಮನೆಗಳು ಎಳೆದೊಯ್ದ ಲೋಕಗಳಿಗೆ ಹೋಗುವರು. ಇದರ ಅನ್ವಯವು ಮುಂದಿನ ಮಂತ್ರದೊಡನೆ ಇರುವದು.)

(೬) ಇಲ್ಲಿ, ಇಹಲೋಕದಲ್ಲಿ ಕರ್ಮದಿಂದ ದೊರಕಿಸಿದ ಫಲವು ಕ್ಷಯ ಹೊಂದುವಂತೆ ಅಲ್ಲಿ ಪರಲೋಕದಲ್ಲಿಯೂ ಪುಣ್ಯದಿಂದ ದೊರಕಿಸಿದ ಫಲವೂ ಕ್ಷಯ ಹೊಂದುವದು (ಅದಾದರೂ ಶಾಶ್ವತವಲ್ಲ). ಆದುದರಿಂದ ಇಹದಲ್ಲಿ ಆತ್ಮನನ್ನು ಮತ್ತು ಸತ್ಯಕಾಮನೆಗಳನ್ನು ಅರಿತುಕೊಳ್ಳದೆ ಇಲ್ಲಿಂದ ಪರ ಲೋಕಕ್ಕೆ ಹೋದವರು ಆ ಲೋಕಗಳಲ್ಲಿ ಪರಾವಲಂಬಿಗಳಾಗುವರು. ಇಹದಲ್ಲಿ ಆತ್ಮನನ್ನು ಮತ್ತು ಸತ್ಯಕಾಮನೆಗಳನ್ನು ಅರಿತುಕೊಂಡು ಹೋಗುವವರು ಎಲ್ಲ ಲೋಕಗಳಲ್ಲಿ ಸ್ವತಂತ್ರ ವಿಹಾರ ಮಾಡುವವರಾಗುವರು.

೧ ನೆಯ ಖಂಡವು ಸಮಾಪ್ತವು

ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ
ಸಮುತ್ತಿಷ್ಠಂತಿ ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ ॥ ೧ ॥

(೧) (ಜ್ಞಾನಿಯು) ಪಿತೃಲೋಕಕ್ಕೆ ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಪಿತರರು ಅವನೆಡೆಗೆ ಬರುವರು, ಅವನು ಪಿತೃ ಲೋಕವನ್ನು ಪಡೆದು ಮಹಿಮೆಯುಳ್ಳವನಾಗುವನು.

ಅಥ ಯದಿ ಮಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಮಾತರಃ
ಸಮುತ್ತಿಷ್ಠಂತಿ ತೇನ ಮಾತೃಲೋಕೇನ ಸಂಪನ್ನೋ ಮಹೀಯತೇ || ೨ ||

ಅಥ ಯದಿ ಭ್ರಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಭ್ರಾತರಃ
ಸಮುತ್ತಿಷ್ಠಂತಿ ತೇನ ಭ್ರಾತೃಲೋಕೇನ ಸಂಪನ್ನೋ ಮಹೀಯತೇ || ೩ ||

ಅಥ ಯದಿ ಸ್ವಸೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ವಸಾರಃ
ಸಮುತ್ತಿಷ್ಠಂತಿ ತೇನ ಸ್ವಸೃಲೋಕೇನ ಸಂಪನ್ನೋ ಮಹೀಯತೇ || ೪ ||

ಅಥ ಯದಿ ಸಖಿಲೋಕಕಾಮೋ ಭವತಿ ಸಂಕಲ್ಪಾ ದೇವಾಸ್ಯ ಸಖಾಯಃ
ಸಮುತ್ತಿಷ್ಠಂತಿ ತೇನ ಸಖಿಲೋಕೇನ ಸಂಪನ್ನೋ ಮಹೀಯತೇ || ೫ ||

ಅಥ ಯದಿ ಗಂಧಮಾಲ್ಯಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ
ಗಂಧಮಾಲ್ಯೇ ಸಮುತ್ತಿಷ್ಠತಸ್ತೇನ ಗಂಧಮಾಲ್ಯಲೋಕೇನ ಸಂಪನ್ನೋ
ಮಹೀಯತೇ || ೬ ||

( ೨ ) ಇನ್ನು ಅವನು ಮಾತೃಲೋಕಕ್ಕೆ ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಮಾತೃಗಳು ಅವನ ಕಡೆಗೆ ಬರುವರು, ಅವನು ಮಾತೃಲೋಕವನ್ನು ಪಡೆದು ಮಹಿಮೆಯುಳ್ಳವನಾಗುವನು.

( ೩ ) ಅವನು ಭ್ರಾತೃಲೋಕಕ್ಕೆ ( ಅಣ್ಣತಮ್ಮಂದಿರ ಲೋಕ ) ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಭ್ರಾತೃಗಳು ಅವನೆಡೆಗೆ ಬರುವರು, ಅವನು ಭ್ರಾತೃಲೋಕವನ್ನು ಪಡೆದು ಮಹಿಮೆಯುಳ್ಳವನಾಗುವನು.

( ೪ ) ಅವನು ಸ್ವಸೃಲೋಕಕ್ಕೆ ( ಅಕ್ಕತಂಗಿಯರ ಲೋಕ ) ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಸ್ವಸೃಗಳು ಅವನೆಡೆಗೆ ಬರುವರು, ಅವನು ಸ್ವಸೃಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು.

( ೫ ) ಅವನು ಸಖಲೋಕಕ್ಕೆ ( ಗೆಳೆಯರ ಲೋಕ ) ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಸಖರು ಅವನೆಡೆಗೆ ಬರುವರು, ಅವನು ಸಖಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು.

( ೬ ) ಅವನು ಗಂಧಮಾಲ್ಯಗಳ ಲೋಕಕ್ಕೆ ಹೋಗಬೇಕೆಂದು ಇಚ್ಛಿಸಿದರೆ ಅವನ ಸಂಕಲ್ಪಮಾತ್ರದಿಂದ ಗಂಧಮಾಲ್ಯಾದಿಗಳು ಅವನೆಡೆಗೆ ಬರುವವು, ಅವನು ಗಂಧಮಾಲೆಗಳ ಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು.

ಅಥ ಯದ್ಯನ್ನಪಾನಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯಾನ್ನಪಾನೇ
ಸಮುತ್ತಿಷ್ಠತಸ್ತೇನಾನ್ನಪಾನಲೋಕೇನ ಸಂಪನ್ನೋ ಮಹೀಯತೇ ॥ ೭ ॥

ಅಥ ಯದಿ ಗೀತವಾದಿತಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ
ಗೀತವಾದಿತೇ ಸಮುತ್ತಿಷ್ಠತಸ್ತೇನ ಗೀತವಾದಿತಲೋಕೇನ ಸಂಪನ್ನೋ
ಮಹೀಯತೇ ॥ ೮ ॥

ಅಥ ಯದಿ ಸ್ತ್ರೀಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ತ್ರಿಯಃ
ಸಮುತ್ತಿಷ್ಠಂತಿ ತೇನ ಸ್ತ್ರೀಲೋಕೇನ ಸಂಪನ್ನೋ ಮಹೀಯತೇ ॥ ೯ ॥

ಯಂ ಯಮಂತಮಭಿಕಾಮೋ ಭವತಿ ಯಂ ಕಾಮಂ ಕಾಮಯತೇ ಸೋಽಸ್ಯ
ಸಂಕಲ್ಪಾದೇವ ಸಮುತ್ತಿಷ್ಠತಿ ತೇನ ಸಂಪನ್ನೋ ಮಹೀಯತೇ ॥ ೧೦ ॥

॥ ಇತಿ ದ್ವಿತೀಯಃ ಖಂಡಃ ॥

( ೭ ) ಅವನು ಅನ್ನಪಾನಗಳ ಲೋಕಕ್ಕೆ ಹೋಗಬೇಕೆಂದು ಇಚ್ಛಿಸಿದರೆ ಅನ್ನಪಾನಗಳು ಅವನ ಸಂಕಲ್ಪಮಾತ್ರದಿಂದ ಅವನೆಡೆಗೆ ಬರುವವು, ಅವನು ಅನ್ನಪಾನಗಳ ಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು.

( ೮ ) ಅವನು ಗೀತವಾದನಗಳ ಲೋಕಕ್ಕೆ ಹೋಗಲು ಇಚ್ಛಿಸಿದರೆ ಗೀತ ವಾದನಗಳು ಅವನ ಸಂಕಲ್ಪಮಾತ್ರದಿಂದ ಅವನೆಡೆಗೆ ಬರುವವು, ಅವನು ಗೀತವಾದನ ಲೋಕಗಳಿಗೆ ಹೋಗಿ ಮಹಿಮೆಯುಳ್ಳವನಾಗುವನು.

( ೯ ) ಅವನು ಸ್ತ್ರೀಲೋಕಕ್ಕೆ ಹೋಗಬೇಕೆಂದು ಇಚ್ಛಿಸಿದರೆ ಸ್ತ್ರೀಯರು ಅವನ ಸಂಕಲ್ಪಮಾತ್ರದಿಂದ ಅವನೆಡೆಗೆ ಬರುವರು, ಅವನು ಸ್ತ್ರೀಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು.

( ೧೦ ) ಯಾವ ಲೋಕವನ್ನು ಕುರಿತು ಅವನು ಇಚ್ಛಿಸುವನೊ ಮತ್ತು ಯಾವ ಕಾಮನೆಗಳನ್ನು ಕಾಮಿಸುವನೊ ಅವು ಅವನ ಸಂಕಲ್ಪಮಾತ್ರದಿಂದ ಅವನಿಗೆ ಪ್ರಾಪ್ತವಾಗುವವು. ಅವುಗಳನ್ನು ಪಡೆದು ಅವನು ಮಹಿಮೆಯುಳ್ಳವ ನಾಗುವನು.

೨ ನೆಯ ಖಂಡವು ಸಮಾಪ್ತವು

ತ ಇಮೇ ಸತ್ಯಾಃ ಕಾಮಾ ಅನೃತಾಪಿಧಾನಾಸ್ತೇಷಾꣳ ಸತ್ಯಾನಾꣳ ಸತಾಮ-
ನೃತಮಪಿಧಾನಂ ಯೋ ಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ
ಲಭತೇ ॥ ೧ ॥

ಅಥ ಯೇ ಚಾಸ್ಯೇಹ ಜೀವಾ ಯೇ ಚ ಪ್ರೇತಾ ಯಚ್ಚಾನ್ಯದಿಚ್ಛನ್ನ ಲಭತೇ
ಸರ್ವಂ ತದತ್ರ ಗತ್ವಾ ವಿಂದತೇಽತ್ರ ಹ್ಯಸ್ಯೈತೇ ಸತ್ಯಾಃ ಕಾಮಾ ಅನೃ-
ತಾಪಿಧಾನಾಸ್ತದ್ಯಥಾ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ
ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ
ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತ್ಯನೃತೇನ ಹಿ
ಪ್ರತ್ಯೂಢಾಃ ॥ ೨ ॥

ಸ ವಾ ಏಷ ಆತ್ಮಾ ಹೃದಿ ತಸ್ಯೈತದೇವ ನಿರುಕ್ತꣳ ಹೃದ್ಯಯಮಿತಿ ತಸ್ಮಾ-
ದ್ಧೃದಯಮಹರಹರ್ವಾ ಏವಂವಿತ್ಸ್ವರ್ಗಂ ಲೋಕಮೇತಿ ॥ ೩ ॥

( ೧ ) ( ಆತ್ಮನ ) ಆ ಸತ್ಯಕಾಮನೆಗಳು ಅಸತ್ಯದಿಂದ ಮುಚ್ಚಲ್ಪಟ್ಟಿರು-ವವು. ( ನಿರಾಲಂಬ ಆನಂದದ ಕಾಮನೆಯು ವಿಷಯಾನಂದದ ಇಚ್ಛೆಯಿಂದ ಮುಚ್ಚಲ್ಪಟ್ಟಿರುವದು). ಆ ( ಆತ್ಮನ ) ಕಾಮನೆಗಳು ಸತ್ಯವಿದ್ದರೂ ಅಸತ್ಯವು ಅವುಗಳನ್ನು ಆವರಿಸಿರುವದು. ಇಲ್ಲಿಂದ ಹೊರಟು ಹೋದವನ ದರ್ಶನವು ಪುನಃ ಈ ಲೋಕದಲ್ಲಿ ಆಗದು.

( ೨ ) ಇಲ್ಲಿ ಜೀವದಿಂದಿರುವ ಮತ್ತು ಸತ್ತುಹೋದ ಅವನ ಸಂಬಂಧಿಕರು ಮತ್ತು ಅವನು, ಇಲ್ಲಿ ಇಚ್ಛಿಸಿದರೂ ಸಿಕ್ಕದೆ ಇರುವ ಇತರ ಪದಾರ್ಥಗಳು ಅವನಿಗೆ ಅಲ್ಲಿ ( ಬ್ರಹ್ಮಲೋಕದಲ್ಲಿ ) ದೊರಕುವವು. ಅವನ ಈ ಎಲ್ಲ ಸತ್ಯಕಾಮನೆಗಳು ಅಸತ್ಯದಿಂದ ಆವರಿಸಲ್ಪಟ್ಟಿರುವವು. ಯಾವ ರೀತಿ ಭೂಮಿಗತ ದ್ರವ್ಯದ ಅಜ್ಞಾನವಿದ್ದವರು ದಿನಾಲು ಮೇಲಿಂದ ತಿರುಗಾಡಿದರೂ ಆ ದ್ರವ್ಯವನ್ನು ದೊರಕಿಸಲಾರರೊ ಅದೇ ರೀತಿ ಈ ಎಲ್ಲ ಜನರು ದಿನಾಲು ಬ್ರಹ್ಮಲೋಕಕ್ಕೆ ( ಸುಷುಪ್ತಿಯಲ್ಲಿ ) ಹೋಗುತಿದ್ದರೂ ಅಸತ್ಯದಿಂದ ಮೋಹಿತ ರಾಗಿ ಅವುಗಳನ್ನು ( ಸತ್ಯಕಾಮನೆಗಳನ್ನು ) ದೊರಕಿಸಲಾರರು.

( ೩ ) ಆ ಆತ್ಮನು ಹೃದಯದಲ್ಲಿರುವನು. ಹೃದಿ ಅಯಮ್–ಹೃದಯದಲ್ಲಿ ಅದು ( ಆತ್ಮವು ) ಇರುವದು–ಎಂಬುದು ನಿರುಕ್ತವು. ಇದನ್ನರಿತವನು ದಿನಾಲು ಸ್ವರ್ಗಕ್ಕೆ ಹೋಗುವನು.

ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ || ೪ ||

ತಾನಿ ಹ ವಾ ಏತಾನಿ ತ್ರೀಣ್ಯಕ್ಷರಾಣಿ ಸತೀಯಮಿತಿ ತದ್ಯತ್ಸತ್ತದಮೃತಮಥ ಯತ್ತಿ ತನ್ಮರ್ತ್ಯಮಥ ಯದ್ಯಂ ತೇನೋಭೇ ಯಚ್ಛತಿ ಯದನೇನೋಭೇ ಯಚ್ಛತಿ ತಸ್ಮಾದ್ಯಮಹರಹರ್ವಾ ಏವಂ ವಿತ್ಸ್ವರ್ಗಂ ಲೋಕಮೇತಿ || ೫ ||

|| ಇತಿ ತೃತೀಯಃ ಖಂಡಃ ||

( ೪ ) ಇನ್ನು ಈ ಶಾಂತ, ಪ್ರಸನ್ನವ್ಯಕ್ತಿಯು ಈ ಶರೀರವನ್ನು ಬಿಟ್ಟು, ಪರಂಜ್ಯೋತಿಯನ್ನು ಪಡೆದು, ಸ್ವರೂಪಜ್ಞಾನದಿಂದ ಯುಕ್ತನಾಗುವನು. 'ಆ ಸ್ವರೂಪವೆ ಆತ್ಮವು', ಹೀಗೆ ಅವನು ಹೇಳಿದನು. ಇದೇ ಅಮೃತವು, ಅಭಯವು, ಬ್ರಹ್ಮವು. ಈ ಬ್ರಹ್ಮದ ಹೆಸರು 'ಸತ್ಯ' ಎಂದು ಇರುವದು.

( ೫ ) ಸ-ತೀ-ಯಮ್ ಎಂದು ಅದರ (ಸತ್ಯದ) ಮೂರು ಅಕ್ಷರಗಳು ಇರುವವು. ಸತ್ ಎಂಬುದು ಅಮೃತವು, ತೀ ಎಂಬುದು ಮರ್ತ್ಯವು. ಯಮ್ ಎಂಬುದು ಎರಡನ್ನೂ ಜೋಡಿಸುವದು. ಎರಡನ್ನು ಜೋಡಿಸುವದರಿಂದ ಅದು 'ಯಮ್' ಎನಿಸುವದು. ಇದನ್ನರಿತವನು ದಿನಾಲು ಸ್ವರ್ಗಕ್ಕೆ ಹೋಗುವನು.

೩ ನೆಯ ಖಂಡವು ಸಮಾಪ್ತವು

ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ನೈತꣳ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋಽತೋ ನಿವರ್ತಂತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ || ೧ ||

( ೧ ) ಆತ್ಮನು ಸೇತುವಿನಂತೆ ಇರುವನು. ಈ ಲೋಕಗಳು ನಾಶಹೊಂದಬಾರದೆಂದು ಆತ್ಮನು ಒಂದು ಒಡ್ಡಿನಂತೆ ಇರುವನು. ಹಗಲುರಾತ್ರಿಗಳು, ಮುಪ್ಪುಸಾವುಗಳು, ಶೋಕ, ಪುಣ್ಯಪಾಪಗಳು, ಆ ಸೇತುವನ್ನು ದಾಟಲಾರವು. ಎಲ್ಲ ಪಾಪಗಳು ಅಲ್ಲಿಂದ (ಅದನ್ನು ದಾಟಲಾರದೆ) ಹೊರಳಿ ಬರುವವು. ಈ ಬ್ರಹ್ಮಲೋಕವು ಪಾಪರಹಿತವಾಗಿರುವದು.

ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಽಂಧಃ ಸನ್ನನಂಧೋ ಭವತಿ ವಿದ್ಧಃ ಸನ್ನವಿದ್ಧೋ ಭವತ್ಯುಪತಾಪೀ ಸನ್ನನುಪತಾಪೀ ಭವತಿ ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ ॥ ೨ ॥

ತದ್ಯ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿಂದಂತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥ ೩ ॥

॥ ಇತಿ ಚತುರ್ಥಃ ಖಂಡಃ ॥

(೨) ಆದುದರಿಂದ ಈ ಸೇತುವನ್ನು ದಾಟಿದವನು (ಜ್ಞಾನವನ್ನು ಪಡೆದವನು) ಕುರುಡನಿದ್ದರೆ ಕಣ್ಣುಳ್ಳವನಾಗುವನು, ಗಾಯವಾದವನಿದ್ದರೆ ನೆಟ್ಟಗಾಗುವನು. ದುಃಖಿತನಿದ್ದರೆ ಸುಖಿಯಾಗುವನು. ಆದುದರಿಂದ ಈ ಸೇತುವನ್ನು ದಾಟಿದರೆ ರಾತ್ರಿಯು ಸಹ ದಿನವಾಗುವದು. ಈ ಬ್ರಹ್ಮಲೋಕವು ಒಮ್ಮೆಲೆ ಪ್ರಕಾಶಪೂರ್ಣವಿರುವದು.

(೩) ಈ ಬ್ರಹ್ಮಲೋಕವನ್ನು ಯಾರು ಬ್ರಹ್ಮಚರ್ಯದಿಂದ ಪಡೆಯುವರೋ ಅವರದೇ ಈ ಬ್ರಹ್ಮಲೋಕವು. ಅವರು ಎಲ್ಲ ಲೋಕಗಳಲ್ಲಿ ಸ್ವತಂತ್ರ ವಿಹಾರಮಾಡುವವರಾಗುವರು.

೪ ನೆಯ ಖಂಡವು ಸಮಾಪ್ತವು

ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವ ಯೋ ಜ್ಞಾತಾ ತಂ ವಿಂದತೇಽಥ ಯದಿಷ್ಟಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾತ್ಮಾನಮನುವಿಂದತೇ ॥ ೧ ॥

(೧) ಇನ್ನು ಯಜ್ಞವೆಂದು ಜನರು ಯಾವುದಕ್ಕೆ ಅನ್ನುವರೊ ಅದು ಬ್ರಹ್ಮಚರ್ಯವೇ. ಜ್ಞಾನಿಯು ಬ್ರಹ್ಮಚರ್ಯದಿಂದಲೆ ಅದನ್ನು (ಬ್ರಹ್ಮವನ್ನು) ಪಡೆಯುವನು. ‘ಇಷ್ಟ’ (ಹೋಮಿಸಿದ್ದು) ಎಂದೆನಿಸುವುದಾದರೂ ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದ ಇದ್ದು, ಪೂಜಿಸಿ, ಆತ್ಮನನ್ನು ಪಡೆಯುವರು.

ಅಥ ಯತ್ಸತ್ರಾಯಣಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮ-
ಚರ್ಯೇಣ ಹ್ಯೇವ ಸತ ಆತ್ಮನಸ್ತ್ರಾಣಂ ವಿಂದತೇಽಥ ಯನ್ಮೌನ-
ಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವಾ-
ತ್ಮಾನಮನುವಿದ್ಯ ಮನುತೇ ॥ ೨ ॥

ಅಥ ಯದನಾಶಕಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದೇಷ
ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿಂದತೇಽಥ ಯದರ-
ಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ತದರಶ್ಚ ಹ ವೈ
ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂ
ಮದೀಯಂ ಸರಸ್ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರ-
ಹ್ಮಣಃ ಪ್ರಭುವಿಮಿತಂ ಹಿರಣ್ಮಯಂ ॥ ೩ ॥

ತದ್ಯ ಏವೈತಾವರಂ ಚ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮ-
ಚರ್ಯೇಣಾನುವಿಂದಂತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಂ
ಸರ್ವೇಷು ಲೋಕೇಷು ಕಾಮಚಾರೋ ಭವತಿ ॥ ೪ ॥

॥ ಇತಿ ಪಂಚಮಃ ಖಂಡಃ ॥

(೨) ಜನರು ಯಾವುದಕ್ಕೆ ಸತ್ರಾಯಣವೆಂಶೆನ್ನುವರೊ (ಯಜ್ಞ-ಪರಂಪರೆ) ಅದು ಬ್ರಹ್ಮಚರ್ಯವೇ. ಮನುಷ್ಯನು ಬ್ರಹ್ಮಚರ್ಯದ ಮೂಲಕವೆ ಸತ್‌ದಿಂದ ಆತ್ಮನಿಂದ ಪ್ರಾಣವನ್ನು ಪಡೆಯುವನು. ಯಾವುದಕ್ಕೆ ಮೌನ-ವೆಂದೆನ್ನುವರೊ ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದ ಮೂಲಕವೆ ಆತ್ಮನನ್ನು ಪಡೆದು ಮನುಷ್ಯನು ಮನನ ಮಾಡುವನು.

(೩) ಜನರು ಅನಾಶಕಾಯವೆಂದು (ಅಮೃತತ್ವದಾಯಿ) ಯಾವುದಕ್ಕೆ ಅನ್ನುವರೊ ಅದೇ ಬ್ರಹ್ಮಚರ್ಯವು. ಮನುಷ್ಯನು ಬ್ರಹ್ಮಚರ್ಯದಿಂದ ಪಡೆದ ಆತ್ಮನು ನಾಶಹೊಂದುವದಿಲ್ಲ. ಅರಣ್ಯಾಯನ (ಸಂನ್ಯಾಸ) ವೆಂಬುವದು ಬ್ರಹ್ಮಚರ್ಯವೇ. ಇಲ್ಲಿಂದ ಮೂರನೆಯದಾದ ದ್ಯುಲೋಕದಲ್ಲಿರುವ ಬ್ರಹ್ಮಲೋಕದಲ್ಲಿ ಅರ ಮತ್ತು ಣ್ಯ ಎಂಬ ಎರಡು ಸಾಗರಗಳು ಇರುವವು. ಅಲ್ಲಿ ಐರಂಮದೀಯ ಎಂಬ ಸರೋವರವು, ಸೋಮರಸ ಎಂಬ ಅಶ್ವತ್ಥವು, ಅಪರಾಜಿತ ಎಂಬ ಬ್ರಹ್ಮಪುರವು, ಹಿರಣ್ಮಯವಾದ ಪ್ರಭುನಿರ್ಮಿತ ಸಭಾ-ಗೃಹವು ಇರುವವು.

(೪) ಬ್ರಹ್ಮಲೋಕದಲ್ಲಿರುವ ಅರ ಮತ್ತು ಣ್ಯ ಎಂಬ ಸಾಗರಗಳನ್ನು

ಪಡೆಯುವವರೇ ಬ್ರಹ್ಮಲೋಕದ ಒಡೆಯರು. ಅವರು ಸರ್ವಲೋಕಗಳಲ್ಲಿ ಸ್ವತಂತ್ರ ವಿಹಾರಮಾಡಬಲ್ಲರು.

೫ ನೆಯ ಖಂಡವು ಸಮಾಪ್ತವು

ಅಥ ಯಾ ಏತಾ ಹೃದಯಸ್ಯ ನಾಡ್ಯಸ್ತಾ ಹಾ ಪಿಂಗಲಸ್ಯಾಣಿಮ್ನಸ್ತಿಷ್ಠಂತಿ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯೇತ್ಯಸೌ ವಾ ಆದಿತ್ಯಃ ಪಿಂಗಲ ಏಷ ಶುಕ್ಲ ಏಷ ನೀಲ ಏಷ ಪೀತ ಏಷ ಲೋಹಿತಃ ॥ ೧ ॥

ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛತೀಮಂ ಚಾಮುಂ ಚಾಮುಷ್ಮಾದಾದಿತ್ಯಾತ್ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯಂತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ ॥ ೨ ॥

ತದ್ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ ತನ್ನ ಕಶ್ಚನ ಪಾಪ್ಮಾ ಸ್ಪೃಶತಿ ತೇಜಸಾ ಹಿ ತದಾ ಸಂಪನ್ನೋ ಭವತಿ ॥ ೩ ॥

(೧) ಇನ್ನು ಸೂರ್ಯನಲ್ಲಿ ನಾಸಿ, ಬಿಳೀ, ನೀಲ, ಅರಿಷಿಣ, ಕೆಂಪು ಬಣ್ಣಗಳು (ವಿವಿಧ ಕಿರಣಗಳ ಮೂಲಕ) ಕಾಣುವಂತೆ ಈ ಹೃದಯದಿಂದ ಹೊರಟ ನಾಡಿಗಳು ನಾಸಿ, ಬಿಳೀ, ನೀಲ, ಅರಿಷಿಣ ಮತ್ತು ಕೆಂಪು ಬಣ್ಣದ ಸೂಕ್ಷ್ಮ ರಸದಿಂದ ತುಂಬಿ ಆ ಬಣ್ಣದವು ಆಗಿ ಇರುವವು.

(೨) ವಿಶಾಲವಾದ ಒಂದೇ ರಾಜಮಾರ್ಗವು ಈ ಮತ್ತು ಆ ಹೀಗೆ ಎರಡು ಗ್ರಾಮಗಳಿಗೆ ಹೋಗುವಂತೆ ಆದಿತ್ಯನ ಕಿರಣಗಳು ಇಹ ಮತ್ತು ಪರ ಹೀಗೆ ಎರಡೂ ಲೋಕಗಳಿಗೆ ಹೋಗುವವು. ಆ ಆದಿತ್ಯನಿಂದ ಪಸರಿಸಿದ ಕಿರಣಗಳು ಈ ನಾಡಿಗಳಲ್ಲಿ ಸೇರಿರುವವು, ಈ ನಾಡಿಗಳಿಂದ ಪಸರಿಸಿದ ಕಿರಣಗಳು ಆ ಆದಿತ್ಯನಲ್ಲಿ ಸೇರಿರುವವು.

(೩) ಮನುಷ್ಯನು ಮಲಗಿದಾಗ ಪೂರ್ಣ ಪ್ರಸನ್ನ ಸ್ಥಿತಿಯಲ್ಲಿರುವಾಗ ಕನಸನ್ನು ಕಾಣುವುದಿಲ್ಲ. ಆಗ ಅವನು (ಜೀವನು) ಈ ನಾಡಿಗಳಲ್ಲಿ ಸೇರಿರುವನು ಮತ್ತು ಅವನಿಗೆ ಆಗ ಯಾವ ಪಾಪವೂ ತಗಲುವುದಿಲ್ಲ. ಯಾಕಂದರೆ, ಅವನು ಆಗ ತೇಜದಿಂದ ಯುಕ್ತನಿರುವನು.

ಅಥ ಯತ್ರೈತದಬಲಿಮಾನಂ ನೀತೋ ಭವತಿ ತಮಭಿತ ಆಸೀನಾ
ಆಹುರ್ಜಾನಾಸಿ ಮಾಂ ಜಾನಾಸಿ ಮಾಮಿತಿ ಸ ಯಾವದಸ್ಮಾಚ್ಛರೀರಾ-
ದನುತ್ಕ್ರಾಂತೋ ಭವತಿ ತಾವಜ್ಜಾನಾತಿ ॥ ೪ ।

ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವ-
ಮಾಕ್ರಮತೇ ಸ ಓಮಿತಿ ವಾ ಹೋದ್ವಾ ಮೀಯತೇ ಸ ಯಾವ-
ತ್ಕ್ಷಿಪ್ಯೇನ್ಮನಸ್ತಾವದಾದಿತ್ಯಂ ಗಚ್ಛತ್ಯೇತದ್ವೈ ಖಲು ಲೋಕದ್ವಾರಂ
ವಿದುಷಾಂ ಪ್ರಪದನಂ ನಿರೋಧೋಽವಿದುಷಾಂ ॥ ೫

ತದೇಷ ಶ್ಲೋಕಃ । ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನ-
ಮಭಿನಿಃಸೃತೈಕಾ ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ
ಉತ್ಕ್ರಮಣೇ ಭವಂತ್ಯುತ್ಕ್ರಮಣೇ ಭವಂತಿ ॥ ೬

॥ ಇತಿ ಷಷ್ಠಃ ಖಂಡಃ ॥

( ೪ ) ಮನುಷ್ಯನು ತೀರ ದುರ್ಬಲನಾದಾಗ ಅವನ ಸುತ್ತಲು ಇರುವವರು ನಾನು ಯಾರು, ನಾನು ಯಾರು, ಎಂದು ಕೇಳುವರು. ಶರೀರದಲ್ಲಿ ಜೀವವು ಇರುವವರೆಗೆ ಅವನು ಅವರನ್ನು ಗುರುತಿಸುವನು.

( ೫ ) ಈ ಶರೀರವನ್ನು ಬಿಟ್ಟು ಹೋಗುವಾಗ ಅವನು ಈ ಕಿರಣಗಳ ಮುಖಾಂತರವೆ ಮೇಲೆ ಸಾಗುವನು. ಓಂ ಅನ್ನುತ್ತ ಮೇಲೆ ಹೋಗುವನು. ಎಷ್ಟು ವೇಳೆಯಲ್ಲಿ ಮನಸು ಹೋಗಬಲ್ಲದೊ ಅಷ್ಟೇ ವೇಳೆಯಲ್ಲಿ ಅವನು ಆದಿತ್ಯಲೋಕಕ್ಕೆ ಹೋಗುವನು. ಇದೇ ಲೋಕದ ದ್ವಾರವು. ಜ್ಞಾನಿಗಳು ಅದರೊಳಗಿಂದ ಹಾಯ್ದು ಹೋಗುವರು, ಅಜ್ಞಾನಿಗಳು ಅಲ್ಲಿ ತಡೆಯಲ್ಪಡು-ವರು.

( ೬ ) ಆ ಬಗ್ಗೆ ಈ ಶ್ಲೋಕವು. ಹೃದಯದಿಂದ ನೂರಾ ಒಂದು ನಾಡಿಗಳು ಹೊರಡುವವು. ಅವುಗಳಲ್ಲಿ ಒಂದು ತಲೆಗೆ ಸಾಗಿರುವದು. ಅದರ ಗುಂಟ ಹೋಗುವವನು ಅಮೃತನಾಗುವನು. ಮಿಕ್ಕವುಗಳು ದಿಕ್ಕು ದಿಕ್ಕಿಗೆ ಒಯ್ಯುವವು, ಒಯ್ಯುವವು.

೬ ನೆಯ ಖಂಡವು ಸಮಾಪ್ತವು

ಯ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽ-
ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿ-
ತವ್ಯಃ ಸ ಸರ್ವಾꣳಶ್ಚ ಲೋಕಾನಾಪ್ನೋತಿ ಸರ್ವಾꣳಶ್ಚ ಕಾಮಾನ್ಯಸ್ತ-
ಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ‖ ೧ ‖

ತದ್ಧೋಭಯೇ ದೇವಾಸುರಾ ಅನುಬುಬುಧಿರೇ ತೇ ಹೋಚುರ್ಹಂತ
ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾꣳಶ್ಚ
ಲೋಕಾನಾಪ್ನೋತಿ ಸರ್ವಾꣳಶ್ಚ ಕಾಮಾನಿತೀಂದ್ರೋ ಹೈವ ದೇವಾ-
ನಾಮಭಿಪ್ರವವ್ರಾಜ ವಿರೋಚನೋಽಸುರಾಣಾಂ ತೌ ಹಾಸಂವಿದಾ-
ನಾವೇವ ಸಮಿತ್ಪಾಣೀ ಪ್ರಜಾಪತಿಸಕಾಶಮಾಜಗ್ಮತುಃ ‖ ೨ ‖

ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತುಸ್ತೌ ಹ ಪ್ರಜಾ-
ಪತಿರುವಾಚ ಕಿಮಿಚ್ಛಂತಾವವಾಸ್ತಮಿತಿ ತೌ ಹೋಚತುರ್ಯ ಆತ್ಮಾ-
ಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽ-
ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ
ವಿಜಿಜ್ಞಾಸಿತವ್ಯ ಸ ಸರ್ವಾꣳಶ್ಚ ಲೋಕಾನಾಪ್ನೋತಿ ಸರ್ವಾꣳಶ್ಚ
ಕಾಮಾನ್ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಭಗವತೋ ವಚೋ
ವೇದಯಂತೇ ತಮಿಚ್ಛಂತಾವವಾಸ್ತಮಿತಿ ‖ ೩ ‖

(೧) ಯಾವ ಆತ್ಮನು ಪಾಪರಹಿತನೊ, ಮುಪ್ಪು, ಸಾವು, ಶೋಕ ರಹಿತನೊ, ಹಸಿವು ನೀರಡಿಕೆಗಳಿಲ್ಲದವನೊ ಸತ್ಯಕಾಮನೊ ಸತ್ಯಸಂಕಲ್ಪನೊ ಅವನನ್ನು ಶೋಧಿಸತಕ್ಕದ್ದು, ಅರಿತುಕೊಳ್ಳತಕ್ಕದ್ದು. ಆ ಆತ್ಮನನ್ನು ಶೋಧಿಸಿ ಅರಿತುಕೊಂಡವನು ಎಲ್ಲ ಲೋಕಗಳನ್ನೂ ಕಾಮನೆಗಳನ್ನೂ ಪಡೆಯುವನು,' ಎಂದು ಪ್ರಜಾಪತಿಯು ನುಡಿದನು.

(೨) ಇದನ್ನು ದೇವಾಸುರರಿಬ್ಬರೂ ಕೇಳಿಕೊಂಡರು. ಅವರು ಅಂದದ್ದು 'ಯಾವ ಆತ್ಮನನ್ನು ಶೋಧಿಸಿ ಅರಿತುಕೊಳ್ಳುವುದರಿಂದ ಸರ್ವಕಾಮನೆಗಳೂ ಪ್ರಾಪ್ತವಾಗುವವೊ ಆ ಆತ್ಮನನ್ನು ಹುಡುಕೋಣ; ಎಂದು ದೇವತೆಗಳಲ್ಲಿ ಇಂದ್ರನು ಮತ್ತು ಅಸುರರಲ್ಲಿ ವಿರೋಚನನು ಇವರು ಪರಸ್ಪರರಿಗೆ ತಿಳಿಸದೆ ಸಮಿತ್ಪಾಣಿಗಳಾಗಿ ಪ್ರಜಾಪತಿಯ ಬಳಿಗೆ ಹೋದರು.

(೩) ಅವರಿಬ್ಬರೂ ಅಲ್ಲಿ ಮೂವತ್ತೆರಡು ವರ್ಷ ಬ್ರಹ್ಮಚರ್ಯದಿಂದ ಇದ್ದರು. ಆಗ 'ನೀವು ಯಾವ ಉದ್ದೇಶದಿಂದ ಇಲ್ಲಿ ಇರುವಂಥವರಾದಿರಿ' ಎಂದು ಪ್ರಜಾಪತಿಯು ಅವರನ್ನು ಕೇಳಿದನು. ಅವರು ಅಂದದ್ದು 'ಯಾವ

ತೌ ಹ ಪ್ರಜಾಪತಿರುವಾಚ ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತ್ಯಥ ಯೋಽಯಂ ಭಗವೋಽಪ್ಸು ಪರಿಖ್ಯಾಯತೇ ಯಶ್ಚಾಯಮಾದರ್ಶೇ ಕತಮ ಏಷ ಇತ್ಯೇಷ ಉ ಏವೈಷು ಸರ್ವೇಷ್ವೇತೇಷು ಪರಿಖ್ಯಾಯತ ಇತಿ ಹೋವಾಚ ॥ ೪ ॥

॥ ಇತಿ ಸಪ್ತಮಃ ಖಂಡಃ ॥

ಆತ್ಮನು ಪಾಪರಹಿತನೊ, ಮುಪ್ಪು ಸಾವು ಶೋಕರಹಿತನೊ, ಹಸಿವು ನೀರಡಿಕೆ ಗಳಿಲ್ಲದವನೊ, ಸತ್ಯಕಾಮನೊ ಅವನನ್ನು ಶೋಧಿಸತಕ್ಕದ್ದು, ಅರಿತುಕೊಳ್ಳ ತಕ್ಕದ್ದು. ಆ ಆತ್ಮನನ್ನು ಶೋಧಿಸಿ ಅರಿತುಕೊಂಡವನು ಎಲ್ಲ ಲೋಕಗಳನ್ನೂ ಕಾಮನೆಗಳನ್ನೂ ಪಡೆಯುವನು, ಎಂಬ ತಮ್ಮ ವಚನವನ್ನು ಕೇಳಿ ಆ ಆತ್ಮನ ಜ್ಞಾನವನ್ನು ಇಚ್ಛಿಸಿ ಇಲ್ಲಿ ಇರುವಂಥವರಾದೆವು.'

( ೪ ) ಪ್ರಜಾಪತಿಯು ಅವರಿಗೆ ಅಂದದ್ದು, ' ಈ ಕಣ್ಣುಗಳಲ್ಲಿ ಕಾಣುವ ಪುರುಷನೇ ಆತ್ಮನು. ಅದೇ ಅಮೃತವು, ಅಭಯವು, ಬ್ರಹ್ಮವು.' ಅವರು ಕೇಳಿದ್ದು, ' ಭಗವನ್, ನೀರಿನಲ್ಲಿಯೂ ಕನ್ನಡಿಯಲ್ಲಿಯೂ ಕಾಣುವ ಪುರುಷನು ಯಾರು ? ' ಅವನೇ ಇವೆಲ್ಲವುಗಳಲ್ಲಿ ತೋರುವನು,' ಎಂದು ಪ್ರಜಾಪತಿಯು ಉತ್ತರ ಕೊಟ್ಟನು.

೭ ನೆಯ ಖಂಡವು ಸಮಾಪ್ತವು

ಉದಶರಾವ ಆತ್ಮಾನಮವೇಕ್ಷ್ಯ ಯದಾತ್ಮನೋ ನ ವಿಜಾನೀಥಸ್ತನ್ಮೇ ಪ್ರಬ್ರೂತಮಿತಿ ತೌ ಹೋದಶರಾವೇಽವೇಕ್ಷಾಂಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥೇತಿ ತೌ ಹೋಚತುಃ ಸರ್ವಮೇವೇದ-ಮಾವಾಂ ಭಗವ ಆತ್ಮಾನಂ ಪಶ್ಯಾವ ಆಲೋಮಭ್ಯ ಆನಖೇಭ್ಯಃ ಪ್ರತಿರೂಪಮಿತಿ ॥ ೧ ॥

( ೧ ) ' ನೀರಿನ ಪಾತ್ರದಲ್ಲಿ ನಿಮ್ಮನ್ನು ನೋಡಿಕೊಂಡು ಆತ್ಮನನ್ನು ಕುರಿತು ನಿಮಗೆ ಏನು ತಿಳಿಯುವದಿಲ್ಲವೊ ಅದನ್ನು ನನಗೆ ಕೇಳಿರಿ,' ಎಂದು ಪ್ರಜಾಪತಿಯು ಹೇಳಿದನು. ಅವರು ನೀರಿನ ಪಾತ್ರದಲ್ಲಿ ತಮ್ಮನ್ನು ನೋಡಿ-ಕೊಂಡರು. ' ನಿಮಗೆ ಏನು ಕಾಣುವದು ?' ಎಂದು ಪ್ರಜಾಪತಿಯು ಕೇಳಿದನು. ಅವರಿಬ್ಬರು ಅಂದದ್ದು, ' ಭಗವನ್ ಆದರಲ್ಲಿ ನಾವು ಕೂದಲು ತುದಿಯಿಂದ ಕಾಲುಬೆರಳಿನವರೆಗೆ ನಮ್ಮ ಪೂರ್ಣ ಪ್ರತಿಬಿಂಬವನ್ನು ಕಾಣುವೆವು.'

ತೌ ಹ ಪ್ರಜಾಪತಿರುವಾಚ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷೇಥಾಮಿತಿ ತೌ ಹ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷಾಂಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥೇತಿ ॥ ೨ ॥

ತೌ ಹೋಚತುರ್ಯಥೈವೇದಮಾವಾಂ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಚ ಏವಮೇವೇಮೌ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತಾವಿತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತ-ದ್ಬ್ರಹ್ಮೇತಿ ತೌ ಹ ಶಾಂತಹೃದಯೌ ಪ್ರವವ್ರಜತುಃ ॥ ೩ ॥

ತೌ ಹಾನ್ವೀಕ್ಷ್ಯ ಪ್ರಜಾಪತಿರುವಾಚಾನುಪಲಭ್ಯಾತ್ಮಾನಮನನುವಿದ್ಯ ವ್ರಜತೋ ಯತರ ಏತದುಪನಿಷದೋ ಭವಿಷ್ಯಂತಿ ದೇವಾ ವಾಸುರಾ ವಾ ತೇ ಪರಾಭವಿಷ್ಯಂತೀತಿ ಸಹ ಶಾಂತಹೃದಯ ಏವ ವಿರೋಚನೋಽ-ಸುರಾಂಜಗಾಮ ತೇಭ್ಯೋ ಹೈತಾಮುಪನಿಷದಂ ಪ್ರೋವಾಚಾತ್ಮೈವೇಹ ಮಹಯ್ಯ ಆತ್ಮಾ ಪರಿಚರ್ಯ ಆತ್ಮಾನಮೇವೇಹ ಮಹಯನ್ನಾತ್ಮಾನಂ ಪರಿಚರನ್ನುಭೌ ಲೋಕಾವವಾಪ್ನೋತೀಮಂ ಚಾಮುಂ ಚೇತಿ ॥ ೪ ॥

( ೨ ) ಅವರಿಗೆ ಪ್ರಜಾಪತಿಯು ಅಂದದ್ದು, ' ಚನ್ನಾಗಿ ಶೃಂಗಾರ ಮಾಡಿ-ಕೊಂಡು, ಒಳ್ಳೇ ಬಟ್ಟೆಗಳನ್ನು ತೊಟ್ಟುಕೊಂಡು, ಕ್ಷೌರ ಮಾಡಿಸಿಕೊಂಡು, ನೀರಿನ ಪಾತ್ರದಲ್ಲಿ ನೋಡಿರಿ.' ಅವರು ಶೃಂಗಾರ ಮಾಡಿಕೊಂಡು ಒಳ್ಳೇ ಬಟ್ಟೆಗಳನ್ನು ತೊಟ್ಟುಕೊಂಡು, ಕ್ಷೌರಮಾಡಿಸಿಕೊಂಡು ನೀರಿನ ಪಾತ್ರದಲ್ಲಿ ನೋಡುವಂಥವರಾದರು. ಆಗ ' ನಿಮಗೆ ಏನು ಕಾಣುವದು ? ' ಎಂದು ಪ್ರಜಾಪತಿಯು ಅವರನ್ನು ಕೇಳಿದನು.

( ೩ ) ಅವರು ಅಂದದ್ದು ' ಭಗವನ್, ನಾವು ಶೃಂಗಾರಮಾಡಿಕೊಂಡವರು ಇದ್ದಂತೆ ಇದರಲ್ಲಿಯ ಪ್ರತಿಬಿಂಬಗಳು ಕಾಣುವವು.' ' ಇವನೇ ಆತ್ಮನು, ಇದೇ ಅಮೃತವು, ಅಭಯವು, ಬ್ರಹ್ಮವು,' ಎಂದು ಪ್ರಜಾಪತಿಯು ಹೇಳಿದನು. ಅವರು ಶಾಂತಹೃದಯರಾಗಿ ಹೊರಟುಹೋದರು.

( ೪ ) ( ಅವರು ಹೋದಬಳಿಕ ) ಅವರ ಕಡೆಗೆ ನೋಡಿ ಪ್ರಜಾಪತಿಯು ಅಂದದ್ದು, ' ಆತ್ಮನನ್ನು ಪಡೆಯದೆ, ಆತ್ಮನನ್ನರಿಯದೆ ಅವರಿಬ್ಬರೂ ಹೋಗು ವರು. ಯಾರು ಇದೇ ಕೊನೆಯ ಜ್ಞಾನವೆಂದು ತಿಳಿಯುವರೊ, ಅವರು ಸುರರೇ ಇರಲಿ, ಅಸುರರೇ ಇರಲಿ, ಅವರು ನಾಶಹೊಂದುವರು.' ವಿರೋಚನನು ಸಮಾಧಾನಹೊಂದಿ ಅಸುರರೆಡೆಗೆ ಹೋದನು. ಅವರಿಗೆ ಈ

ತಸ್ಮಾದಪ್ಯದ್ಯೇಹಾದದಾನಮಶ್ರದ್ದಧಾನಮಯಜಮಾನಮಾಹುರಾಸುರೋ ಬತೇತ್ಯಸುರಾಣಾಂಹ್ಯೇಷೋಪನಿಷತ್ಪ್ರೇತಸ್ಯ ಶರೀರಂ ಭಿಕ್ಷಯಾ ವಸನೇ- ನಾಲಂಕಾರೇಣೇತಿ ಸಂಸ್ಕುರ್ವಂತ್ಯೇತೇನ ಹ್ಯಮುಂ ಲೋಕಂ ಜೇಷ್ಯಂತೋ ಮನ್ಯಂತೇ ॥ ೫ ॥

॥ ಇತ್ಯಷ್ಟಮಃ ಖಂಡಃ ॥

ಜ್ಞಾನವನ್ನು ಹೇಳಿದನು. ಈ ಆತ್ಮನನ್ನೆ ( ಛಾಯಾತ್ಮ ) ಪೂಜಿಸತಕ್ಕದ್ದು, ಇವನನ್ನೆ ಸೇವಿಸತಕ್ಕದ್ದು. ಈ ಆತ್ಮನನ್ನು ಇಲ್ಲಿ ಪೂಜಿಸಿ, ಇಲ್ಲಿ ಸೇವಿಸಿ ಮನುಷ್ಯನು ಇಹ ಪರಲೋಕಗಳನ್ನು ಪಡೆಯುವನು.

( ೫ ) ಆದುದರಿಂದ ಈಗೆ ಸಹ ದಾನಕೊಡದೆ ಇದ್ದವನು, ಶ್ರದ್ಧೆ ಇಲ್ಲ- ದವನು, ಯಜ್ಞಮಾಡದೆ ಇದ್ದವನು, ಅಸುರನಿರುವನು ಎಂದು ಜನರು ಅನ್ನುವರು. ಅಸುರರ ತತ್ವಜ್ಞಾನವು ಈ ಪ್ರಕಾರದ್ದಿರುವದು. ಸತ್ತವನ ಶರೀರವನ್ನು ಅವರು ಅನ್ನ ವಸ್ತ್ರ ಅಲಂಕಾರಗಳಿಂದ ಶೃಂಗರಿಸುವರು, ಮತ್ತು ಹೀಗೆ ಮಾಡುವುದರಿಂದ ಅವನು ಪರಲೋಕಗಳನ್ನು ಪಡೆಯುವನೆಂದು ತಿಳಿಯುವರು.

೮ ನೆಯ ಖಂಡವು ಸಮಾಪ್ತವು

ಅಥ ಹ್ಯೇಂದ್ರೋಽಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ಯಥೈವ ಖಲ್ವಯಮಸ್ಮಿಂಚ್ಛರೀರೆ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನಂ- ಧೇಽಂಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ ॥ ೧ ॥

( ೧ ) ಆದರೆ ದೇವತೆಗಳೆಡೆಗೆ ಹೋಗಿ ಮುಟ್ಟುವದರೊಳಗಾಗಿಯೆ ಇಂದ್ರನಿಗೆ ಈ ಕೆಳಗಿನ ಸಂಶಯದ ಮೂಲಕ ಭಯವು ಉಂಟಾಯಿತು. ' ಈ ಶರೀರವು ಶೃಂಗರಿಸಲ್ಪಟ್ಟಾಗ ಅದು ( ನೀರಿನಲ್ಲಿ ಕಂಡ ಛಾಯಾತ್ಮವು) ಶೃಂಗರಿಸಿದಂತೆ, ಶರೀರವು ಒಳ್ಳೇ ಬಟ್ಟೆಗಳನ್ನು ತೊಟ್ಟಾಗ ಅದೂ ಒಳ್ಳೆ ಬಟ್ಟೆಗಳನ್ನು ತೊಟ್ಟಂತೆ, ಶರೀರವು ಕ್ಷೌರ ಮಾಡಿಸಿಕೊಂಡಾಗ ಅದೂ ಕ್ಷೌರ ಮಾಡಿಸಿಕೊಂಡಂತೆ ಕಾಣುವದು. ಅದೇ ರೀತಿ ಈ ಶರೀರವು ಅಂಧ-

ಸ ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ಯ-
ಚ್ಛಾಂತಹೃದಯಃ ಪ್ರಾವ್ರಾಜೀಃ ಸಾರ್ಧಂ ವಿರೋಚನೇನ ಕಿಮಿಚ್ಛನ್
ಪುನರಾಗಮ ಇತಿ ಸ ಹೋವಾಚ ಯಥೈವ ಖಲ್ವಯಂ ಭಗವೋಽ-
ಸ್ಮಿಞ್ಛರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ
ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನಂಧೇಽಂಧೋ
ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ
ನಾಶಮನ್ವೇಷ ನಶ್ಯತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ || ೨ ||

ಏವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನು-
ವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಂಶತಂ ವರ್ಷಾಣೀತಿ ಸ ಹಾಪ-
ರಾಣಿ ದ್ವಾತ್ರಿಂಶತಂ ವರ್ಷಾಣ್ಯುವಾಸ ತಸ್ಮೈ ಹೋವಾಚ || ೩ ||

|| ಇತಿ ನವಮಃ ಖಂಡಃ ||

ವಿದ್ದರೆ ಅದೂ ಅಂಧವೇ ತೋರುವದು. ಶರೀರದ ಕಣ್ಣು ಮೂಗು ಸೋರು-ತ್ತಿದ್ದರೆ ಅದೂ ಅದರಂತೆ ತೋರುವದು. ಶರೀರವು ಹೇಳವ ಇದ್ದರೆ ಅದೂ ಹಾಗೆ ತೋರುವದು. ಈ ಶರೀರದ ನಾಶವಾದೊಡನೆ ಅದೂ ನಾಶಹೊಂದು-ವದು. ( ಅಂದಬಳಿಕ ಇದೆಂತಹ ಆತ್ಮವು ? ).

( ೨ ) ಇದರಲ್ಲಿ ಯಾವ ಒಳಿತನ್ನೂ ನಾನು ಕಾಣೆ?' ಹೀಗೆಂದು ( ಸಂಶಯ ಪರಿಹಾರಕ್ಕಾಗಿ ) ಅವನು ಸಮಿತ್ಪಾಣಿಯಾಗಿ ಮತ್ತೆ ಪ್ರಜಾಪತಿಯ ಬಳಿಗೆ ಹೋದನು. ಪ್ರಜಾಪತಿಯು ಅವನಿಗೆ ಅಂದದ್ದು, 'ಇಂದ್ರನೇ ಸಮಾಧಾನ-ಹೊಂದಿ ವಿರೋಚನನೊಡನೆ ಹೋದವನು ಈಗ ಪುನಃ ಏನನ್ನು ಇಚ್ಛಿಸಿ ನನ್ನ ಬಳಿಗೆ ಬಂದಿರುವಿ?' ಇಂದ್ರನು ಅಂದದ್ದು, 'ಭಗವನ್, ಈ ಶರೀರವು ಶೃಂಗರಿಸಲ್ಪಟ್ಟಾಗ ಅದೂ ( ಛಾಯಾತ್ಮವು ) ಶೃಂಗರಿಸಲ್ಪಟ್ಟಂತೆ, ಶರೀರವು ಒಳ್ಳೇ ಬಟ್ಟೆಗಳನ್ನು ತೊಟ್ಟಾಗ ಅದೂ ಒಳ್ಳೇ ಬಟ್ಟೆಗಳನ್ನು ತೊಟ್ಟಂತೆ, ಶರೀರವು ಕ್ಷೌರ ಮಾಡಿಸಿಕೊಂಡಾಗ ಅದೂ ಕ್ಷೌರ ಮಾಡಿಸಿಕೊಂಡಂತೆ ಕಾಣುವದು. ಅದೇ ರೀತಿ, ಈ ಶರೀರವು ಅಂಧವಿದ್ದರೆ ಅದೂ ಅಂಧವಿರು-ವಂತೆ ತೋರುವದು. ಶರೀರದ ಕಣ್ಣು ಮೂಗು ಸೋರುತ್ತಿದ್ದರೆ ಅದೂ ಹಾಗೆಯೆ ತೋರುವದು. ಈ ಶರೀರದ ನಾಶವಾದೊಡನೆ ಅದೂ ನಾಶ-ಹೊಂದುವದು. ಆದುದರಿಂದ ಇದರಲ್ಲಿ ನಾನು ಯಾವ ಒಳಿತನ್ನೂ ಕಾಣೆ.'

( ೩ ) 'ಇಂದ್ರನೇ, ಇದು ಹೀಗೆಯೇ ಇರುವದು. ಈ ಬಗ್ಗೆ ನಿನಗೆ

ಮತ್ತೆ ತಿಳಿಸಿ ಹೇಳುವೆನು, ಇಲ್ಲಿ ಮತ್ತೆ ಮೂವತ್ತೆರಡು ವರ್ಷ ಇರುವಂಥವನಾಗು' ಎಂದು ಪ್ರಜಾಪತಿಯು ಅವನಿಗೆ ಹೇಳಿದನು. ಇಂದ್ರನು ಮತ್ತೆ ಮೂವತ್ತೆರಡು ವರ್ಷ ಅಲ್ಲಿ ಇದ್ದನು. ಅವನಿಗೆ ಪ್ರಜಾಪತಿಯು ನುಡಿದಷ್ಟು,

೯ ನೆಯ ಖಂಡವು ಸಮಾಪ್ತವು

ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮೇತಿ ಹೋವಾಚೈತದ-
ಮೃತಮಭಯಮೇತದ್ಬ್ರಹ್ಮೇತಿ ಸ ಹ ಶಾಂತಹೃದಯಃ ಪ್ರವವ್ರಾಜ
ಸಹಾಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ತದ್ಯದ್ಯಪೀದಂ ಶರೀರ-
ಮಂಧಂ ಭವತ್ಯನಂಧಃ ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈ-
ಷೋಽಸ್ಯ ದೋಷೇಣ ದುಷ್ಯತಿ ॥ ೧ ॥

ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನಂತಿ ತ್ವೇವೈನಂ
ವಿಚ್ಛಾದಯಂತೀವಾಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಹಮತ್ರ
ಭೋಗ್ಯಂ ಪಶ್ಯಾಮೀತಿ ॥ ೨ ॥

(೧) 'ಸ್ವಪ್ನದಲ್ಲಿ ದೊಡ್ಡಸ್ತಿಕೆಯನ್ನು ಹೊಂದಿ ವಿಹರಿಸುವವನೇ (ಸ್ವಪ್ನಾತ್ಮನು) ಆತ್ಮನು. ಅದೇ ಅಮೃತವು, ಅಭಯವು, ಬ್ರಹ್ಮವು.' ಇದನ್ನು ಕೇಳಿ ಸಮಾಧಾನಹೊಂದಿ ಇಂದ್ರನು ಹೊರಟುಹೋದನು. ಆದರೆ ದೇವತೆಗಳ ಬಳಿ ಹೋಗಿ ಮುಟ್ಟುವಷ್ಟರಲ್ಲಿ ಪುನಃ ಈ ಕೆಳಗಿನ ಸಂಶಯದ ಮೂಲಕ ಅವನ ಮನಸ್ಸಿನಲ್ಲಿ ಭಯವು ಉಂಟಾಯಿತು. 'ಈ ಶರೀರವು ಅಂಧವಾದಾಗ ಅದು (ಸ್ವಪ್ನಾತ್ಮನು) ಅಂಧವಾಗದು, ಶರೀರದ ಕಣ್ಣು ಮೂಗು ಸೋರುತ್ತಿದ್ದರೂ ಅದರಿಂದ ಏನೂ ಸೋರದು, ಶರೀರದೋಷದಿಂದ ಅದು ದೂಷಿತವಾಗದು.

(೨) ಶರೀರದ ವಧವಾದರೂ ಅದು ಸಾಯದು, ಶರೀರದ ಹೊಲಸಿನಿಂದ ಅದು ಹೊಲಸಾಗದು, ಹೀಗಿದ್ದರೂ (ಕನಸಿನಲ್ಲಿ) ಅದನ್ನು (ಸ್ವಪ್ನಾತ್ಮನನ್ನು) ಕೊಂದಂತೆ, ಓಡಿಸಿದಂತೆ, ಭಾಸವಾಗುವದು, ಅವನಿಗೆ ದುಃಖವಾದಂತೆ, ಅವನು ಅತ್ತಂತೆ ತೋರುವದು. ಇದರಲ್ಲಿ ನಾನು ಯಾವ ಒಳಿತನ್ನೂ ಕಾಣೆನು.'

ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ಯ-
ಚ್ಛಾಂತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ ಪುನರಾಗಮ ಇತಿ ಸ
ಹೋವಾಚ ತದ್ಯದ್ಯಪೀದಂ ಭಗವಃ ಶರೀರಮಂಧಂ ಭವತ್ಯನಂಧಃ ಸ
ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ ॥ ೩ ॥

ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನಂತಿ ತ್ವೇವೈನಂ
ವಿಚ್ಛಾದಯಂತೀವಾಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಹ-
ಮತ್ರ ಭೋಗ್ಯಂ ಪಶ್ಯಾಮೀತ್ಯೇವಮೇವೈಷ ಮಘವನ್ನಿತಿ ಹೋವಾ-
ಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ವಸಾಪರಾಣಿ
ದ್ವಾತ್ರಿಂಶತಂ ವರ್ಷಾಣೀತಿ ಸ ಹಾಽಪರಾಣಿ ದ್ವಾತ್ರಿಂಶತಂ ವರ್ಷಾಣ್ಯು-
ವಾಸ ತಸ್ಮೈ ಹೋವಾಚ ॥ ೪ ॥

॥ ಇತಿ ದಶಮಃ ಖಂಡಃ ॥

( ೩ ) ಹೀಗೆಂದು ( ಸಂಶಯ ಪರಿಹಾರಕ್ಕಾಗಿ) ಸಮಿತ್ಪಾಣಿಯಾಗಿ ಆವನು ಮತ್ತೆ ಪ್ರಜಾಪತಿಯ ಬಳಿಗೆ ಹೋದನು. ಆವನು ಅಂದದ್ದು, ' ಹೇ ಇಂದ್ರನೇ, ಸಮಾಧಾನ ಹೊಂದಿ ಹೋದವನು ಮತ್ತೆ ಯಾವ ಇಚ್ಛೆಯಿಂದ ನನ್ನ ಕಡೆಗೆ ಬಂದಿರುವಿ ? " ಇಂದ್ರನು ಅಂದದ್ದು, ' ಭಗವನ್, ಈ ಆತ್ಮವು ( ಸ್ವಪ್ನಾ-ತ್ಮವು ) ಶರೀರವು ಅಂಧವಾದಾಗ ಅಂಧವಾಗದು. ಶರೀರದ ಕಣ್ಣು ಮೂಗು ಗಳಿಂದ ಹೊಲಸು ಸೋರುತ್ತಿದ್ದರೂ ಇದರಿಂದ ಏನೂ ಸೋರದು, ಶರೀರ ದೋಷಗಳಿಂದ ಇದು ದೂಷಿತವಾಗದು.

( ೪ ) ಶರೀರದ ವಧವಾದರೂ ಇದು ಸಾಯದು, ಶರೀರದ ಹೊಲಸಿನಿಂದ ಆದು ಹೊಲಸಾಗದು. ಹೀಗಿದ್ದರೂ ( ಕನಸಿನಲ್ಲಿ ) ಆದನ್ನು ( ಸ್ವಪ್ನಾತ್ಮ-ನನ್ನು ) ಕೊಂದಂತೆ ಓಡಿಸಿದಂತೆ ಭಾಸವಾಗುವದು. ಆದಕ್ಕೆ ದುಃಖವಾದಂತೆ, ಅದು ಅತ್ತಂತೆ ತೋರುವದು. ಆದರಲ್ಲಿ ನಾನು ಯಾವ ಒಳಿತನ್ನೂ ಕಾಣೆ. ' ' ಇಂದ್ರನೇ, ಇದು ಹೀಗೆಯೆ ಇರುವದು. ಈ ಬಗ್ಗೆ ನಿನಗೆ ಪುನಃ ತಿಳಿ ಹೇಳುವೆನು. ಇನ್ನೊಂದು ಮೂವತ್ತೆರಡು ವರ್ಷ ನನ್ನ ಬಳಿ ಇರು ' ಎಂದು ಪ್ರಜಾಪತಿಯು ಇಂದ್ರನಿಗೆ ಹೇಳಿದನು. ಇಂದ್ರನು ಆ ಪ್ರಕಾರ ಮತ್ತೆ ಮೂವತ್ತೆರಡು ವರ್ಷ ಅಲ್ಲಿ ಇದ್ದನು. ಆವನಿಗೆ ಪ್ರಜಾಪತಿಯು ಅಂದದ್ದು,

೧೦ ನೆಯ ಖಂಡವು ಸಮಾಪ್ತವು

ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷನ್ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ನೋಪಜನꣳ ಸ್ಮರನ್ನಿದꣳ ಶರೀರꣳ ಸ ಯಥಾ ಪ್ರಯೋಗ್ಯ ಆಚರಣೇ ಯುಕ್ತ ಏವಮೇವಾಯಮಸ್ಮಿꣳ-ಚ್ಛರೀರೇ ಪ್ರಾಣೋ ಯುಕ್ತಃ ॥ ೩ ॥

ಅಥ ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಗಂಧಾಯ ಘ್ರಾಣಮಥ ಯೋ ವೇದೇದಮಭಿವ್ಯಾಹರಾಣೀತಿ ಸ ಆತ್ಮಾಭಿವ್ಯಾಹಾರಾಯ ವಾಗಥ ಯೋ ವೇದೇದꣳ ಶೃಣವಾನೀತಿ ಸ ಆತ್ಮಾ ಶ್ರವಣಾಯ ಶ್ರೋತ್ರಂ ॥ ೪ ॥

ಸಿಡಿಲು, ಇವೆಲ್ಲ ಅಶರೀರವಿರುವವು. ಇವೆಲ್ಲ ಆಕಾಶದಾಚೆಗೆ ಹೋಗಿ ಪರಮ-ಜ್ಯೋತಿಯಲ್ಲಿ ಸೇರಿ ಅಲ್ಲಿ ಸ್ವಸ್ವರೂಪದಿಂದ ಕಂಗೊಳಿಸುವಂತೆ,

( ೩ ) ಈ ಪ್ರಸನ್ನಾತ್ಮನು ಈ ಶರೀರದಿಂದ ಹೊರಟು ಪರಮಜ್ಯೋತಿಯಲ್ಲಿ ಒಂದಾಗಿ ಸ್ವಸ್ವರೂಪದಿಂದ ಕಂಗೊಳಿಸುವನು. ಅವನೇ ಉತ್ತಮ ಪುರುಷನು. ಅಲ್ಲಿ ಅವನು ತಾನು ಹುಟ್ಟಿದ ಶರೀರವನ್ನು ನೆನಪಿಗೆ ತಾರದೆ ಸ್ತ್ರೀಯರೊಡನೆ, ವಾಹನಗಳೊಡನೆ, ಸಂಬಂಧಿಕರೊಡನೆ ನಗುತ್ತ ಕೆಲೆಯುತ್ತ, ಆಡುತ್ತ, ಆನಂದಿಸುತ್ತ, ವಿಹರಿಸುವನು. ರಥಕ್ಕೆ ಕುದುರೆಯು ಹೂಡಲ್ಪಟ್ಟಂತೆ ಈ ಶರೀರಕ್ಕೆ ಪ್ರಾಣವು ಹೂಡಲ್ಪಟ್ಟಿದೆ.

( ೪ ) ಇನ್ನು ಯಾವಲ್ಲಿ ಈ ಕಣ್ಣು ಆಕಾಶದಲ್ಲಿ ( ಕಣ್ಣಿನಲ್ಲಿಯ ಆಕಾಶ ) ಸೇರಿರುವದೊ ಅದೇ ಚಾಕ್ಷುಷ ಪುರುಷನ ಸ್ಥಾನವು. ಅವನಿಗೆ ಕಾಣಬೇಕೆಂದು ಈ ಕಣ್ಣು ಇರುವದು. ನಾನು ಮೂಸಿನೋಡಬೇಕು, ಎಂಬ ಅರಿವು ಇದ್ದವನು ಆತ್ಮನು. ಅವನು ಮೂಸಿನೋಡುವುದರ ಸಲುವಾಗಿ ಮೂಗು ಇರುವದು. ನಾನು ಮಾತಾಡಬೇಕು ಎಂಬ ಅರಿವು ಇದ್ದವನು ಆತ್ಮನು. ಅವನು ಮಾತಾಡುವ ಸಲುವಾಗಿ ವಾಣಿ ಇರುವದು. ನಾನು ಕೇಳಬೇಕು ಎಂಬ ಅರಿವು ಇದ್ದವನು ಆತ್ಮನು. ಅವನು ಕೇಳುವ ಸಲುವಾಗಿ ಕಿವಿಯು ಇರುವದು.

ಅಥ ಯೋ ವೇದೇದಂ ಮನ್ವಾನೀತಿ ಸ ಆತ್ಮಾ ಮನೋಽಸ್ಯ ದೈವಂ
ಚಕ್ಷುಃ ಸ ವಾ ಏಷ ಏತೇನ ದೈವೇನ ಚಕ್ಷುಷಾ ಮನಸೈತಾನ್
ಕಾಮಾನ್ ಪಶ್ಯನ್ ರಮತೇ || ೫ ||

ಯ ಏತೇ ಬ್ರಹ್ಮಲೋಕೇ ತಂ ವಾ ಏತಂ ದೇವ ಆತ್ಮಾನಮುಪಾಸತೇ
ತಸ್ಮಾತ್ತೇಷಾಂ ಸರ್ವೇ ಚ ಲೋಕಾ ಆತ್ತಾಃ ಸರ್ವೇ ಚ ಕಾಮಾಃ ಸ
ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯಸ್ತಮಾತ್ಮಾನ-
ಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ಪ್ರಜಾಪತಿರುವಾಚ || ೬ ||

|| ಇತಿ ದ್ವಾದಶಃ ಖಂಡಃ ||

( ೫ ) ನಾನು ಮನನ ಮಾಡಬೇಕು, ಎಂಬ ಅರಿವು ಇದ್ದವನು ಆತ್ಮನು. ಮನಸು ಅವನ ದೈವೀಕಣ್ಣು ಇರುವದು. ಈ ದೈವೀಕಣ್ಣಾದ ಮನಸಿನಿಂದ ಕಾಮನೆಗಳನ್ನು ನೋಡಿ ಅವನು ಆನಂದಿಸುವನು.

( ೬ ) ಬ್ರಹ್ಮಲೋಕದಲ್ಲಿರುವವರು, ದೇವತೆಗಳು, ಈ ಆತ್ಮನನ್ನು ಕುರಿತು ಉಪಾಸಿಸುವರು. ಆದುದರಿಂದ ಅವರು ಎಲ್ಲ ಲೋಕಗಳನ್ನು, ಕಾಮನೆಗಳನ್ನು ಪಡೆಯುವರು. ಈ ಆತ್ಮನನ್ನರಿತು ಪಡೆದವನು ಸರ್ವಕಾಮನೆಗಳನ್ನು, ಲೋಕಗಳನ್ನು ಪಡೆಯುವನು.' ಇದು ಪ್ರಜಾಪತಿಯು ನುಡಿದದ್ದು, ನುಡಿದದ್ದು.

೧೨ ನೆಯ ಖಂಡವು ಸಮಾಪ್ತವು

ಶ್ಯಾಮಾಚ್ಛಬಲಂ ಪ್ರಪದ್ಯೇ ಶಬಲಾಚ್ಛ್ಯಾಮಂ ಪ್ರಪದ್ಯೇಽಶ್ವ ಇವ
ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ಪ್ರ-
ಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿ-
ಸಂಭವಾಮೀತ್ಯಭಿಸಂಭವಾಮೀತಿ || ೧ ||

|| ಇತಿ ತ್ರಯೋದಶಃ ಖಂಡಃ ||

( ೧ ) ಶ್ಯಾಮದಿಂದ ( ಅಜ್ಞೇಯವಿರುವದರಿಂದ ಶ್ಯಾಮದಂತೆ ಇರುವ ಹೃದಯಸ್ಥ ಬ್ರಹ್ಮನಿಂದ) ನಾನು ಶಬಲಕ್ಕೆ ( ವಿವಿಧವಿರುವ ಬ್ರಹ್ಮ ಲೋಕಕ್ಕೆ ) ಬರುವೆನು. ಶಬಲದಿಂದ ಪುನಃ ಶ್ಯಾಮಕ್ಕೆ ಹೋಗುವೆನು. ಕುದುರೆಯು ತನ್ನ ಕೂದಲುಗಳನ್ನು ಝಾಡಿಸುವಂತೆ ಪಾಪಗಳನ್ನೆಲ್ಲ ಝಾಡಿಸಿ

ರಾಹುವುುಖದಿಂದ ಮುಕ್ತನಾದ ಚಂದ್ರನಂತೆ ಶರೀರವನ್ನು ಚಲ್ಲಿ ಬಿಟ್ಟು ಕೃತಕೃತ್ಯನಾಗಿ ಸ್ವಯಂಭುವಾದ ಬ್ರಹ್ಮಲೋಕಕ್ಕೆ ಹೋಗುವೆನು, ಬ್ರಹ್ಮ-ಲೋಕಕ್ಕೆ ಹೋಗುವೆನು.

೧೩ನೆಯ ಖಂಡವು ಸಮಾಪ್ತವು

ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತꣳ ಸ ಆತ್ಮಾ ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ ಯಶೋಽಹಂ ಭವಾಮಿ ಬ್ರಾಹ್ಮಣಾನಾಂ ಯಶೋ ರಾಜ್ಞಾಂ ಯಶೋ ವಿಶಾಂ ಯಶೋಽಹಮನುಪ್ರಾಪತ್ಸಿ ಸ ಹಾಹಂ ಯಶಸಾಂ ಯಶಃ ಶ್ಯೇತಮದತ್ಕಮದತ್ಕꣳ ಶ್ಯೇತಂ ಲಿಂದುಮಾಭಿಗಾಂ ಲಿಂದುಮಾಭಿಗಾಂ ॥ ೧ ॥

॥ ಇತಿ ಚತುರ್ದಶಃ ಖಂಡಃ ॥

( ೧ ) ಆಕಾಶವೆಂಬುದು ನಾಮರೂಪಗಳನ್ನು ವ್ಯಕ್ತಮಾಡುವದು. ಈ ನಾಮರೂಪಗಳು ಯಾತರಲ್ಲಿರುವವೊ ಅದು ಬ್ರಹ್ಮವು, ಅಮೃತವು, ಆತ್ಮವು. ನಾನು ಪ್ರಜಾಪತಿಯ ಸಭಾಗೃಹವನ್ನು, ಮನೆಯನ್ನು ಮುಟ್ಟಿದೆನು. ನಾನು ಬ್ರಾಹ್ಮಣರ ಯಶಸ್ಸು, ಕ್ಷತ್ರಿಯರ ಯಶಸ್ಸು, ವೈಶ್ಯರ ಯಶಸ್ಸು ಆಗುವೆನು. ಆ ಯಶಸ್ಸನ್ನು ನಾನು ಪಡೆಯಲಿಚ್ಛಿಸುವೆನು. ನಾನು ಯಶಸ್ಸಿನ ಯಶಸ್ಸು ಇರುವೆನು. ನಾನು ಎಂದಿಗೂ ಆ ಕೆಂಪು ಮತ್ತು ದಂತರಹಿತವಿದ್ದರೂ ಸರ್ವಭಕ್ಷಕವಾದ ಜಾರಗುಂಡಿಯಂತಿರುವ ಸ್ಥಾನಕ್ಕೆ ( ಸ್ತ್ರೀಯೋನಿಗೆ) ಹೋಗದಿರಲಿ.

೧೪ ನೆಯ ಖಂಡವು ಸಮಾಪ್ತವು

ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯ ಆಚಾರ್ಯಕುಲಾದ್ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣಾಭಿಸಮಾವೃತ್ಯ ಕುಟುಂಬೇ ಶುಚೌ ದೇಶೇ

( ೧ ) ಇದನ್ನು ( ಈ ಕೆಳಗಿನ ಜ್ಞಾನವನ್ನು ) ಬ್ರಹ್ಮನು ಪ್ರಜಾಪತಿಗೆ, ಪ್ರಜಾಪತಿಯ ಮನುವಿಗೆ, ಅವನು ಪ್ರಜೆಗಳಿಗೆ ಹೇಳಿದನು. ಗುರುಕುಲದಲ್ಲಿರುವಾಗ ಗುರುಸೇವೆ ಮಾಡಿ ಉಳಿದ ವೇಳೆಯಲ್ಲಿ ಯಥಾವಿಧಿ ವೇದಾಧ್ಯಯನ-ವನ್ನು ತೀರಿಸಿದ ಬಳಿಕ ಗುರುಗಳ ಅಪ್ಪಣೆಯನ್ನು ಪಡೆದು, ಗೃಹಸ್ಥಾಶ್ರಮ

ಸ್ವಾಧ್ಯಾಯ ಮಧೀಯಾನೋ ಧಾರ್ಮಿಕಾನ್ವಿದಧದಾತ್ಮನಿ ಸರ್ವೇಂದ್ರಿ-
ಯಾಣಿ ಸಂಪ್ರತಿಷ್ಠಾಪ್ಯಾಹಿಂಸನ್ತ್ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯಃ ಸ
ಖಲ್ವೇವಂ ವರ್ತಯನ್ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ
ನ ಚ ಪುನರಾವರ್ತತೇ ನ ಚ ಪುನರಾವರ್ತತೇ ॥ ೧ ॥

॥ ಇತಿ ಪಂಚದಶಃ ಖಂಡಃ ॥

ಇತ್ಯಷ್ಟಮಃ ಪ್ರಪಾಠಕಃ ಸಮಾಪ್ತಃ

ದಲ್ಲಿದ್ದು, ಪುತ್ರಸ್ಥಾನದಲ್ಲಿ ವೇದ ಪಠನ ಮಾಡುತ್ತಿರುವ ಮತ್ತು ಮಕ್ಕಳನ್ನೂ ಶಿಷ್ಯರನ್ನೂ ಪಡೆದ ಹಾಗೂ ಶಾಸ್ತ್ರವಿಹಿತ ದೇಶಕಾಲಗಳಲ್ಲಿಯಲ್ಲದೆ ಇನ್ನಾವಾಗ್ಯೂ ಹಿಂಸೆಯನ್ನು ಮಾಡದೆ ಇದ್ದ ಮನುಷ್ಯನು—ಈ ರೀತಿ ಇಡೀ ಜೀವನವನ್ನು ಕಳೆಯುವ ಮನುಷ್ಯನು ಬ್ರಹ್ಮಲೋಕವನ್ನು ಪಡೆಯುವನು. ಆವನು ಪುನರ್ಜನ್ಮವನ್ನು ಹೊಂದನು, ಪುನರ್ಜನ್ಮವನ್ನು ಹೊಂದನು.

೧೫ ನೆಯ ಖಂಡವು ಸಮಾಪ್ತವು

ಎಂಟನೇ ಅಧ್ಯಾಯವು ಸಮಾಪ್ತವು

ಛಾಂದೋಗ್ಯ ಉಪನಿಷತ್ತು ಸಂಪೂರ್ಣವು

ಓಂ ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮಥೋ
ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ಮಾಹಂ
ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮನಿರಾಕರೋದನಿರಾಕರಣ-
ಮಸ್ತ್ವನಿರಾಕರಣಂ ಮೇಽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು
ಧರ್ಮಾಸ್ತೇ ಮಯಿಂತು ತೇ ಮಯಿ ಸಂತು

॥ ಓಂ, ಶಾಂತಿಃ ಶಾಂತಿಃ ಶಾಂತಿಃ ॥

ಇತಿ ಛಾಂದೋಗ್ಯೋಪನಿಷತ್ಸಂಪೂರ್ಣಾ

# ಶುದ್ಧಿಪತ್ರ

ಟಿಪ್ಪಣಿ :- ಅರ್ಥವು ಕೆಡುವಂತೆ ಇದ್ದಲ್ಲಿ ಮಾತ್ರ ತಿದ್ದಲಾಗಿದೆ. ಉದಾಹರಣಾರ್ಥವಾಗಿ ಸಂಸ್ಕೃತ ದೀರ್ಘದ ಚಿಹ್ನವಾದ 'ಃ' ಇದು ಕನ್ನಡ ಲಿಪಿಯಲ್ಲಿ ಎಷ್ಟೋ ಕಡೆಗೆ ಬರೆಯಲಾಗಿಲ್ಲ. ಅದನ್ನು ತಿದ್ದಿಲ್ಲ. ಅದೇ ರೀತಿ ಶಬ್ದಗಳನ್ನು ಜೋಡಿಸಿ ಇಲ್ಲವೆ ಬಿಡಿಸಿ ಬರೆಯುವಲ್ಲಿ ಅದ ತಪ್ಪುಗಳನ್ನು ತಿದ್ದಿಲ್ಲ.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೬ | ೧೪ | ವಿದಧ್ವಸುರ್ಯಥಾಶ್ಮಾನ | ವಿದಧ್ವಃ ಸುರ್ಯಥಾಶ್ಮಾನ |
| ೯ | ೯ | ಯರ್ಕ್ತತ್ಸಾಮ | ಯದೃಕ್ತತ್ಸಾಮ |
| ೯ | ೧೮ | ಪ್ರಾಣಿಯು | ಪ್ರಾಣಿಯು |
| ೨೪ | ೧೪ | ಜವೆಗೋದಿಗಳಿರುವವು,' | ಜವೆಗೋದಿಗಳಿರುವವು ' |
| ೨೮ | ೧ | ಯಧ್ಯೈವೇದಂ | ಯಥೈವೇದಂ |
| ೩೨ | ೧೦ | ( ಹಿಂಕಾರ ) | ( ಹಿಂಕಾರ, |
| ೩೯ | ೨೦ | ಪ್ರಾಣಂಗತನಾಮವನು, | ಪ್ರಾಣವಂತನಾಗುವನು, |
| ೫೯ | ೬ | ರಸನಾಃ | ರಸಾನಾಃ |
| ೬೯ | ೩ | ಪ್ರತಿಪ್ರದ್ಯತೇ | ಪ್ರತಿಪದ್ಯತೇ |
| ೮೨ | ೨೦ | ಇನ್ನೊಂದು | ಇನ್ನೊಂದು |
| ೮೪ | ೧೦ | ರೈಕೇದಃ | ರೈಕ್ವೇದಃ |
| ೮೫ | ೨೫ | ಅಧಿದೈವತವು | ಅಧಿದೈವತವು |
| ೧೧೨ | ೬ | ಶಕ್ತಿಗಳಿಲ್ಲಿದ್ದ | ಶಕ್ತಿಗಳಲ್ಲಿದ್ದ |
| ೧೧೫ | ೧೬ | ಪಥೋರ್ದ್ಯೇವಯಾನಸ್ಯ | ಪಥೋದೇವಯಾನಸ್ಯ |
| ೧೨೪ | ೨೨ | ಸ್ವೈರಣಿಯ- | ಸ್ವೈರಿಣಿಯ- |
| ೧೨೫ | ೨೦ | ಪ್ರಸೂತ | ಪ್ರಸುತ |
| ೧೨೯ | ೭ | ಆತ್ಮನನ್ನು ಪಾಶಿಸುವನು | ಆತ್ಮನನ್ನು ಪಾಸಿಸುವನು |
| ೧೩೩ | ೧೧ | ತರ್ಜನ್ಯವು, | ಪರ್ಜನ್ಯವು, |
| ೧೩೮ | ೨೧ | ಪ್ರತಿಪಾದಸಿ | ಪ್ರತಿಪಾದಿಸಿ |
| ೧೪೨ | ೨೪ | ಕಾಲು ಅಪ್ಪು, | ಕಾಲು ಅಪ್ಪು + ಕಾಲು ಅನ್ನ, |
| ೧೪೩ | ೨ | ದೇವತಾಸ್ತ್ರಿವೃಂತಿವೃದೇಕೈತಾ | ದೇವತಾಸ್ತ್ರಿವೃತ್ತ್ರಿವೃದೇಕೈಕಾ |
| ೧೪೩ | ೧೨ | ಯತ್ಕೃಷಂ | ಯತ್ಕೃಷ್ಣಂ |
| ೧೪೫ | ೧ | ಯದ್ವದ್ವಿಜ್ಞಾತ | ಯದ್ವವಿಜ್ಞಾತ |

| | | | |
|---|---|---|---|
| ೧೪೫ | ೩ | ತ್ರಿವೃಂತ್ರಿವೃದೇಕ್ಕೈಕಾ | ತ್ರಿವೃತ್ತ್ರಿವೃದೇಕ್ಕೈಕಾ |
| ೧೪೬ | ೧೬ | ಸೋಮ್ಯಾಸ್ಯಮಾನಸ್ಯ | ಸೋಮ್ಯಾಶ್ಯಮಾನಸ್ಯ |
| ೧೪೭ | ೧೦ | ಮಾಸೀಃ | ಮಾಶೀಃ |
| ೧೪೭ | ೨೪ | ಕೇತವು | ಕೇತುವು |
| ೧೫೦ | ೧೦ | ಪುರಷನು | ಪುರುಷನು |
| ೧೫೦ | ,, | ಇಚ್ಛೆಯುಳ್ಳನಾದರೆ | ಇಚ್ಛೆಯುಳ್ಳವನಾದರೆ |
| ೧೫೦ | ೧೧ | ಒಯ್ಯುವರು. | ಒಯ್ಯುವದು. |
| ೧೫೧ | ೫ | ತ್ರಿವೃಂತ್ರಿವೃದೇಕ್ಕೈಕಾ | ತ್ರಿವೃತ್ತ್ರಿವೃದೇಕ್ಕೈಕಾ |
| ೧೫೧ | ೯ | ಸ ಆತ್ಮಾ | ಸ ಆತ್ಮಾ |
| ೧೫೪ | ೧೯ | ಆ ನಂದಿಸುತ್ತ | ಆನಂದಿಸುತ್ತ |
| ೧೫೭ | ೧೭ | ನನ್ನನ್ನು ಕಟ್ಟಿ | ನನ್ನನ್ನು ಕಣ್ಣು ಕಟ್ಟಿ |
| ೧೫೯ | ೨೦ | ಇದ್ದದ್ದಾರೆ | ಇದ್ದದ್ದಾದರೆ |
| ೧೬೧ | ೨೯ | ಲ್ಲದು, ಎಂಬದು | ಬಲ್ಲದು, ಎಂದು |
| ೧೬೯ | ೨೭ | ಮಿಕ್ಕವರ | ಮಿಕ್ಕವರು |
| ೧೭೦ | ೧೫ | ಯುಜುರ್ವೇದಲ್ಲಿ | ಯಜುರ್ವೇದಲ್ಲಿ |
| ೧೮೭ | ೧೨ | ಅವನನ್ನರತು | ಅವನನ್ನರಿತು |
| ೧೯೧ | ೭ | ಸಂಕಲ್ಪಾ ದೇವಾಸ್ಯ | ಸಂಕಲ್ಪಾದೇವಾಸ್ಯ |
| ೧೯೪ | ೧೧ | ತರಂಜ್ಯೋತಿಯನ್ನು | ಪರಂಜ್ಯೋತಿಯನ್ನು |
| ೧೯೬ | ೧೫ | ಸತ್ರಾಯಣವೆಂತೆನ್ನುವರೊ | ಸತ್ರಾಯಣವೆಂದೆನ್ನುವರೊ |
| ೨೦೭ | ೨೩ | ಆ ಶರೀರ | ಆಶರೀರ |

2048-53-1000 ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ

# ಈ ಪುಸ್ತಕದಲ್ಲಿ - - -

ಆತ್ಮಜ್ಞಾನ, ಆತ್ಮಜ್ಞಾನಿಯ ಗತಿ ಮೋಕ್ಷ-ಸ್ವರೂಪ ಮುಂತಾದವುಗಳನ್ನು ವಿವರಿಸಿ ಆ ಧ್ಯೇಯಸಾಧನೆಗಾಗಿ ಉಪಾಸನಾಮಾರ್ಗ ನಿವೃತ್ತಿಪರ ಜ್ಞಾನಮಾರ್ಗ ಹಾಗೂ ನಿಷ್ಕಾಮ ವೃತ್ತಿಯ ಮಹತ್ವವನ್ನು ಹೇಳಿ ಕರ್ಮ-ಮಾರ್ಗಕ್ಕಿಂತ ಜ್ಞಾನಮಾರ್ಗವು ಶ್ರೇಷ್ಠ-ವಾದರೂ ಅದನ್ನು ತ್ಯಜಿಸಿದರೆ ಆತ್ಮಜ್ಞಾನವು ಹೇಗೆ ಸಫಲವಾಗುವದಿಲ್ಲೆಂಬುದನ್ನು ಕೆಲವು ಸುಂದರವಾದ ಕಥೆಗಳಿಂದ ಉದಹರಿಸಿದ್ದಾರೆ.

ಪ್ರತಿಯೊಬ್ಬ ಜೀವಿಯಲ್ಲಿ ಸುಪ್ತವಾಗಿರುವ ಆತ್ಮನನ್ನು ಜಾಗೃತಗೊಳಿಸಿ ಆತನಿಗೆ ಆತ್ಮ-ಜ್ಞಾನ ಮಾಡಿಕೊಳ್ಳಲು ದಶೋಪನಿಷತ್ತುಗಳು ಆರ್ಯರಿಂದ ದಯಪಾಲಿಸಲ್ಪಟ್ಟ ಅಮೌಲ್ಯ ಕೈದೀವಿಗೆಗಳು. ಅವುಗಳಲ್ಲಿ ಇದೊಂದು ಮುಖ್ಯವಾದದ್ದು.

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ